ಶ್ರೀ

ಫಲಜ್ಯೋತಿಷ್ಯ ಜ್ಯೋತಿರ್ಮಾಲಾ— ನಕ್ಷತ್ರ : ೬

# ಉದ್ಯೋಗ ಜ್ಯೋತಿಷ್ಯ

## ಭಾಗ ೧



ಲೇಖಕರು :
ಶ್ರೀ. ಎನ್. ಕೆ. ಜೋಗಳೇಕರ
ಧಾರವಾಡ



ಪ್ರಕಾಶಕರು :
ಶ್ರೀ. ಎನ್. ಕೆ. ಜೋಗಳೇಕರ,
ತೇಜಸ್ವಿನಗರ, ಧಾರವಾಡ – ೨
580 002

# ಅರ್ಪಣೆ

ಸಂಸ್ಕೃತ ಹಾಗು ಆಂಗ್ಲ
ಜ್ಯೋತಿಷ್ಯ ಪಾರಂಗತರೂ,
ಜ್ಞಾನವೃದ್ದರೂ,
ವಯೋವೃದ್ಧರೂ,
ನನಗೆ ಸ್ಫೂರ್ತಿಯ ಶೆಲೆಯೂ ಆದ
ಪಂ. ಕೇಶವಶರ್ಮಾ ಗಲಗಲಿ
ಅವರಿಗೆ

# ಆತ್ಮನಿವೇದನೆ

## ಪ್ರಥಮ ಆವೃತ್ತಿಯ ಪ್ರಸ್ತಾವನೆ

---

ಸಿರಿಗನ್ನಡದ ವಾಚಕರಿಗೆ ಫಲಜ್ಯೋತಿಷ್ಯ ಜೋತಿರ್ಮಾಲೆಯ ೬ನೆಯ ನಕ್ಷತ್ರವಾದ "ಉದ್ಯೋಗ ಜ್ಯೋತಿಷ್ಯ ಭಾಗ ೧" ಎಂಬ ಬೃಹತ್ ಗ್ರಂಥವನ್ನು ಒದಗಿಸುವಂತಹ ಸುಯೋಗ ಬಂದುದಕ್ಕೆ ಆನಂದವೆನಿಸುತ್ತದೆ.

೧೯೬೦ ರಲ್ಲಿ ಪ್ರಕಟಿಸಿದ ಐದನೆಯ ಗ್ರಂಥವಾದ "ಆಕಸ್ಮಿಕ ಧನ-ಯೋಗ" ದ ನಂತರ ಅಂದರೆ ಸುಮಾರು ನಾಲ್ಕು ವರ್ಷಗಳ ನಂತರ ಈ ಗ್ರಂಥವನ್ನು ಪ್ರಕಟಿಸುತ್ತಿರುವೆ. ಸಾಮಾನ್ಯವಾಗಿ ವರ್ಷಕ್ಕೊಂದಾದರೂ ಫಲಜ್ಯೋತಿಷ್ಯ ಶಾಸ್ತ್ರಕ್ಕೆ ಮೀಸಲಾದ ಗ್ರಂಥವನ್ನು ಬರೆಯಬೇಕೆಂಬ ಉದ್ದೇಶವನ್ನೇನೊ ಇರಿಸಿಕೊಂಡಿದ್ದೆ. ಆದರೆ ೧೯೬೧-೬೨ ರಲ್ಲಿ ಜ್ಯೋತಿಷ್ಯ ಶಾಸ್ತ್ರಕ್ಕೆ ಮೀಸಲಾದ "ಜ್ಯೋತಿರ್ವಾಣಿ" ಎಂಬ ಮಾಸಪತ್ರಿಕೆಯ ಪ್ರಕಟನೆಯುಂ ನನ್ನ ಮೊದಲಿನ ಉದ್ದೇಶಕ್ಕೆ ಅಡೆತಡೆಯನ್ನುಂಟುಮಾಡಿತೆಂದು ಹೇಳಲು ಅಡ್ಡಿಯಿಲ್ಲ.

ಪ್ರಸ್ತುತ ಈ ಗ್ರಂಥವನ್ನು ಬರೆಯಲು ಈರ್ವರೇ ಕಾರಣೀಭೂತರು. ಮೊದಲನೆಯದಾಗಿ ನನ್ನ ಅಣ್ಣಂದಿರಾದ ಶ್ರೀ ಎಮ್. ಕೆ. ಜೋಗಳೇಕರ ಬಿರುನುಡಿಗಳೇ ಈ ಗ್ರಂಥವನ್ನು ಬರೆಯಲು ಕಾರಣವಾಯಿತೆಂದರೂ ತಪ್ಪಾಗಲಿಕ್ಕಿಲ್ಲ. ನನ್ನ "ವಧೂವರರ ಜ್ಯೋತಿಷ್ಯ" ಹಾಗೂ "ಪಂಚಾಂಗ ಪ್ರದೀಪ" ಈ ಎರಡು ಗ್ರಂಥಗಳನ್ನು ಓದಿದಮೇಲೆ ಅವರು ಈ ರೀತಿ ನುಡಿದಿದ್ದರು. "ನಿನ್ನ ಈ ಎರಡೂ ಗ್ರಂಥಗಳಲ್ಲಿ ನಾವೀನ್ಯತೆಯಾಗಲಿ,ಸಂಶೋಧನೆ

ಯಾಗಲಿ (Neither research nor novelty) ಕಂಡುಬಂದಿಲ್ಲ." ಅವರ ಈ ಕಟುವಿಮರ್ಶೆಯೇ ನನ್ನನ್ನು ಈ ಗ್ರಂಥವನ್ನು ಬರೆಯುಹಚ್ಚಿತು.

ಎರಡನೆಯದಾಗಿ "ಜ್ಯೋತಿರ್ವಾಣಿ" ಮಾಸಪತ್ರಿಕೆಯಲ್ಲಿ ಪ್ರತಿ ತಿಂಗಳೂ ಒಂದೊಂದು ಉದ್ಯೋಗ ( Different Department ) ದ ವಿಷಯವಾಗಿ ಬರೆದು, ತದನಂತರ ಅದನ್ನೇ "ಉದ್ಯೋಗ ಜ್ಯೋತಿಷ್ಯ"ವೆಂಬ ಗ್ರಂಥರೂಪದಲ್ಲಿ ಪ್ರಕಟಿಸಬೇಕೆಂಬ ಯೋಜನೆಯನ್ನೇನೋ ಇಟ್ಟುಕೊಂಡಿದ್ದೆ. ಆದರೆ ಕೆಲವೊಂದು ಅನಿವಾರ್ಯ ಕಾರಣಕ್ಕಾಗಿ "ಜ್ಯೋತಿರ್ವಾಣಿ" ನಿಲ್ಲಿಸಲಾಗಿದ್ದರಿಂದ, ಪ್ರತ್ಯೇಕವಾಗಿ ಇದನ್ನೇ ಗ್ರಂಥರೂಪದಲ್ಲಿ ಪ್ರಕಟಿಸಲು ಒಂದು ಕಾರಣವಾಯಿತು.

ಹೆಸರಿಗನುಗುಣವಾಗಿ ಪ್ರಸ್ತುತ ಗ್ರಂಥದಲ್ಲಿ "ಉದ್ಯೋಗ"ದ ವಿಷಯವಾಗಿಯೇ ಜ್ಯೋತಿಷ್ಯಶಾಸ್ತ್ರದ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ. ಸದ್ಯದ ಪರಿಸ್ಥಿತಿಗನುಗುಣವಾಗಿ, ನಾವು ಇಂದು ಕಾಣುತ್ತಿರುವ ಸರಕಾರಿ, ಖಾಸಗಿ ಹಾಗೂ ಇತರ ವಿವಿಧ ಉದ್ದಿಮೆ, ಉದ್ಯೋಗಗಳ ನಾನಾಮುಖವಾದ ಅಂಕಿ-ಸಂಖ್ಯೆಗಳನ್ನು ತಿಳಿದುಕೊಂಡು, ಅಲ್ಲದೆ ಮುಂಬೈ, ಬೆಂಗಳೂರು, ಪುಣೆ, ಮಂಗಳೂರು ಮೊದಲಾದ ಪ್ರಮುಖ ಪಟ್ಟಣಗಳಿಗೆ ಸ್ವತಃ ಹೋಗಿ ಅಲ್ಲಿಯ ವಿವಿಧ ಉದ್ದಿಮೆಗಳ, ಕಾರಖಾನೆಗಳ, ಖಾತೆಗಳ ಉಚ್ಚ ಹಾಗೂ ಕೆಳದಿನ ನವಕರ ವರ್ಗದವರನ್ನು ಕಂಡು ಅವರ ನಿತ್ಯಜೀವನ, ಉದ್ಯೋಗದ ಕಲ್ಪನೆ ಬಡ್ತಿ ಹಾಗೂ ಇತರ ವಿಷಯಗಳನ್ನು ಅರಿತುಕೊಂಡು ಫಲಜ್ಯೋತಿಷ್ಯ ನಿಯಮಗಳನ್ನು ರಚಿಸಲಾಗಿದೆ.

ಇಂದು ಪ್ರಮುಖವಾಗಿ ಇದೇ ತಾನೇ ಶಾಲೆ, ಕಾಲೇಜುಗಳ ಅಭ್ಯಾಸ ಮುಗಿಸಿ ಉದ್ಯೋಗದ ಹೊಸ ಜೀವನದಲ್ಲಿ ಕಾಲಿರಿಸುವ ನಮ್ಮ ನವಯುವಕರನ್ನು ಕಾಡುತ್ತಿರುವ ಜಟಿಲ ಸಮಸ್ಯೆ ಎಂದರೆ ಉದ್ಯೋಗ ಸಮಸ್ಯೆ. ಯಾವ ಉದ್ಯೋಗ ಹಿಡಿಯಬೇಕು, ಎಲ್ಲಿ ನವಕರಿ ಸೇರಬೇಕು, ಯಾವ ಖಾತೆ ಯೋಗ್ಯವಾದೀತು, ಎಂತಹ ಹುದ್ದೆ ತನಗೆ ಸಿಗಬಹುದು ಇವೇ ಮೊದಲಾದ ಸಮಸ್ಯೆಗಳಿಗೆ ಪರಿಹಾರವನ್ನು ಒದಗಿಸಲು ಸರಕಾರ ಹಾಗೂ ಸಮಾಜ

ಶಾಸ್ತ್ರಜ್ಞರ ಸಲಹೆಗಳಷ್ಟೇ ಜ್ಯೋತಿರ್ವಿದರ (Astrologers) ಸಹಾಯವೂ ಸಹ ಇಲ್ಲಿ ಬಹಳಷ್ಟು ಆಗುವದೆಂದು ನನ್ನ ಅಭಿಪ್ರಾಯ. ಅವರೂ ಕೂಡಾ ಜ್ಯೋತಿಷ್ಯಶಾಸ್ತ್ರದ ಬಲದಿಂದ ಎಂತಹ ಜಟಿಲವಾದ ಸಮಸ್ಯೆಯನ್ನೂ ಬಿಡಿಸಬಲ್ಲರು. ಇದೇ ಕಾರಣದಿಂದ ಉದ್ಯೋಗಾರ್ಥಿಗಳಿಗೆ ಕೈದೀವಿಗೆಯಂತೆ ಮಾರ್ಗದರ್ಶನವಾಗಬೇಕೆಂಬ ಉದ್ದೇಶದಿಂದ ಉದ್ಯೋಗ ಜ್ಯೋತಿಷ್ಯವನ್ನು ಪ್ರಕಟಿಸುವ ಸಾಹಸ ಮಾಡಿದ್ದೇನೆ. ಇದು ಸಾಹಿತ್ಯಕೃತಿ ಅಲ್ಲವೆಂದು ಅರಿವೂ ನನಗಿದೆ. ಇದೊಂದು ಜ್ಯೋತಿಷ್ಯಶಾಸ್ತ್ರಕ್ಕೆ ಮೀಸಲಾದ ಗ್ರಂಥವು.

ಇದೇ ಸಂದರ್ಭದಲ್ಲಿ ಒಂದು ಮಾತು ಹೇಳುವದು ಅತ್ಯವಶ್ಯವಿದೆ. ಸಾಮಾನ್ಯವಾಗಿ ನನ್ನ ಎಲ್ಲ ಗ್ರಂಥಗಳಿಗೆ ಕಡಿಮೆ ಬೆಲೆಯನ್ನು ಇಡಲಾಗಿದೆ. ಕಾರಣವಿಷ್ಟೆ, ಜನಸಾಮಾನ್ಯರಿಗೂ ಇಂಥ ಶಾಸ್ತ್ರೀಯ ಗ್ರಂಥಗಳನ್ನು ಕೂಡಾ ಕೊಳ್ಳಲು ಸುಲಭವಾಗಿರಬೇಕೆಂಬುದೇ ನನ್ನ ಹೆಬ್ಬಯಕೆ. ಆದರೆ ಈ ಗ್ರಂಥದ ಬೆಲೆಯು ಸಾಮಾನ್ಯರು ನಿರೀಕ್ಷಿಸಿದಕಿಂತಲೂ ಕೊಂಚ ಅಧಿಕವಿದೆ ಎಂಬುದನ್ನು ಒಪ್ಪುತ್ತಿದ್ದರೂ ಅನಿವಾರ್ಯವಾಗಿದೆ. ಇದಕ್ಕೆ ಕಾರಣವೆಂದರೆ ೧೯೫೮ ರ ಕಾಗದ, ಮುದ್ರಣಗಳ ಬೆಲೆಗೂ ೧೯೭೪ ರ ಕಾಗದ, ಮುದ್ರಣಗಳ ಬೆಲೆಗೂ ಅಸಾಮಾನ್ಯ ಅಂತರವಿದೆ. ಇದೂ ಅಲ್ಲದೆ ಜ್ಯೋತಿರ್ವಿದ್ಯೆಗಾಗಿ ತೆತ್ತಿದ ಸಾಲದ ಹೊಣೆಯೂ ಇದೆ. ಮೇಲಾಗಿ ಪ್ರಸ್ತುತ ಗ್ರಂಥದ ಪುಟಗಳ ಸಂಖ್ಯೆಯೂ ಹೆಚ್ಚಾಗಿದ್ದುದನ್ನು ಕಾಣಬಹುದು.

ಈ ಕೃತಿಯನ್ನು ಅರ್ಪಿಸಲು ಅನುಮತಿಯನ್ನು ನೀಡಿದ ಹಿರಿಯರೂ, ಜ್ಯೋತಿಷ್ಯಶಾಸ್ತ್ರದಲ್ಲಿ ಪಳಗಿದವರೂ ಆದ ಪಂ. ಕೇಶವಶರ್ಮಾ ಗಲಗಲಿಯವರಿಗೆ ನಾನು ತುಂಬಾ ಋಣಿಯಾಗಿದ್ದೇನೆ.

ವಿವಿಧ ಖಾತೆಗಳ, ಉದ್ದಿಮೆಗಳ ಪೂರ್ಣ ಜ್ಞಾನವನ್ನೂ ಪಡೆಯಲು ಸಹಕರಿಸಿದ ನನ್ನ ಮಿತ್ರರಾದ ಶ್ರೀಯುತ ಕೆ. ಎಸ್. ಶರ್ಮಾ

ಎನ್. ಕೃಷ್ಣಮೂರ್ತಿ, ವ್ಹಿ. ಎಸ್. ಜೋಶಿ, ಎಸ್. ವ್ಹಿ. ಪಾಟೀಲ ಅವರಿಗೂ, ಹಸ್ತಪತ್ರಿಕೆಯ ಪ್ರತಿಯನ್ನು ತಯಾರಿಸಲು ನೆರವಾದ ನನ್ನ ಮಿತ್ರರಾದ ಶ್ರೀಯುತ ಎನ್. ಪ್ರಭಾಕರ, ಎಚ್. ಎಲ್. ಸೂರ್ಯನಾರಾಯಣ-ರಾವ, ಪಾಂಡುರಂಗ ದೇವಣದೀಕ್ಷಿತ, ಬಿ. ಶ್ರೀನಿವಾಸ ದೀಕ್ಷಿತ, ಮನೋಹರ ಕಾಳೆ, ಕೃಷ್ಣ ಕುಲಕರ್ಣಿ ಇವರಿಗೂ ಕರಡುಪ್ರತಿಯನ್ನು (Proof) ತಿದ್ದುವದರಲ್ಲಿ ಸಹಕರಿಸಿ ನೆರವಾದ ಶ್ರೀ. ಭೀಮಪ್ರಸಾದ ಪಾಂಡೆ, ಮಹಾವೀರ ಪಾಂಡೆ, ಕೃಷ್ಣಾ ಪಾಟೀಲ ಇವರೆಲ್ಲರಿಗೂ ನಾನು ತುಂಬಾ ಋಣಿಯಾಗಿದ್ದೇನೆ. ಅವರೆಲ್ಲರ ಪ್ರೋತ್ಸಾಹವೇ ಈ ಕೃತಿಯು ಬೆಳಕಿಗೆ ಬರಲು ಕಾರಣ. ಇವರೆಲ್ಲರ ಬಹುಮುಖ ಸಹಾಯಕ್ಕಾಗಿ ನಾನು ಕೃತಜ್ಞನಿದ್ದೇನೆ.

ಈ ಗ್ರಂಥಕ್ಕೆ ಅಂದವಾದ ಮುಖಚಿತ್ರವನ್ನು ಚಿತ್ರಿಸಿದ ಶ್ರೀ. ಟಿ. ಕೆ. ರಾವರಿಗೂ, ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಶ್ರೀ. ಶಿವಣ್ಣಾ ಬಸವನಾಳ ಹಾಗೂ ಅವರ ಬಂಧುಗಳಿಗೆ ಮತ್ತು ದೇಸಾಯಿ ಬಳವಂತರಾವ ಇವರೆಲ್ಲರಿಗೂ ನಾನು ಕೃತಜ್ಞನಿದ್ದೇನೆ.

ಜ್ಯೋತಿಷ್ಯ ಶಾಸ್ತ್ರಕ್ಕೆ ಮೀಸಲಾದ ಈ ಕೃತಿಗೆ ಸಹೃದಯದವರಾದ ನಮ್ಮ ಕನ್ನಡ ಓದುಗರು ಆದರದಿಂದ ಸ್ವಾಗತಿಸಿದಷ್ಟೂ ನನಗೆ ಶಕ್ತಿ ಬರುತ್ತದೆ. ಮುಂದಿನ ಸೇವೆಗೆ ಹೆಚ್ಚು ದೃಢತೆ ಬರುತ್ತದೆ ಎಂದು ನಂಬಿದ್ದೇನೆ.

ಧಾರವಾಡ
೨೨-೬-೧೯೬೪

ತಮ್ಮವನಾದ,
ಎನ್. ಕೆ. ಜೋಗಳೇಕರ

# ೨ ನೆಯ ಆವೃತ್ತಿ ಕುರಿತು

—

ಈ ಮೊದಲು ಪ್ರಕಟಿಸಿದ "ಉದ್ಯೋಗ ಜ್ಯೋತಿಷ್ಯ" ಪುಸ್ತಕದ ಮೊದಲ ಮುದ್ರಣದ ಪ್ರತಿಗಳು ಮುಗಿದು ಹಲವು ವರುಷಗಳಾಗಿದ್ದು ಅನೇಕ ಜನರಿಂದ ಪ್ರತಿಗಳಿಗಾಗಿ ಬೇಡಿಕೆ ಹೆಚ್ಚಿಗೆ ಬಂದಿದ್ದರೂ ಸಹ ಈ ವರೆಗೆ ದ್ವಿತೀಯ ಮುದ್ರಣ ಕೈಕೊಳ್ಳಲು ಸಾಧ್ಯವಾಗಲಿಲ್ಲ. ಆದರೆ ಚಂದ್ರೋದಯ ಮುದ್ರಣಾಲಯದ ಶ್ರೀ ಚಂ. ಗ. ಹೊನ್ನಾಪುರಮಠ ವಕೀಲರ ಸಹಕಾರದಿಂದ ಇದೀಗ ಪ್ರಕಟಿಸಲು ಸಾಧ್ಯವಾಯಿತು. ಅದಕ್ಕಾಗಿ ಅವರಿಗೆ ಕೃತಜ್ಞತೆ ಸಲ್ಲುತ್ತದೆ. ಇವರು ಕೇವಲ ಮುದ್ರಕರಾಗಿರದೆ ನನ್ನ ಆತ್ಮೀಯ ಹಿರಿಯ ಮಿತ್ರರಿದ್ದು ಪ್ರಥಮ ಮುದ್ರಣದಲ್ಲಿಯ ಅನೇಕ ದೋಷ ಗಳನ್ನು ತಿದ್ದುವುದರಲ್ಲಿಯೂ ಸಹಕರಿಸಿದ್ದಾರೆ. ಅದಕ್ಕಾಗಿ ಅವರನ್ನು ಮತ್ತೊಮ್ಮೆ ಸ್ಮರಿಸುವೆ. ಈ ಗ್ರಂಥವನ್ನು ಅಂದವಾಗಿ ಮುದ್ರಿಸಿ ಕೊಟ್ಟ ಸೌ. ಗೌರಾಂಬಿಕಾ ಹೊನ್ನಾಪುರಮಠ ಇವರು ಕೇವಲ ಮುದ್ರಕರಾಗಿರದೆ ಕರಡು ಪ್ರತಿಯನ್ನು ತಿದ್ದುವುದರಲ್ಲಿಯೂ ನೆರವಾಗಿದ್ದಾರೆ. ಅವರಿಗೂ ಕೃತಜ್ಞತೆ ಸಲ್ಲುತ್ತಿದೆ. ಈ ಗ್ರಂಥದ ರಕ್ಷಾ ಕವಚವನ್ನು ಮುದ್ರಿಸಿಕೊಟ್ಟ ಕೃಪಾ ಮುದ್ರಣಾಲಯದ ಒಡೆಯರು ನನ್ನ ಆತ್ಮೀಯ ಮಿತ್ರರೂ ಆದ ಶ್ರೀ ಎನ್. ಕೆ. ಪೋತ್ನೀಸರಿಗೂ ಕೃತಜ್ಞತೆಗಳು. ಈ ಹೊತ್ತಗೆಗೆ ಅಂದವಾದ ಮುಖಚಿತ್ರವನ್ನು ತಯಾರಿಸಿಕೊಟ್ಟ ಜಿ. ಕೆ. ಮೂರ್ತಿಯವರಿಗೂ ಪಡಿ ಯಚ್ಚನ್ನು ತಯಾರಿಸಿದ ಶಾರದಾ ಪ್ರೊಸೆಸ್ ಸ್ಟುಡಿಯೋದ ಶ್ರೀ ಮಲಕಾಯಿ ಇವರಿಗೂ ಕೃತಜ್ಞತೆ.

ಇನ್ನೊಂದು ಸಂಗತಿ : ಈ 'ಉದ್ಯೋಗ ಜ್ಯೋತಿಷ್ಯವನ್ನು' ಈ ಸಲ ಎರಡು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಮೊದಲನೆಯ ಭಾಗದಲ್ಲಿ ನೌಕರ ದಾರರ ಸಂಬಂಧವಾಗಿ ನೌಕರೀ ಮಾರ್ಗದರ್ಶಿ ತಲೆಬರಹದಲ್ಲಿ ನೌಕರರ

ಸಮಸ್ಯೆಗಳನ್ನು ಕುರಿತು ಇದರಲ್ಲಿ ವಿವೇಚಿಸಲಾಗಿದೆ. ಎರಡನೆಯ ಭಾಗದಲ್ಲಿ ಸ್ವತಂತ್ರ ವ್ಯಾಪಾರ-ಉದ್ಯೋಗಸ್ಥರ ಕುರಿತು ಸುದೀರ್ಘ ವಿವರಣೆ ಇದೆ.

ಈ ಸಂದರ್ಭದಲ್ಲಿ ಇನ್ನೊಂದು ವಿಷಯ ಹೇಳದೆ ಇರಲಾರೆ. ಇನ್ನು ಮೇಲೆ ನಾನು ಬರೆಯಬೇಕೆಂದಿರುವ ಜ್ಯೋತಿಷ್ಯ ಗ್ರಂಥಗಳನ್ನು ೧೦೦ ರಿಂದ ೧೫೦ ಪುಟಗಳ ವರೆಗೆ ಮಾತ್ರ ಬರೆಯಬೇಕೆಂದಿರುವೆ. ಇಂದಿನ ಮಿನಿ ಯುಗದಲ್ಲಿ ಹೆಬ್ಬೊತ್ತಗೆ ಓದುವಷ್ಟು ಓದುಗರಿಗೆ ತಾಳ್ಮೆಯೂ ಇಲ್ಲಾ, ಅಲ್ಲದೆ ಹೆಚ್ಚು ಪುಟಗಳ ಹೆಬ್ಬೊತ್ತಗೆಗಳನ್ನು ಪ್ರಕಟಿಸಲು ಇಂದಿನ ಮುದ್ರಣ ವೆಚ್ಚದ ಏರಿಕೆ ದಿನಗಳಲ್ಲಿ ಹಣಕಾಸಿನ ತೊಂದರೆಯನ್ನು ಎದುರಿಸಬೇಕಾಗುತ್ತೆ. ಆದುದರಿಂದ ವಿಭಿನ್ನ ವಿಷಯಗಳ ಗ್ರಂಥಗಳನ್ನು ಒಂದೊಂದೇ ಭಾಗಗಳನ್ನಾಗಿ ಪ್ರಕಟಿಸಬೇಕೆಂದಿರುವೆ.

ಎಂದಿನಂತೆ ವಾಚಕರು ಸಹಕರಿಸುರೆಂದು ನಂಬಿರುವೆ.

ಎನ್. ಕೆ. ಜೋಗಳೆಕರ

ಅಕ್ಷಯತೃತೀಯಾ
೨೬-೪-೧೯೮೨

ತೇಜಸ್ವೀನಗರ,
ಧಾರವಾಡ-೨

# ಪರಿವಿಡಿ

—

॥ ಶ್ರೀ ॥

# ಉದ್ಯೋಗ ಜ್ಯೋತಿಷ್ಯ ಭಾಗ — ೧

# ( ನೌಕರಿಯ ಮಾರ್ಗದರ್ಶಿ )



## ವಿಷಯ ಪ್ರವೇಶ

ಸಂಕಟ ಬಂದಾಗ ವೆಂಕಟರಮಣ ಎಂಬ ನಾಣ್ಣುಡಿ ನಮ್ಮಲ್ಲಿದೆ. ವೆಂಕಟರಮಣ ಸ್ವಾಮಿಯಂತೆಯೇ ಸಮಾಜದಲ್ಲಿ ಜ್ಯೋತಿಷಿಯು ಸಹ ಹೆರವರ ಸಂಕಟ ಪರಿಹಾರಕ್ಕಾಗಿಯೇ ಹಗಲಿರಳು ಚಿಂತನಶೀಲನಾಗಿ ಶ್ರಮಿಸುತ್ತಿರುವ ವ್ಯಕ್ತಿ. ಮನುಷ್ಯನ ಬುದ್ಧಿಶಕ್ತಿ, ವಿಚಾರಸರಣಿ ಮತ್ತು ಜ್ಞಾನ ಭಾಂಡಾರ ಬೆಳೆದಂತೆಲ್ಲ ವಿಜ್ಞಾನವೂ ಬೆಳೆದು ಅವರ ಸದುಪಯೋಗವನ್ನು ಮಾನವಕುಲ ಹೆಚ್ಚು ಹೆಚ್ಚಾಗಿ ಪಡೆಯುತ್ತಿದೆ. ಇಷ್ಟೇ ಅಲ್ಲ ಇನ್ನೂ ಹೆಚ್ಚಿನ ಪ್ರಯೋಜನವನ್ನು ಪಡೆಯಲು ತವಕಪಡುತ್ತಿದೆ. ಈ ಪ್ರಗತಿಯ ಪಥದಲ್ಲಿ ನಾವು ಅನೇಕಾನೇಕ ಕ್ರಾಂತಿಗಳನ್ನು ಕಂಡಿರುತ್ತೇವೆ. ಹಳೆಯ ತತ್ವಗಳು ಕ್ರಮೇಣ ಅಳಿದು, ಹೊಸ ತತ್ವಗಳು ರೂಪಿಸಲ್ಪಡಹತ್ತಿವೆ. ಈ ಮಾತು ಫಲಜ್ಯೋತಿಷ್ಯ ಶಾಸ್ತ್ರಕ್ಕಂತೂ ತುಂಬ ಅನ್ವಯಿಸುತ್ತಿದೆ.

ಭೌತವಿಜ್ಞಾನದಲ್ಲಾಗಿರುವಷ್ಟು ಪ್ರಗತಿ, ಅಭಿವೃದ್ಧಿ ಇಲ್ಲಿಯೂ ಆಗಲು ಅವಕಾಶವಿದೆ. ಈಗಿನ ಬದಲಾಗುತ್ತಿರುವ ಜಗತ್ತಿನಲ್ಲಿ, ಇಂಥ ಪ್ರಗತಿಪರ ಸಂಶೋಧನೆಯ ಅವಶ್ಯಕತೆ ಈ ವಿಷಯದಲ್ಲಿಯೂ ಇರುವದಿಲ್ಲವೇ? ವಿಶ್ವದ ಸಮಸ್ತ ಚರಾಚರ ವಸ್ತುಗಳ ಮೇಲೆ ಗ್ರಹಗತಿಗಳಿಂದಾಗುವ ಪರಿಣಾಮ ಮತ್ತು ಏರ್ಪಡುವ ಹತೋಟಿ ಇವುಗಳಿಗೆ ಸಂಬಂಧಪಟ್ಟ

ಮೂಲ ತತ್ವಾಂಶಗಳನ್ನು ಅನುಲಕ್ಷಿಸಿ, ಕಾಲಮಾನಕ್ಕನುಗುಣವಾಗಿ ಫಲ ಜ್ಯೋತಿಷ್ಯ ಶಾಸ್ತ್ರದಲ್ಲಿಯ ಸೂತ್ರಗಳೂ ಮಾರ್ಪಾಡಬೇಕಾಗಿವೆ.

ಸಮಾಜದಲ್ಲಿ ನಾಗರಿಕತೆ ಹೆಚ್ಚಿದಂತೆಲ್ಲ, ಅದರ ಕಾರ್ಯಕ್ಷೇತ್ರಗಳೂ ವಿಸ್ತಾರಗೊಳ್ಳುವವು, ಮತ್ತು ಬಹುಮುಖ ಸ್ವರೂಪ ಪಡೆಯುವವು. ಅಷ್ಟೇ ವಿಸ್ತಾರವಾಗಿ ಮತ್ತು ನೂತನವಾಗಿ ಮಾನುಷ್ಯನ ಬಾಳಿನ ಹೊಸ ಹೊಸ ಸ್ವರೂಪ ಸಮಸ್ಯೆಗಳೂ ಉದ್ಭವಿಸುವವು.

ಇಂದು ಬೃಹದಾಕಾರವಾಗಿ ವಿಸ್ತರಿಸಿರುವಂಥ ಹಲವು ಕ್ಷೇತ್ರಗಳಲ್ಲಿ, ಉದ್ಯೋಗ ಕ್ಷೇತ್ರವು ಅತ್ಯಂತ ಮಹತ್ವದ್ದು. ಬಾಳಿಗಾಗಿ ಜೀವವೋ, ಜೀವಕ್ಕಾಗಿ ಬಾಳೋ? ಏನೇ ಇರಲಿ, ಬಾಳ್ವೆ ಇದೆ. ಈ ಬಾಳುವೆಗೊಂದು ಗುರಿ ಸಹ ಇದೆ. ಇದರ ಸಾಧನೆಗಾಗಿ ಉದ್ಯೋಗ ಬೇಕಾಗಿದೆ.

ಇಂದು ಉದ್ಯೋಗಾವಕಾಶ ಹಿಂದಿನಕಿಂತ ನೂರು ಪಟ್ಟು ಹೆಚ್ಚಿರುತ್ತದೆ. ಇದರಿಂದಾಗಿ ಉದ್ಯೋಗಾರ್ಥಿಗಳಿಗೆ ತೊಳಲಾಟವು ಸಹ ಅಷ್ಟೇ ಹೆಚ್ಚಾಗಿರುತ್ತದೆ. ನಡೆದುಬಂದ ದಾರಿ ಕವಲೊಡೆಯುತ್ತಿರುವಾಗ ಮುಂದೆ ಹೇಗೆ ಸಾಗಬೇಕೆಂಬುದನ್ನು ಅರಿಯದೆ ಮಾರ್ಗದರ್ಶನಕ್ಕಾಗಿ ಅತ್ತಿತ್ತ ನೋಡುವ ದಾರಿಕಾರರಂತೆ, ಇಂದು ಬಾಳುವೆ ನಡೆಸಲು ಉದ್ಯುಕ್ತರಾದ ಯುವಕರು ತಮ್ಮ ಜೀವನದ ಮಾರ್ಗದರ್ಶನಕ್ಕಾಗಿ ಜ್ಯೋತಿಷಿಯ ಸಲಹೆಯನ್ನು ಅಪೇಕ್ಷಿಸಹತ್ತಿದ್ದಾರೆ.

ಹೀಗೆ ಸಲಹೆಯನ್ನು ಪಡೆಯಲು ಬಂದವರು ನಾನಾ ತರಹವಾಗಿ ಕೇಳುವ ಪ್ರಶ್ನೆಗಳು ವಿಚಿತ್ರವೆನಿಸಿದರೂ ನಿಜವಾಗಿ ಅವು ಅಂಥವರ ಬಾಳಿನ ಮುಖ್ಯ ಸಮಸ್ಯೆಗಳಾಗಿರುತ್ತವೆ. ಪ್ರಶ್ನೆ ಕೇಳುವವರು ತಮ್ಮ ಪ್ರಶ್ನೆಗಳಿಗೆ ಸಂಪೂರ್ಣವಾಗಿ ತೃಪ್ತಿಯನ್ನು ಕೊಡುವ ಉತ್ತರ ಮತ್ತು ಸಲಹೆಗಳನ್ನು ಅಪೇಕ್ಷಿಸುವದು ಸಹಜ. ಕೆಲವರು ತಮಗೆ ಯಾವ ಖಾತೆಯಲ್ಲಿ ನೌಕರಿ ಸಿಗುತ್ತದೆ ಅಥವಾ ಯಾವ ಖಾತೆಯಲ್ಲಿ ಪ್ರಯತ್ನಿಸಬೇಕೆಂದು ಕೇಳಿದರೆ ಮತ್ತೆ ಕೆಲವರು ತಾವು ಕಲಿತ ಶಿಕ್ಷಣ ಪ್ರಯೋಜನಕ್ಕೆ ಬರುವ ಖಾತೆಗಳಲ್ಲಿ ನೌಕರಿ ಸಿಗುವದೇ ಎಂದು ಕೇಳುತ್ತಾರೆ. ಇನ್ನು ಕೆಲವರು, ಬಹಳ

ಖಾತೆಗಳಲ್ಲಿ ಅವಕಾಶ ಸಿಕ್ಕಾಗ, ಯಾವ ಖಾತೆಗೆ ಸೇರಬೇಕು ಮತ್ತು ಯಾವ ಖಾತೆಗೆ ಸೇರಬಾರದು ಎಂದು ತೊಳಲಾಡುತ್ತಿರುತ್ತಾರೆ. ಅಂಥ ಪ್ರಸಂಗ ಗಳಲ್ಲಿ ಜ್ಯೋತಿಷ ನಿರ್ದಿಷ್ಟವಾದ ಖಾತೆ ಯಾವುದು ಮತ್ತು ಅದು ಯೋಗ್ಯವೇ ಎಂಬುದನ್ನು ಹೇಳಬೇಕಾಗುತ್ತದೆ.

ಮನುಷ್ಯನ ಪ್ರತಿಯೊಂದು ಚಟುವಟಿಕೆಯ ಮೇಲೂ ಗ್ರಹಗಳ ಪರಿಣಾಮವಿರುವಾಗ, ಅವನಿಗೆ ಮುಖ್ಯವಾದ ಉದ್ಯೋಗ ಚಟುವಟಿಕೆಯ ಮೇಲೂ ಗ್ರಹಗಳು ಪರಿಣಾಮ ಬೀರುತ್ತವೆಂಬುದು ಶತಸ್ಸಿದ್ಧ. ಇದರಲ್ಲಿ ಕಾಯ ಕಾರಕ ಗ್ರಹವನ್ನು ನಿರ್ಧರಿಸುವದೇ ಅತಿಮುಖ್ಯ.

ಒಬ್ಬ ವ್ಯಕ್ತಿಯ ಜಾತಕವನ್ನು ಪರಿಶೀಲಿಸಿ, ಅವನು ಉದ್ಯೋಗಕ್ಕೆ ತೊಡಗುವ ಕಾಲವನ್ನು ಹೇಳುವದು ಅತಿ ಸುಲಭ. ಆದರೆ ಇಂತಹದೇ ಖಾತೆಯಲ್ಲಿ (Specific Department), ಇಂತಹದೇ ನೌಕರಿಯನ್ನು ಹಿಡಿಯುತ್ತಾನೆಂಬುದನ್ನು ಹೇಳುವದು ಅತಿಕಷ್ಟವೇ ಸರಿ! ಏಕೆಂದರೆ, ಇಂದು ಉದ್ಯೋಗ ಕ್ಷೇತ್ರದಲ್ಲಿ ಸಾವಿರಾರು ಪ್ರಕಾರಗಳು ಇದ್ದರೂ, ಸಾವಿರಾರು ಖಾತೆಗಳಿದ್ದರೂ, ಅವುಗಳ ಕಾರಕ ಗ್ರಹಗಳು ಒಂಬತ್ತೇ ಆಗಿರುತ್ತವೆ. ಈ ಪರಿಸ್ಥಿತಿಯಲ್ಲಿ, ನಾವು ಕಾರಕ ಗ್ರಹಗಳನ್ನು ನಿರ್ಧರಿಸು ವಾಗ ಒಂದೇ ಗ್ರಹಕ್ಕೆ ಅನೇಕ ಖಾತೆಗಳು ಬರುವದುಂಟು. ಉದಾಹರಣೆ ಗಾಗಿ : ಯಾವನೊಬ್ಬ ವ್ಯಕ್ತಿಯ ಜಾತಕದಲ್ಲಿ ಬುಧನು ಬಲಾಢ್ಯನಾಗಿಯೂ ಯೋಗಕಾರಕನಾಗಿಯೂ ಇದ್ದಾನೆಂದು ತಿಳಿದರೆ ಆ ವ್ಯಕ್ತಿಗೆ ಅಂಚೆ (Posts), ಬ್ಯಾಂಕು, ಲೈಫ ಇನ್ಸೂರನ್ಸ, ಪತ್ರಿಕಾ ವ್ಯವಸಾಯ, ಪರಮಾನ ತೆರಿಗೆ (Incom-tax), ಮಾರಾಟ ತೆರಿಗೆ (Sales-tax) ಮೊದಲಾದ ಖಾತೆಗಳಲ್ಲಿ ನೌಕರಿ ಸಿಗಬಹುದೆಂದು ಹೇಳಬಹುದು. ಅಂತಹ ವ್ಯಕ್ತಿಗೆ ಆ ಖಾತೆಗಳು ಯೋಗ್ಯವಾಗಿವೆಯೆಂದೂ ಸಲಹೆ ನೀಡಬಹುದು. ಆದುದ ರಿಂದ ನಿರ್ದಿಷ್ಟವಾದ ಖಾತೆಗಳಲ್ಲಿ ನೌಕರಿ ಸಿಗುತ್ತದೆಂದು ಹೇಳದೆ ಯಾವ ಪ್ರಕಾರದ ನೌಕರಿ (Nature of work) ಸಿಗಬಹುದೆಂದು ಸ್ಥೂಲವಾಗಿ ಹೇಳಬಹುದು.

# ೧

## ನೌಕರಿಗಳಲ್ಲಿಯ ಪ್ರಕಾರಗಳು

೧) Administrative officer—ಅಮಲದಾರ-ಆಡಳಿತಗಾರ.

೨) Clerical —ಕ್ಲಾರ್ಕ-ಗುಮಾಸ್ತ-ಕಾರಕೂನ.

೩) Teacher—ಶಿಕ್ಷಕ-ಸಲಹೆಗಾರ.

೪) Manual worker—ಶ್ರಮಜೀವಿ.

೫) Outdoor-Executive worker. ಹೊರಂಗಣ (ಫಿರ್ತಿ) ಕಾರ್ಯನಿರ್ವಾಹಕ.

೬) Artist —ಕಲಾಕಾರ.

ಹೀಗೆ ಮೇಲೆ ಕಾಣಿಸಿದಂತೆ ಪ್ರಕಾರಗಳಿರುತ್ತವೆ.

### ೧) ಆಡಳಿತಗಾರ :

ಯಾರು ಆಡಳಿತೆಯನ್ನು ನಿರ್ವಹಿಸುವರೋ ಅಂಥವರು ಆಡಳಿತಗಾರರು. ಉದಾಹರಣೆಗಾಗಿ : ರೆವಿನ್ಯೂ ಖಾತೆಯನ್ನು ತೆಗೆದುಕೊಳ್ಳುವಾ. ಈ ಖಾತೆಯಲ್ಲಿರುವಂಥ ತಹಶೀಲದಾರ, ಅಸಿಸ್ಟಂಟ ಕಮೀಶನರ ಇವರು ಆಡಳಿತಗಾರರೆನಿಸುವರು. ಆದರೆ ಅದೇ ಖಾತೆಯಲ್ಲಿರುವಂಥ ಕಲೆಕ್ಟರ (Deputy Commissioner) ರ ಹೆಡ್‌ಕ್ಲಾರ್ಕರಾಗಲಿ, ಚಿಟ್ನೀಸರಾಗಲಿ ಬರಿಯ ಕಾರಕೂನಿಕೆಯ ಕೆಲಸಮಾಡುವದರಿಂದ ಆಡಳಿತಗಾರರೆನಿಸಲಾರರು. ಇದರಂತೆಯೇ ಎಷ್ಟೋ I. A. S. ಆಫೀಸರರೂ ಕೂಡ ಕಾರಕೂನರಂತೆಯೇ ಕೆಲಸ ಮಾಡಬೇಕಾಗುತ್ತದೆ. ಇಂಥವರು ಹೆಚ್ಚು ಶಿಕ್ಷಣ ಪಡೆದಿದ್ದರೂ

ಸಹ ಮತ್ತು ಸಂಬಳವನ್ನು ಹೆಚ್ಚು ಪಡೆಯುತ್ತಿದ್ದರೂ ಅವರು ಆಡಳಿತ ಗಾರರೆನಿಸಲಾರರು. ಜಾತಕದಲ್ಲಿ (ಕುಂಡಲಿ) ಆಡಳಿತಕಾರಕ ಯೋಗಗಳೂ ಮತ್ತು ಗ್ರಹಗಳೂ ಭಿನ್ನ ಭಿನ್ನವಿರುತ್ತವೆ.

ಜಾತಕದಲ್ಲಿ ಆಡಳಿತಕಾರಕ ಗ್ರಹವೆಂದರೆ ರವಿಯು. ರವಿಯು ಬಲಾಢ್ಯನಿದ್ದ ಜಾತಕನು ಅವನ ಸ್ಥಾನಮಾನವೇನಿದ್ದರೂ ಸಹ ಆಡಳಿತಗಾರ ನಂತೆ ಕಾರ್ಯವನ್ನು ಮಾಡುವನು. ಇದರಂತೆಯೇ ಗುರು ಮತ್ತು ಮಂಗಳ ಗ್ರಹಗಳೂ ಬಲಾಢ್ಯರಿದ್ದ ಜಾತಕರೂ ಸಹ ಆಡಳಿತಗಾರರಾಗುವರು.

ರಾಶಿದೃಷ್ಟಿಯಿಂದ ನೋಡಿದರೆ ಪುರುಷರಾಶಿಗಳಾದ ಮೇಷ, ಮಿಥುನ, ಸಿಂಹ, ತುಲಾ, ಧನು ಮತ್ತು ಕುಂಭ ರಾಶಿಗಳ ಜನರು ಆಡಳಿತಗಾರ ರಾಗುವರು.

ಲಗ್ನದೃಷ್ಟಿಯಿಂದ ನೋಡಿದರೆ, ಮೇಷ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು ಮತ್ತು ಮೀನ ಈ ಲಗ್ನಗಳಲ್ಲಿ ಜನಿಸಿದಂಥವರು ದಕ್ಷ ಆಡಳಿತಗಾರರಾಗಿರುವುದನ್ನು ಹೆಚ್ಚಾಗಿ ಕಾಣಬಹುದಾಗಿದೆ. ಸ್ಥಾನದೃಷ್ಟಿ ಯಿಂದ ನೋಡಿದರೆ ಭಾಗ್ಯ, ಲಗ್ನ, ಪಂಚಮ ಈ ಸ್ಥಾನಗಳು ಅಮಲದಾರರ ಸ್ಥಾನಗಳು.

೨) ಕಾರಕೂನ (Clerk) :

ಮೇಜನ್ನು ಮುಂದಿಟ್ಟುಕೊಂಡು ಕೆಲಸ ಮಾಡುವವರೆಲ್ಲರೂ ಕಾರಕೂನರೇ. ಉದಾಹರಣೆಗೆ: I. A. S. ಶಿಕ್ಷಣ ಪಡೆದಂಥ ಕಾರ್ಯದರ್ಶಿ (Secretary) ಗಳೂ, ಆಪ್ತ ಸಹಾಯಕರೂ (Personal Assistant). ಹೈಕೋರ್ಟಿನಲ್ಲಿ ರಜಿಸ್ಟ್ರಾರ್ ಎಂದು ಕೆಲಸಮಾಡುತ್ತಿರುವ ಜಿಲ್ಲಾ ನ್ಯಾಯಾಧೀಶರ ಸಮಾನ ದರ್ಜೆಯ ಅಧಿಕಾರಿಗಳೂ ಕೂಡ ಮಾಡುವ ಕೆಲಸ ಮಾತ್ರ ಕಾರಕೂನರ ದೆಂದೇ ಹೇಳಬಹುದು.

**ಕಾರಕ ಗ್ರಹಗಳು :**

ಕಾರಕೂನಿಕಿಯ ಕಾರಕ ಗ್ರಹವೆಂದರೆ ಬುಧನು. ಬುಧನ ತರುವಾಯ, ಸೇವಾವೃತ್ತಿ ಕಾರಕನಾದ ಶನಿಯೂ, ಸ್ತ್ರೀಗ್ರಹವಾದ ಶುಕ್ರನೂ, ಸ್ತ್ರೀರಾಶಿಯ ಚಂದ್ರನೂ ಕಾರಕೂನಿಕೆಯ ಕಾರಕರಾಗಿರುವರು.

**ರಾಶಿ ಹಾಗು ಸ್ಥಾನ :** ರಾಶಿದೃಷ್ಟಿಯಿಂದ ನೋಡಿದರೆ ಸ್ತ್ರೀರಾಶಿಗಳಾದ ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ರಾಶಿಗಳು (ಸ್ತ್ರೀರಾಶಿಯ ಚಂದ್ರನು) ಕಾರಕೂನಿಕೆಯ ರಾಶಿಗಳಿರುತ್ತವೆ. ಸ್ಥಾನದೃಷ್ಟಿಯಿಂದ ನೋಡಿದರೆ ತೃತೀಯ ಹಾಗೂ ದಶಮಗಳು ಕಾರಕೂನಿಕೆಯ ಸ್ಥಾನಗಳಿರುತ್ತವೆ.

**ಲಗ್ನ :** ಲಗ್ನಗಳ ಮೇಲಿಂದ ನೋಡಿದರೆ, ವೃಷಭ, ಕನ್ಯಾ, ತುಲಾ, ಮಕರ, ಕುಂಭ – ಈ ಲಗ್ನಗಳಲ್ಲಿ ಜನಿಸಿದವರು ಜಾಸ್ತಿಯಾಗಿ ಕಾರಕೂನರಿರುವುದನ್ನು ಕಾಣಬಹುದು.

**೩) ಶಿಕ್ಷಕ :**

ಶಿಕ್ಷಕರೆಂದರೆ ಹುಡುಗರಿಗೆ ಶಿಕ್ಷಣವನ್ನು ಕೊಡುವ ಪ್ರಾಥಮಿಕ, ಮಾಧ್ಯಮಿಕ, ಉಚ್ಚ ಶಿಕ್ಷಕರಾದ ಉಪಾಧ್ಯಾಯ (Teacher, Professor) ಶಾಲಾ, ಕಾಲೇಜ, ವಿಶ್ವವಿದ್ಯಾಲಯಗಳ ಶಿಕ್ಷಕರೆಂದಷ್ಟೆ ಅರ್ಥಮಾಡದೆ ಯಾರು ಸಲಹೆ, ಉಪದೇಶವನ್ನು ಕೊಡುವರೋ ಅವರೆಲ್ಲರೂ ಶಿಕ್ಷಕರೆಂದು ತಿಳಿಯಬೇಕು. ಉದಾಹರಣೆಗೆ: ಭವಿಷ್ಯವನ್ನು ಹೇಳುವ ಜ್ಯೋತಿಷಿಗಳು, ಧರ್ಮೋಪದೇಶವನ್ನು ಹೇಳುವ-ಮಠಾಧೀಶರೂ, ಕೀರ್ತನಕಾರರೂ, ಅರ್ಚಕರೂ, ನ್ಯಾಯಾಧೀಶರೂ ಇವರೆಲ್ಲರನ್ನೂ ಶಿಕ್ಷಕ ವರ್ಗದಲ್ಲಿಯೇ ಪರಿಗಣಿಸಬೇಕು.

**ಕಾರಕಗ್ರಹ :**

ಶಿಕ್ಷಕ (ಉಪಾಧ್ಯಾಯ) ಕಾರಕಗ್ರಹವೆಂದರೆ ಗುರುಗ್ರಹವು. ಗುರು ಬಲಾಢ್ಯನಿರದೆ ಯಾರೂ ಉತ್ತಮ ಶಿಕ್ಷಕರಾಗಲಾರರು. ಗುರುವಿನ ತರುವಾಯ ಬುಧನೂ ಕೆಲವಮಟ್ಟಿಗೆ ಕಾರಕನಾಗುವನು.

ರಾಶಿ : ರಾಶಿ ದೃಷ್ಟಿಯಿಂದ ನೋಡಿದರೆ ಮಿಥುನ, ಕರ್ಕ, ಸಿಂಹ, ತುಲಾ, ಧನು, ಕುಂಭ, ಮೀನ– ಈ ರಾಶಿಯ ಜನರು ಉತ್ತಮ ಶಿಕ್ಷಣ ರಾಗುವರು.

ಲಗ್ನ : ಉತ್ತಮ ಶಿಕ್ಷಕರೆಂದು ಕೆಲಸ ಮಾಡುತ್ತಿರುವವರಲ್ಲಿ ಮೇಷ, ಮಿಥುನ, ಸಿಂಹ, ಧನು, ವೃಶ್ಚಿಕ, ಮಕರ, ಕುಂಭ, ಮೀನ ಈ ಲಗ್ನಗಳಲ್ಲಿ ಜನಿಸಿದವರು ಹೆಚ್ಚಾಗಿ ಶಿಕ್ಷಕರಿರುವುದನ್ನು ಕಾಣಬಹುದು.

ಸ್ಥಾನ : ಶಿಕ್ಷಕನಾಗಲು ಜಾತಕದಲ್ಲಿ ದ್ವಿತೀಯ ಸ್ಥಾನ ಹಾಗೂ ಪಂಚಮ ಸ್ಥಾನಗಳನ್ನೂ ಹಾಗೂ ದ್ವಿತೀಯಾಧೀಶ ಮತ್ತು ಪಂಚಮಾಧೀಶರ ಬಲಾಬಲವನ್ನೂ ಪರೀಕ್ಷಿಸಬೇಕಾಗುತ್ತದೆ.

೪) ಶ್ರಮಜೀವಿ (Manual Worker) :

ಶ್ರಮಜೀವಿ ಕೆಲಸಗಾರ ಎಂದರೆ ಕೇವಲ ಕೂಲಿ ಆಳು ಎಂದು ಸಂಕುಚಿತಾರ್ಥ ಮಾಡದೆ ಸ್ವತಃ ಶ್ರಮವಹಿಸಿ ದುಡಿಯುವವರೆಲ್ಲರೂ ಶ್ರಮ ಜೀವಿಗಳೆಂದೇ ಕರೆಯಬಹುದು. ಉದಾ : ೧,೫೦೦ ರೂ. ಪಗಾರ ತೆಗೆದು ಕೊಳ್ಳುವ B. E. Mechanical/Electrical ಇಂಜನಿಯರ್ಸರೂ ಕೂಡ, ಮಷಿನರಿ ಯಂತ್ರಗಳನ್ನು ಚಲಾಯಿಸುವವರೂ, ಯಾವುದೇ ಕಬ್ಬಿಣ ಹಾಗೂ ಮೆಷಿನರಿ ಕಾರ್ಖಾನೆಗಳಲ್ಲಿ ಕೆಲಸಮಾಡುತ್ತಿರುವ ವರ್ಕ್ಸ್ ಮೇನೇಜರ್ ಇತ್ಯಾದಿಗಳು, ಬೇಸಾಯಗಳನ್ನು ಮಾಡುವ ಬೇಸಾಯಗಾರರೂ, ಇವರೆಲ್ಲರೂ ಶ್ರಮಜೀವಿ ಎಂದೇ ಅರ್ಥ ಹಚ್ಚಬೇಕು.

ಕಾರಕ ಗ್ರಹ :

ಶ್ರಮಜೀವಿ ಕಾರಕ ಗ್ರಹವೆಂದರೆ ಶನಿಯು. ತದನಂತರ, ರಾಹು– ಮಂಗಳರು ಇರುತ್ತಾರೆ.

ರಾಶಿದೃಷ್ಟಿಯಿಂದ ನೋಡಿದರೆ ಇಂಥ ಜನರೇ ಶ್ರಮಜೀವಿಗಳೆಂದು ಹೇಳಲು ಬಾರದು. ಬೌದ್ಧಿಕರಾಶಿಗಳಾದ (ಬುದ್ಧಿ ಜೀವಿಗಳಾದ) ಮಿಥುನ,

ತುಲಾ, ಕುಂಭ— ಈ ರಾಶಿಗಳ ಹೊರತಾಗಿ ಮಿಕ್ಕ ಎಲ್ಲ ರಾಶಿಯ ಜನರೂ ಶ್ರಮಜೀವಿಗಳಾಗಬಹುದು.

ಲಗ್ನ : ಮೇಷ, ವೃಷಭ, ಕರ್ಕ, ಸಿಂಹ, ತುಲಾ, ಮಕರ ಕುಂಭ ಈ ಲಗ್ನಗಳಲ್ಲಿ ಜನಿಸಿದವರೇ ಹೆಚ್ಚಾಗಿ ಶ್ರಮಜೀವಿ ವರ್ಗದವರೆಂದು ಕಾಣಬಹುದಾಗಿದೆ.

೫) Outdoor Executive Worker : ಹೊರಂಗಣ ( ಫಿರ್ತಿ ) ಕಾರ್ಯನಿರ್ವಾಹಕ.

ಈ ಪ್ರಕಾರದ ಕೆಲಸ ಮಾಡುವವರೆಂದರೆ ತಿರುಗಾಡಿ ಕೆಲಸ ಮಾಡು ವವರು. ಉದಾಹರಣೆಗಾಗಿ : ಇನ್‌ಸ್ಪೆಕ್ಟರ್ಸ, ಟಿಕೇಟ ಕಲೆಕ್ಟರ್ಸ, ಗಾರ್ಡ, ರೇಂಜರ್ಸ, ಕಂಡಕ್ಟರ್ಸ, ಡ್ರೈವ್ಹರ್ಸ, ಪೋಲೀಸ ಇತ್ಯಾದಿ.

ಕಾರಕ ಗ್ರಹ : ಇವರಿಗೆ ಚಂದ್ರನೇ ಕಾರಕನು, ಚರ ರಾಶಿಯ ಚಂದ್ರನು ತೃತೀಯ, ಸಪ್ತಮ, ಭಾಗ್ಯ ಲಗ್ನದಲ್ಲಿದ್ದರೆ ಚಂದ್ರನ ತರುವಾಯ ರವಿ-ಬುಧರು ಕೆಲಮಟ್ಟಿಗೆ ಕಾರಕರಾಗುತ್ತಾರೆ. ಮಶಿನರಿಗಳ (ಯಾಂತ್ರಿಕ) ಸಂಬಂಧದಲ್ಲಿ ಮಂಗಳನೂ ಕಾರಕನಾಗುವನು.

ಲಗ್ನ : ಈ ಪ್ರಕಾರದ ಕೆಲಸಗಾರರಿಗೆ ಇಂತಹದೇ ಲಗ್ನವಿರಬೇಕೆಂಬ ನಿಯಮವಿಲ್ಲದಿದ್ದರೂ ಚರ ಲಗ್ನಗಳೇ ಹೆಚ್ಚಾಗಿ ಇರುವದನ್ನು ಕಾಣುತ್ತೇವೆ.

ಸ್ಥಾನ : ಇಂಥ ಜನರ ಜಾತಕದಲ್ಲಿ ಲಗ್ನಗಳಿಗಿಂತ ಸ್ಥಾನಗಳನ್ನೇ ಹೆಚ್ಚಾಗಿ ಪರಿಶೀಲಿಸಬೇಕಾಗುತ್ತದೆ. ಲಗ್ನ, ತೃತೀಯ ಸಪ್ತಮ, ಭಾಗ್ಯ ಈ ಸ್ಥಾನಗಳಲ್ಲಿಯೇ ಹೆಚ್ಚಾಗಿ ಗ್ರಹಗಳು ಇರುವವು ಮತ್ತು ಅನೇಕ ಗ್ರಹ ಗಳು ಚರರಾಶಿಯಲ್ಲಿಯೂ ದ್ವಿಸ್ವಭಾವ ರಾಶಿಯಲ್ಲಿಯೂ ಇರುವದನ್ನು ಕಾಣಬಹುದಾಗಿದೆ.

ರಾಶಿ : ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಇಂಥ ರಾಶಿಯವರೇ ಈ ತರಹದ ಉದ್ಯೋಗವನ್ನು ಕೈಕೊಳ್ಳುವರು ಎಂದು ಹೇಳಲು ಬಾರ

ದಿದ್ದರೂ ಹೆಚ್ಚಾಗಿ ಮೇಷ, ಕರ್ಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಮಕರ ಈ ರಾಶಿಯವರೇ ಇರುವರು.

೬) ಕಲಾಕಾರ :

ಯಾರು ಕಲೆಯಿಂದ ಜೀವನ ಸಾಗಿಸುವರೋ ಅವರೆಲ್ಲರೂ ಕಲಾಕಾರರೇ. ಉದಾ : ಪೇಂಟರ, ನಟನಟಿಯರು, ಲೇಖಕರು, ಸಂಗೀತಗಾರರು, ವಾದಕರು, ಬಡಿಗರು, ಕಮ್ಮಾರರು, ಅಕ್ಕಸಾಲಿಗರು, ಸಿಂಪಿಗರು, ಕುಂಬಾರರು, ಫೋಟೋಗ್ರಾಫರ, ಇದಲ್ಲದೆ ಯಾವದೇ ಕಂಪನಿಯಲ್ಲಾಗಲಿ, ಖಾತೆಯಲ್ಲಾಗಲಿ ಡ್ರಾಯಿಂಗಕ್ಕೆ ಸಂಬಂಧಿಸಿದ ಕೆಲಸಗಾರರಾದ ಡ್ರಾಫ್ಟ ಮನ್, ಟ್ರೇಸರ್ಸರನ್ನೂ ಕೂಡ ಕಲಾಕಾರರೆಂದೇ ಪರಿಗಣಿಸಬೇಕು.

ಕಾರಕಗ್ರಹ : ಲಲಿತ ಕಲೆಗಳಿಗೆ ಪೂರಕ—ಪೋಷಕನಾದ ಶುಕ್ರನೇ ಕಲಾಕಾರರಿಗೆ ಕಾರಕನೆಂದು ಹೇಳಬಹುದಾಗಿದೆ. ಶುಕ್ರನ ತರುವಾಯ ಬುಧ-ಗುರುಗಳೂ ಕಾರಕರಿರುತ್ತಾರೆ.

ಲಗ್ನ : ಇಂಥ ವಿಶಿಷ್ಟ ಲಗ್ನದ ಜನರೆ ಕಲಾಕಾರರೆಂದು ಹೇಳುವದು ಕಠಿಣ[illegible]ದೆ. ಸಾಮಾನ್ಯವಾಗಿ ವೃಷಭ, ಮಿಥುನ, ತುಲಾ, ಮಕರ, ಕುಂಭ [illegible]ಲಗ್ನದವರೇ ಇರುಪದನ್ನು ಕಾಣಬಹುದಾಗಿದೆ.

ರಾಶಿ : ರಾಶಿ ದೃಷ್ಟಿಯಿಂದ ನೋಡಿದರೆ ಇಂಥ ರಾಶಿಯವರೇ ಕಲಾಕಾರರಿರುತ್ತಾರೆಂದು ಹೇಳಲಿಕ್ಕಾಗದು. ಆದರೂ ಸಹ ವಾಯು ಹಾಗೂ ಭೂ ರಾಶಿಗಳ ಜನರೇ ಹೆಚ್ಚಾಗಿರುವುದನ್ನು ಕಾಣಬಹುದು.

ಸ್ಥಾನ : ಸ್ಥಾನದ ದೃಷ್ಟಿಯಿಂದ ನೋಡಿದರೆ ಲಗ್ನ, ಪಂಚಮ ಈ ಸ್ಥಾನಗಳೂ ತದನಂತರ ದ್ವಿತೀಯ, ತೃತೀಯ ಈ ಸ್ಥಾನಗಳೂ ಕಲಾಕಾರಕ ಸ್ಥಾನಗಳಿವೆ.

—

# ನೌಕರಿಯ ಕಾರಕ ಗ್ರಹ, ಸ್ಥಾನ, ರಾಶ್ಯಾದಿಗಳು

ಯಾವುದೇ ವ್ಯಕ್ತಿಯು ಯಾವ ನೌಕರಿಯಿಂದ ತನ್ನ ಜೀವನವನ್ನು ಸಾಗಿಸುವನು ಎಂಬುದನ್ನು ಕಂಡುಹಿಡಿಯಲು ಜಾತಕದ ೧೦ನೇ ಸ್ಥಾನ ನೋಡಬೇಕೆಂದು 'ವರಾಹಮಿಹಿರ'ರು ತಮ್ಮ ಬೃಹಜ್ಜಾತಕ ಗ್ರಂಥದ ಕರ್ಮಜೀವಿ ಅಧ್ಯಾಯದಲ್ಲಿ ಉದ್ಯೋಗಕ್ಕೆ ದಶಮಸ್ಥಾನವನ್ನು ಪ್ರಾಮುಖ್ಯ ವಾಗಿಟ್ಟುಕೊಂಡು ಉದ್ಯೋಗವನ್ನು ನಿರ್ಣಯಿಸಬೇಕೆಂದು ಹೇಳಿರು ವರು.

ಅದರಂತೆಯೇ ಅನೇಕ ಜ್ಯೋತಿಷಿಗಳೂ, ಲೇಖಕರೂ ಅದನ್ನೇ ಬೆಂಬಲಿಸಿದ್ದಾರೆ. ಆದರೆ ನಮ್ಮ ಅಭಿಪ್ರಾಯದಂತೆ ಎಲ್ಲ ಉದ್ಯೋಗಗಳಿಗೂ ದಶಮಸ್ಥಾನವನ್ನೇ ನೋಡಬೇಕೆಂದು ನಮಗೆ ಅನಿಸುವದಿಲ್ಲ.

ಜಾತಕದ ೧೦ನೇ ಸ್ಥಾನಕ್ಕೆ ಪಿತಾ, ಆಜ್ಞಾ, ಮಾನ, ಕರ್ಮ, ಆಸ್ಪದ, ಗಗನ, ನಭ, ವ್ಯೋಮ, ಮೇಷೂರಣ, ಮಧ್ಯ, ವ್ಯಾಪಾರ ಎಂಬ ೧೨ ಪರ್ಯಾಯ ನಾಮಗಳಿವೆ. ಅವುಗಳಿಗೆ ಅನೇಕ ಬಗೆಯ ಅರ್ಥಗಳನ್ನು ಹಚ್ಚಬಹುದು. ತಂದೆಯ ಸುಖವನ್ನೂ ಜಾತಕನ ಮಾನ-ಮರ್ಯಾದೆ ಯನ್ನೂ ದಶಮಸ್ಥಾನದಿಂದಲೇ ನೋಡುವರು. ಆಸ್ಪದ ಎಂಬ ನಾಮ ಕರಣ ಮಾಡಿರುವದರಿಂದಲೂ ಕರ್ಮ ಎಂಬ ಹೆಸರು ಇರುವದರಿಂದಲೂ ಕರ್ಮ ಜೀವನ ಕಂಡುಹಿಡಿಯಲು ಯಾವುದೊಂದು ಉದ್ಯೋಗಕ್ಕೆ ದಶಮ ಸ್ಥಾನವನ್ನು ನೋಡಬೇಕಾಗುತ್ತದೆ ಎಂಬ ಒಂದು ಪ್ರಕಾರದ ವಾದಸರಣಿಯ ಮೇಲೆ ಒಪ್ಪಬಹುದು.

ದಶಮಸ್ಥಾನವೇನೋ ಕರ್ಮಸ್ಥಾನ ನಿಜ ಆದರೆ ಈ ಕರ್ಮವನ್ನು ನಿರ್ವಹಿಸಲು ಅನೇಕ ಸಂಗತಿಗಳನ್ನು ನೋಡಬೇಕಾಗುತ್ತದೆ. ಕರ್ಮಕ್ಕೆ ಪೂರಕವಾದ ಅನೇಕ ಸಂಗತಿಗಳನ್ನೂ ಪರಿಶೀಲಿಸಬೇಕಾಗುತ್ತದೆ. ಉದಾಹರಣೆಗೆ: ಕರ್ಮಕ್ಕೂ, ಧರ್ಮಕ್ಕೂ ಸಂಬಂಧ ಹೇಗಿದೆ, ಕರ್ಮಕ್ಕೂ ಸುಖಕ್ಕೂ ಸಂಬಂಧ ಹೇಗೆ— ಈ ಎಲ್ಲ ಸಂಗತಿಗಳನ್ನೂ ಪರಿಶೀಲಿಸಬೇಕಾಗುತ್ತದೆ.

ಎರಡನೆಯದಾಗಿ ಉದ್ಯೋಗ ಮಾಡುವದೆಂದರೆ ಹಣ ಗಳಿಸುವದು. ಹಣ ಗಳಿಸಲು ದಶಮಸ್ಥಾನವೇ ಏಕೆ ? ದ್ವಿತೀಯ ಸ್ಥಾನ ಉತ್ತಮವಿದ್ದರೆ ಹಣ ಸಿಗುವದಿಲ್ಲವೇ ? ಅನೇಕ ಸುಖವಸ್ತು ಜೀವಿಗಳ ದ್ವಿತೀಯ ಸ್ಥಾನ ಹಾಗೂ ಚತುರ್ಥ ಸ್ಥಾನ ಮತ್ತು ದ್ವಿತೀಯೇಶ, ಸುಖೇಶರು ಮಾತ್ರ ಬಲಾಢ್ಯರಿದ್ದು ಉಳಿದ ಸ್ಥಾನಗಳೂ ಸ್ಥಾನಾಧೀಶರೂ ದುರ್ಬಲರಿರುವ ಅನೇಕ ಉದಾಹರಣೆಗಳಿವೆ. ಅಷ್ಟೇ ಏಕೆ ಸಟ್ಟಾ-ಲಾಟರಿ, ಸ್ತ್ರೀಧನ, ಬಕ್ಷೀಸು, ವಾರಸು, ಕಾಣಿಕೆ— ಇವುಗಳಿಗಾಗಿ ಪಂಚಮಾಷ್ಟಮ ಸ್ಥಾನಗಳನ್ನು ಪರಿಶೀಲಿಸುವದಿಲ್ಲವೇ ? ಆದುದರಿಂದ ನಮ್ಮ ಅಭಿಪ್ರಾಯದಲ್ಲಿ ಯಾರೊಬ್ಬರ ಉದ್ಯೋಗದ ಬಗೆಗೆ ದಶಮಸ್ಥಾನದ ಜೊತೆಗೆ ಉಳಿದ ಸ್ಥಾನಗಳನ್ನೂ, ಶುಭಾಶುಭ ಯೋಗಗಳನ್ನೂ, ಎಲ್ಲ ಗ್ರಹಗಳನ್ನೂ ಪರಿಶೀಲಿಸಬೇಕಾಗುತ್ತದೆ.

**ದ್ವಾದಶ ಸ್ಥಾನಗಳ ಭಾವ :**

ಯಾವುದೇ ವ್ಯಕ್ತಿಯ ಜನ್ಮಕುಂಡಲಿಯಲ್ಲಿಯ ಬೇರೆ ಬೇರೆ ಸ್ಥಾನಗಳಿಂದ ಅನೇಕ ಸಂಗತಿಗಳು ತಿಳಿಯುತ್ತವೆ. ಪ್ರಸ್ತುತ ಈ ಪ್ರಕರಣದಲ್ಲಿ ನೌಕರಿಗೆ ಸಂಬಂಧಪಟ್ಟ ಸಂಗತಿಗಳಾವವು, ಅವುಗಳನ್ನು ಯಾವ ಸ್ಥಾನಗಳಿಂದ ಹೇಗೆ ಕಂಡುಹಿಡಿಯಬೇಕು ಎಂಬುದನ್ನು ಮಾತ್ರ ಕೆಳಗೆ ಕೊಡಲಾಗಿದೆ.

ತನು ಸ್ಥಾನ : ಉದ್ಯೋಗಕ್ಕೆ ಬೇಕಾಗುವ ಜಾತಕನ ಸ್ವಭಾವ, ಸಾಮರ್ಥ್ಯ, ವ್ಯಕ್ತಿಮತ್ವ (Personality), ಗುಣಧರ್ಮ, ಮಹತ್ವಾಕಾಂಕ್ಷೆ,

ಧೋರಣೆ, ರೂಪ-ವರ್ಣ, ಆರೋಗ್ಯ, ಶರೀರಸುಖ, ನೌಕರಿಗೆ ಇರುವ ಆತನ ಒಲವು, ಇಚ್ಛೆ ಇತ್ಯಾದಿ ಸಂಗತಿಗಳನ್ನು ನೋಡಬೇಕಾಗುವದಲ್ಲದೆ ನಟನಟಿಯರು, ಮಿಲಿಟರಿ, ಪೋಲೀಸ, ನಿರ್ವಾಹಕ ಕೆಲಸಗಾರ, ಕಲಾಕಾರ, ಏರ ಫೋರ್ಸ, ನೇವ್ಹೀ ಈ ಮೊದಲಾದ ಖಾತೆಗಳಿಗಾಗಿಯೂ ಈ ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ.

ದ್ವಿತೀಯ ಸ್ಥಾನ : ಪಿತ್ರಾರ್ಜಿತ ಆಸ್ತಿಯ ಬಗೆಗೆ, ಮಾತುಗಾರಿಕೆ, ಕ್ರಯವಿಕ್ರಯ ಸಂಬಂಧ, ವರ್ಚಸ್ಸು, ಹಾಡುಗಾರಿಕೆ, ಆಚರಣೆ, ವಾಕ್ಸಿದ್ಧಿ ಇತ್ಯಾದಿಗಳ ಬಗೆಗೆ ಈ ಸ್ಥಾನವನ್ನು ನೋಡಬೇಕಾಗುತ್ತದೆ. ಶಿಕ್ಷಣ ಖಾತೆ ಯಲ್ಲಿಯ ಶಿಕ್ಷಕರಿಗೂ, ಆಲ್‌ಇಂಡಿಯಾ ರೇಡಿಯೋ ಡಿಪಾರ್ಟಮೆಂಟಿನ ನೌಕರದಾರ ವರ್ಗದವರಿಗೂ, ರಾಜಕೀಯ ಸಾಮಾಜಿಕ-ಕಾರ್ಯಕರ್ತರಿಗೂ ಈ ಸ್ಥಾನವನ್ನೇ ನೋಡಬೇಕಾಗುತ್ತದೆ. ವಕೀಲರಿಗೂ ಈ ಸ್ಥಾನವನ್ನೇ ನೋಡಬೇಕಾಗುತ್ತದೆ. ಉತ್ತಮ ಶಿಕ್ಷಕ, ಉತ್ತಮ ವಕೀಲ, ಟಂಕುಶಾಲೆಯ ನೌಕರೀವರ್ಗದವರಿಗೂ ಹಾಗೂ ಮೇಲ್ತರಗತಿಯ ಭಾಷಣಕಾರರೆಲ್ಲರಿಗೂ ದ್ವಿತೀಯ ಸ್ಥಾನ ಹಾಗೂ ದ್ವಿತಿಯೇಶರೇ ಬಲಾಢ್ಯರಿರುವರು. ಸುಖವಸ್ತು ಗಳ ಜಾತಕದಲ್ಲಿಯೂ ದ್ವಿತೀಯ ಸ್ಥಾನವೇ ಬಲಾಢ್ಯವಿರುತ್ತದೆ.

ತೃತೀಯ ಸ್ಥಾನ : ಪ್ರವಾಸದ ಸಂಬಂಧ, ಲೇಖನೀ ಸಂಬಂಧ, ಜಯಾಪಜಯದ ವಿಚಾರ, ಕಲಾಕೌಶಲ್ಯದ ಅಭಿರುಚಿ (ಅಕ್ಷರ ದುಂಡಾಗುವಿಕೆ ಹಾಗೂ ಡ್ರಾಯಿಂಗ-ಡಿಜಾಯಿನಿಂಗ ಸಂಬಂಧ) ಹಸ್ತಾಕ್ಷರ, 'ಶೌರ್ಯ ಪರಾಕ್ರಮ', ಕೀರ್ತಿ, ಮನೋನಿಗ್ರಹ, ಔಷಧಿ, ರಸಾಯನ ಮಾಹಿತಿ— ಈ ಎಲ್ಲ ವಿಷಯಗಳನ್ನೂ ಟಾಯಿಪಿಸ್ಟ, ಶೀಘ್ರಲಿಪಿಗಾರ, ಡ್ರಾಫ್ಟ್ಸ್‌ಮನ್ ಈ ಮೊದಲಾದ ಹುದ್ದೆಗಳ ವಿಚಾರವನ್ನೂ, ನಿರ್ವಹಣ ಕೆಲಸ ಮಾಡುವ ಪ್ರವೃತ್ತಿ ಯುಳ್ಳ (Outdoor executive work) ಜನರ ವಿಚಾರವನ್ನೂ ಈ ಸ್ಥಾನದಿಂದಲೇ ಪರಿಶೀಲಿಸಬೇಕು.

ಚತುರ್ಥ ಸ್ಥಾನ : ಆಳುಹೋಳು, ನೌಕರ-ಚಾಕರ, ಸ್ಥಾವರ ಇಸ್ಟೇಟ, ಜಮೀನ ಜುಮಲಾ, ಹೊಲಮನೆ, ವಾಹನ ಸೌಖ್ಯ, ತೋಟಪಟ್ಟಿಯ

ಸೌಖ್ಯ ಇತ್ಯಾದಿ ವಿಷಯಗಳನ್ನು ಅನೇಕ ಸುಖವಸ್ತುಗಳ (Landlords and Owners of Estates) ಜಾತಕದಲ್ಲಿ ಸುಖಸ್ಥಾನವೇ ಬಲಾಢ್ಯವಿರುತ್ತದೆ. ಹೊಟೆಲ, ಹೊಟೆಲ ವ್ಯಾಪಾರಸ್ಥರ, ಲಾಜಿಂಗ ಬೋರ್ಡಿಂಗಗಳ ಮಾಲಕರ ಹಾಗೂ ಕಾರಖಾನೆ-ಗಿರಣಿಗಳ ಒಡೆಯರ ಕೃಷಿಕಾರರ ಜಾತಕದಲ್ಲಿಯೂ ಸುಖಸ್ಥಾನ ಹಾಗೂ ಸುಖೇಶರೇ ಬಲಾಢ್ಯರಿರುತ್ತಾರೆ. ಟ್ಯಾಕ್ಸಿ ಮಾಲಕರ ಅಥವಾ ಯಂತ್ರಗಳ ಮಾಲಕರ ಜಾತಕದಲ್ಲಿಯೂ ಸುಖಸ್ಥಾನವೇ ಬಲಾಢ್ಯವಿರುತ್ತದೆ. ಒಕ್ಕಲತನಖಾತೆ, ತೋಟಗಾರಿಕೆ ಖಾತೆ, ಫಾರೆಸ್ಟ ಖಾತೆ, ಗಣಿ ಭೂಗರ್ಭ ಖಾತೆ, ಲ್ಯಾಂಡ ರಿಕಾರ್ಡ ಖಾತೆ ಈ ಮೊದಲಾದ ಖಾತೆಗಳಿಗೆ ಸುಖಸ್ಥಾನ ಹಾಗೂ ಸುಖಾಧೀಶರನ್ನೇ ನೋಡಬೇಕಾಗುತ್ತದೆ.

ಪಂಚಮ ಸ್ಥಾನ : ಆಕಸ್ಮಿಕ ಧನಯೋಗ, ಹಣಸಂಚಯ, ಹಣಕಾಸಿನ ಸಂಬಂಧ, ವಿದ್ಯಾ, ಬುದ್ಧಿ, ಡ್ರಾಫ್ಟಿಂಗ ಕಲೆ (Act of dr fting), ಐಹಿಕಸುಖ, ಮಾನಸನ್ಮಾನ, ಅನೇಕ ರೀತಿಯ ಕಲೆ, ಖಾತೆಗಳ ಪರೀಕ್ಷೆಗಳಲ್ಲಿ ಯಶಸ್ಸು, ದೇವತಾನುಕೂಲ ಇತ್ಯಾದಿ ಸಂಗತಿಗಳನ್ನೂ ಉತ್ತಮ ಶಿಕ್ಷಕ, ಲೇಖಕ, ಗ್ರಂಥಕರ್ತ, ಪ್ರಕಾಶಕ, ಮುದ್ರಕ, ಲೈಬ್ರೇರಿಯನ್, ಕಾರಕೂನ, ವಕೀಲ,ತಪಾಸಣೆಗಾರ,ಕಲಾಕಾರ, ಇತ್ಯಾದಿ ಹುದ್ದೆಗಳನ್ನೂ ವಿಶ್ವವಿದ್ಯಾಲಯ, ಬ್ಯಾಂಕ, ಸ್ಟೇಟ ಅಕೌಂಟ್ಸ, ಶಿಕ್ಷಣ ಖಾತೆ, ಎ. ಜಿ. ಆಫೀಸ, ಎ. ಐ. ಆರ್. ಇತ್ಯಾದಿ ಖಾತೆಗಳನ್ನೂ ಈ ಸ್ಥಾನದಿಂದಲೇ ಪರಿಶಿಲೀಸಬೇಕು.

ಷಷ್ಠ ಸ್ಥಾನ : ಶತ್ರು, ರೋಗ, ಚೋರಭಯ, ಅಗ್ನಿಭಯ, ಅನೇಕ ತರದ ಸಂಕಟ, ಅಪಮಾನಕಾರಕ ಪ್ರಸಂಗ, ಅಪಘಾತ, ಶಿಕ್ಷೆ, ದಂಡ, ಹಿಂಬಡತಿ (Punishment and reversion) ಇತ್ಯಾದಿ ವಿಷಯಗಳನ್ನೂ, ಕಾರಖಾನೆ, ಗಿರಣಿ ಒಡೆಯರು, ವೇತನ ಅಡಚಣೆ, ದನಕರು, ಡಾಕ್ಟರ, ಸರ್ಜನ, ನರ್ಸ, ಕಂಪೌಂಡರ, ರಸಾಯನ ಶಾಸ್ತ್ರಜ್ಞ (chemist and druggist) ಇತ್ಯಾದಿ ಹುದ್ದೆಗಳನ್ನೂ, ಒಕ್ಕಲುತನ ಖಾತೆ, ಪಶು ಸಂಗೋಪನ ಖಾತೆ, ವೆಟರಿನರಿ ಖಾತೆ, ವೈದ್ಯಕೀಯ ಖಾತೆ, (Public

health and Medicine), ಆಹಾರ ಖಾತೆ, ಔಷಧೀ ಕಾರಖಾನೆ ಇತ್ಯಾದಿ ಖಾತೆಗಳನ್ನೂ ಈ ಸ್ಥಾನದ ಮೇಲಿಂದಲೇ ಪರಿಶೀಲಿಸಬೇಕಾಗುತ್ತದೆ.

ಸಪ್ತಮ ಸ್ಥಾನ : ಪಾಲಿನಿಂದ ವ್ಯಾಪಾರ, ಕಮೀಶನ್ ಏಜೆನ್ಸಿ, ದಿವಾಣಿ ಖಟ್ಲೆಗಳಲ್ಲಿ ಯಶಸ್ಸು, ಪಾದಸ್ಪರ್ಧೆ, ಚುನಾವಣೆಗಳಲ್ಲಿ ಯಶಸ್ಸು, ವ್ಯಾಪಾರ ಹಾಗೂ ಲೇವಾದೇವಿ, ಪ್ರವಾಸ, ದೂರದ ಪ್ರವಾಸ (Tour and abroad) ಇತ್ಯಾದಿ ವಿಷಯಗಳನ್ನೂ ಪರದೇಶದಲ್ಲಿಯ ಕೆಲಸ, ವಿದೇಶೀ ಬ್ಯಾಂಕಿನಲ್ಲಿಯ ಕೆಲಸ, ಪರಪ್ರಾಂತದಲ್ಲಿಯ ಕೆಲಸ, ಸಾರ್ವಜನಿಕ ಸಂಬಂಧ ಬರುವ ಉದ್ಯೋಗಗಳು.

ಅಷ್ಟಮ ಸ್ಥಾನ : ಆಕಸ್ಮಿಕ ಧನಯೋಗ, ಸಟ್ಟಾ, ಲಾಟರಿ, ರೇಸ, ಆಕಸ್ಮಿಕ ಹಾನಿ, ಚೋರಭಯ, ಅಗ್ನಿ ಭಯ, ಅಪಘಾತ, ಲಂಚದ ವಿಷಯ, ಮೃಗ-ಪಕ್ಷಿ, ಪಶು-ಕೀಟಕಗಳ ಭಯ ಹಾಗೂ ಸಂಬಂಧ ಇತ್ಯಾದಿ ವಿಷಯ ಗಳನ್ನೂ ಗ್ರ್ಯಾಚ್ಯುಯಿಟಿ, ನಿವೃತ್ತಿ ವೇತನ, ಪ್ರಾವ್ಹಿಡೆಂಟ ಫಂಡ, ಸರಕಾರದ ಸಹಾಯ ಇತ್ಯಾದಿ ವಿಷಯಗಳನ್ನೂ ಈ ಸ್ಥಾನದಲ್ಲಿ ನೋಡಬೇಕಾಗುತ್ತದೆ.

ನವಮ ಸ್ಥಾನ : ದೈವಾನುಕೂಲತೆ, ಸುದೈವ, ದೈವಬೆಂಬಲ ಇತ್ಯಾದಿ ವಿಷಯಗಳನ್ನೂ I.A.S., I.C.S., I.F.S. ಇತ್ಯಾದಿ ಹುಟ್ಟು ಅಧಿಕಾರಿಗಳ ಹುದ್ದೆಗಳನ್ನೂ ಯೂನಿಯನ್ ಸರ್ವ್ಹಿಸ, ಪಬ್ಲಿಕ್ ಸರ್ವ್ಹಿಸ್ ಇತ್ಯಾದಿ ಪರೀಕ್ಷೆ ಗಳಲ್ಲಿ ತೇರ್ಗಡೆ ಹೊಂದಿ ಅಧಿಕಾರ ಗ್ರಹಿಸುವದಕ್ಕೂ ಈ ಸ್ಥಾನವನ್ನೇ ನೋಡುತ್ತಾರೆ. ಯಾವದೇ ಖಾತೆಯ ಉನ್ನತ ವರಿಷ್ಠ ಅಧಿಕಾರಿಗಳಾಗಲು ಈ ಸ್ಥಾನವೇ ಪೂರಕವಾಗಿರುತ್ತದೆ. ಶಿಕ್ಷಣ ಖಾತೆ, ನ್ಯಾಯ ಖಾತೆ ಇತ್ಯಾದಿ ಖಾತೆಗಳಿಗೂ, ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೂ, ಚೇರಮನ್ನ, ಅಧ್ಯಕ್ಷ, ಕಾರ್ಯದರ್ಶಿ, ಮೇಯರ, ಉಪಕುಲಪತಿ, ಸಚಿವ, ಡೈರೆಕ್ಟರ, ಕಲೆಕ್ಟರ, ಕಮೀಶನರ, ನ್ಯಾಯಾಧೀಶ, ಗವರ್ನರ, ಯಾವದೇ ಖಾತೆಯ ಉಚ್ಚ ಅಧಿಕಾರಿ, ಕೌನ್ಸಿಲರ, ಕಾರ್ಪೊರೇಟರ, ಸಿನೇಟ, ಸಿಂಡಿಕೇಟ M.L.A., M.P. ಮೊದಲಾದ ಗೌರವ ಹುದ್ದೆಗಳಿಗಳಿಗೂ ಈ ಸ್ಥಾನವನ್ನೇ

ನೋಡುತ್ತಾರೆ. ದೂರದ (Abroad), ಪ್ರವಾಸ ಪ್ರಚಾರ, ಉದ್ಯೋಗದ ಪ್ರಚಾರ, ನಾಮೆ ( Goodwill ), ಜನಪ್ರಿಯತೆ ಇತ್ಯಾದಿ ವಿಷಯಗಳಿಗೂ ಪರದೇಶದಲ್ಲಿ ಕೆಲಸ ಮಾಡುತ್ತಿರುವವರಿಗೂ ಈ ಸ್ಥಾನವನ್ನೇ ನೋಡ ಬೇಕಾಗುತ್ತದೆ.

ದಶಮ ಸ್ಥಾನ : ಉದ್ಯೋಗ ಇದರ ಎರಡನೆಯ ಅರ್ಥವೆಂದರೆ ದಶಮ ಸ್ಥಾನ. ಯಾವದೇ ಉದ್ಯೋಗ, ಧಂದೆ ವ್ಯಾಪಾರಗಳಿಗೆ, ಸರಕಾರ ದಿಂದ ಅನುಕೂಲತೆ, ಹಾಗೂ ಜನಾನುಕೂಲತೆ, ದ್ರವ್ಯಾರ್ಜನೆ (ಸ್ವಂತ), ಸಮಾಜದಲ್ಲಿ ಮಾನಸನ್ಮಾನ ಇತ್ಯಾದಿ ವಿಷಯಗಳನ್ನೂ ನೌಕರಿಯಲ್ಲಿ ಯಾವ ತೊಂದರೆ ಇಲ್ಲದೆ ನಿವೃತ್ತಿಯಾಗುವದಕ್ಕೂ ಈ ಸ್ಥಾನವನ್ನೇ ನೋಡುತ್ತಾರೆ. ಖಾತೆಗಳ ಪರೀಕ್ಷೆಯಲ್ಲಿ ಯಶಸ್ಸು ಹೊಂದಿ ನೌಕರಿಯಲ್ಲಿ ಬಡತಿ ಹಾಗೂ ಕಾಯಮ ಆಗುವದಕ್ಕೂ ಮೇಲಧಿಕಾರಿಗಳ ಕೃಪೆಗೂ ಇಲ್ಲವೆ ಅವಕೃಪೆ, ಕಿರುಕುಳ, ಉಪದ್ರವಕ್ಕೂ ಈ ಸ್ಥಾನವನ್ನೇ ನೋಡುವರು. ಸೀನಿಯಾರಿಟಿ ಮೇಲಿಂದಾಗಲೀ ಆಫಿಸಿಏಟಿಂಗ ತಾತ್ಕಾಲಿಕ ಬಡತಿಗಾಗಿಯೂ ಈ ಸ್ಥಾನ ವನ್ನೇ ನೋಡುತ್ತಾರೆ. ನ್ಯಾಯ ಖಾತೆ, ಕೂಲಿಕಾರ ಖಾತೆ, ಸಮಾಜ ವಿಕಾಸ ಹಾಗೂ ಕಲ್ಯಾಣ ಖಾತೆ ವೈದ್ಯಕೀಯ ಖಾತೆಗೂ ಯಾವದೇ ಕಾರಖಾನೆ ಯಲ್ಲಿಯ ಕೆಲಸಕ್ಕೂ ಗಣಿ, ಎಣ್ಣೆ ಖಾತೆ ಈ ಮೊದಲಾದ ಖಾತೆಗಳಿಗಾಗಿ ಈ ಸ್ಥಾನವನ್ನೇ ನೋಡಬೇಕಾಗುತ್ತದೆ.

ಏಕಾದಶ ಸ್ಥಾನ : ಪಾಲಿನಿಂದ ವ್ಯಾಪಾರ, ಕಮೀಶನ್ ಎಜೆನ್ಸಿ, ಚುನಾವಣೆಗಳಲ್ಲಿ ಯಶಸ್ಸು, ಎಲ್ಲ ತರದ ಲಾಭ, ಮಾರಾಟ ತೆರಿಗೆ ಹಾಗೂ ವರಮಾನ ತೆರಿಗೆಗಳ ಖಾತೆಗೂ, ಕಸ್ಟಮ ಖಾತೆಗೂ ಈ ಸ್ಥಾನವನ್ನೇ ನೋಡ ಬೇಕಾಗುತ್ತದೆ. ವಾಹನ ಸೌಖ್ಯ, ಮಿತ್ರ ಸೌಖ್ಯ, ದ್ರವ್ಯಲಾಭ ಇತ್ಯಾದಿ ವಿಷಯಗಳಿಗೂ ಈ ಸ್ಥಾನವನ್ನೇ ನೋಡುತ್ತಾರೆ.

ದ್ವಾದಶ ಸ್ಥಾನ : ಕಾಲಾಬಜಾರ, ಫೌಜದಾರೀ ಕೇಸುಗಳು ದಿವಾಳಿ ಖೋರ, ಋಣಬಾಧೆ, ಶತ್ರುಪೀಡೆ, ಶಿಕ್ಷೆ, ದಂಡ, ಕಾರಾಗ್ರಹ ವಾಸ,

ಅಪಮಾನ, ಲಂಚದಲ್ಲಿ ಸಿಕ್ಕುಬೀಳುವಿಕೆ, ಅಪಘಾತ ಇತ್ಯಾದಿ ವಿಷಯಗಳನ್ನು ಈ ಸ್ಥಾನದಿಂದ ಪರಿಶೀಲಿಸುತ್ತಾರೆ. ಜೇಲು ಖಾತೆ, ಕೈದಿಗಳ ಸಂಬಂಧ, ಮತ್ತು ಮೀನುಗಾರಿಕೆ ಖಾತೆ, ಲಂಚ ನಿರ್ಮೂಲನ ಖಾತೆ ಇತ್ಯಾದಿ ಈ ಸ್ಥಾನದಿಂದಲೇ ನೋಡುತ್ತಾರೆ.

## ಗ್ರಹಗಳ ಮೇಲಿಂದ

ಯಾವದೇ ವ್ಯಕ್ತಿಯ ಜನ್ಮ ಕುಂಡಲಿಯಲ್ಲಿಯ ಬೇರೆ ಬೇರೆ ಗ್ರಹಗಳಿಂದ ಅನೇಕ ಸಂಗತಿಗಳು ತಿಳಿಯುತ್ತವೆ. ಪ್ರಸ್ತುತ ಈ ಪ್ರಕರಣದಲ್ಲಿ ಭಿನ್ನ ಭಿನ್ನ ಗ್ರಹಗಳ ಸಂಬಂಧಪಟ್ಟ ನೌಕರಿಗಳಾವವು, ಹುದ್ದೆ, ಖಾತೆಗಳಾವವು, ಅವನ್ನು ಹೇಗೆ ಕಂಡುಹಿಡಿಯಬೇಕು ಎಂಬುದನ್ನು ಈ ಕೆಳಗೆ ಕೊಡಲಾಗಿದೆ.

ರವಿ : ಯಾವದೇ ಖಾತೆಯ ವರಿಷ್ಠ ಅಧಿಕಾರಿ, ಸರಕಾರಿ ನೌಕರಿ ಕಾರಕ(ನ್ಯಾಯಾಧೀಶ, ಕಮೀಶನರ್, ಡೈರೆಕ್ಟರ್, ಚೇರ್ಮನ್, ರಾಜ್ಯಪಾಲ), ಯಾವದೇ ರಾಜಕೀಯ, ಸಾಮಾಜಿಕ ಕಾರ್ಯಕರ್ತ, ಸಂಘ-ಸಂಸ್ಥೆಗಳ ಗೌರವ ಹುದ್ದೆ ಪ್ರತಿನಿಧಿ, ಸದಸ್ಯ, ಸಚಿವ, ರಾಯಭಾರಿ, ರಾಜಕಾರಣಿ, ಯಾವದೇ ಕಾರಖಾನೆಗಳ ಉನ್ನತ ಅಧಿಕಾರಿ, ಯಾವದೇ ಖಾತೆಗಳ ಉನ್ನತ ಅಧಿಕಾರಿ, ಮೇಲಧಿಕಾರಿ, ಮೇಲ್ವಿಚಾರಕ.

ಚಂದ್ರ : ಹಡಗ, ಬೋಟ, ಜಹಾಜಗಳ ಸಂಬಂಧ ಬರುವ ಕೆಲಸಗಳು ಹಾಗೂ ನೀರಿನ, ಎಣ್ಣೆಯ, ಔಷಧ ಇತ್ಯಾದಿ ಪ್ರವಾಹಿ ಪದಾರ್ಥಗಳ ಸಂಬಂಧ ಬರುವ ಉದ್ಯೋಗಗಳಿಗೂ, ಹಾಲು, ಬೆಣ್ಣೆ, ಔಷಧ, ದ್ರವ ಪದಾರ್ಥ, ಮದ್ಯ ಮೊದಲಾದ ವಸ್ತುಗಳ ಕಾರಕನು ಆಹಾರಧಾನ್ಯ, ದನಕರು, ಪಶು, ಸಸ್ಯ, ಜಲಚರ ಪ್ರಾಣಿಗಳಿಗೂ ಕಾರಕನು, ಗಾಯನ, ನೃತ್ಯ, ಸಿನೇಮಾ, ನಾಟಕ, ಹಾಟೇಲ-ಬೋರ್ಡಿಂಗ, ಸ್ತ್ರೀವರ್ಗ ಮೊದಲಾದವುಗಳಿಗೂ ಕಾರಕನು. ಒಕ್ಕಲುತನ ಖಾತೆ, ಆಹಾರ ಖಾತೆ, ಪಶು ಸಂಗೋಪನ ಖಾತೆ, ತೋಟಗಾರಿಕೆ ಖಾತೆ, ಗಣಿ ಹಾಗೂ ಭೂಗರ್ಭ ಖಾತೆ, ನೇವ್ಹಿ ಇತ್ಯಾದಿ ಖಾತೆಗಳ ಕಾರಕನಿರುವನು.

ಮಂಗಳ : ಮಿಲಿಟರಿ, ಪೋಲೀಸ, ಏರ ಫೋರ್ಸ, ಹಾಗೂ ವೈದ್ಯ ಕೀಯ ಮೊದಲಾದ ಖಾತೆಗಳ ಕಾರಕನೂ ಡಾಕ್ಟರ, ಇಂಜನಿಯರ, ಬ್ಯಾಂಕ, ವಿಜ್ಞಾನಿ, ಸರ್ಜನ್, ಇನ್ಸಪೆಕ್ಟರ, ಮ್ಯಾನೇಜರ, ನರ್ಸ ಮೊದಲಾದ ಹುದ್ದೆ ಗಳ ಕಾರಕನೂ ಯಂತ್ರ, ವಿದ್ಯುಚ್ಛಕ್ತಿ, ಶಸ್ತ್ರಾಸ್ತ್ರ, ಮದ್ದು-ಗುಂಡು ಇತ್ಯಾದಿ ವಿಷಯಗಳ ಕಾರಕನೂ ಕಬ್ಬಿಣ, ಉಕ್ಕು, ಮದ್ಯ, ಅಫು, ಗಾಂಜಾ ಮೊದ ಲಾದ ಮಾದಕ ಪದಾರ್ಥಗಳ ಮೇಲೂ ಔಷಧಗಳ ಮೇಲೂ, ಯಾವದೇ ಯಂತ್ರಗಳ ಮೇಲೆ ಪ್ರಭುತ್ವ ಅಲ್ಲದೆ ಚಾಲಕತ್ವದ ಕಾರಕನೂ ಇರುವನು.

ಬುಧ : ಅಂಚೆ, ಬ್ಯಾಂಕ, ಸಾರಿಗೆ ಹಾಗೂ ಸಂಪರ್ಕ, ಮಾರಾಟ ತೆರಿಗೆ, ಆದಾಯ ತೆರಿಗೆ, ರೆವಿನ್ಯೂ ಮೊದಲಾದ ಖಾತೆಗಳ ಕಾರಕನೂ ವಿಮಾ ಏಜೆಂಟ, ಕಮೀಶನ್ ಏಜೆಂಟ, ವ್ಯಾಪಾರಿ, ಲೇಖಕ, ಮುದ್ರಕ, ಪ್ರಕಾಶಕ, ಗ್ರಂಥಕರ್ತ ಮೊದಲಾದ ಹುದ್ದೆಗಳ ಕಾರಕನೂ ಬುಧ, ಇದರ ಎರಡನೇ ಅರ್ಥವೆಂದರೆ ಕಾರಕೂನ ಎಂದು ತಿಳಿಯಬಹುದಾಗಿದೆ. ಅಂಕಿ-ಸಂಖ್ಯಾ, ಲೆಕ್ಕಪತ್ರ ಬರವಣಿಗೆ ಮೊದಲಾದವುಗಳ ಕಾರಕನೂ ದೂತ, ರಾಯಭಾರಿ ಕಾರಕನೂ ಬುಧನು.

ಗುರು : ನ್ಯಾಯ ಖಾತೆ, ಶಿಕ್ಷಣ ಖಾತೆ, ಚಾರಿಟಿ ಕಮೀಶನರ ಖಾತೆ (ಧರ್ಮ ಖಾತೆ), ವಿಶ್ವವಿದ್ಯಾಲಯ ಖಾತೆ ಈ ಮೊದಲಾದ ಖಾತೆಗಳ ಕಾರಕನೂ, ಯಾವದೆ ಖಾತೆಯ ಮೇಲಾಧಿಕಾರಿ ಹಾಗೂ ವರಿಷ್ಠ ಅಧಿಕಾರಿ, ಸಲಹೆಗಾರ, ಮಠಾಧೀಶ, ಅರ್ಚಕ, ವೇದಶಾಸ್ತ್ರ ಪಾರಂಗತ, ಬ್ಯಾರಿಸ್ಟರ, ಶಿಕ್ಷಣತಜ್ಞ.

ಶುಕ್ರ : A. I. R., ಹಾಗೂ ಲಲಿತ ಕಲೆಗೆ ಸಂಬಂಧಿಸಿದ ಎಲ್ಲ ಖಾತೆ, ಕಲಾಕೌಶಲ್ಯ, ನಯನ ಮನೋಹರ ಆಕರ್ಷಕ ವಸ್ತು, ವಿಲಾಸಿ ಹಾಗೂ ಸುಗಂಧ ದ್ರವ್ಯ, ಮಿಠಾಯಿ ಇತ್ಯಾದಿಗಳ ಮೇಲೆಯೂ ಸಾಹಿತ್ಯ, ಸಂಗೀತ, ನಾಟಕ, ನೃತ್ಯ, ಚಲಚಿತ್ರ, ಡ್ರಾಯಿಂಗ, ಪೇಂಟಿಂಗ, ಡಿಜಾಯಿನಿಂಗ ಇತ್ಯಾದಿ ವಿಷಯಗಳ ಮೇಲೆಯೂ ಯಾವದೇ ಕಲಾಕಾರ ಹಾಗೂ ವ್ಯಾಪಾರಿಗಳ ಮೇಲೆಯೂ ಕಾರಕನು ಇರುವನು.

ಶನಿ : ನ್ಯಾಯ ಖಾತೆ, ಕೂಲಿಕಾರ ಖಾತೆ, ವೈದ್ಯಕೀಯ ಖಾತೆ, ಸಮಾಜ ವಿಕಾಸ ಹಾಗೂ ಕಲ್ಯಾಣ ಖಾತೆ, ಎಣ್ಣೆ ಹಾಗೂ ಉರುವಲ ಖಾತೆ, ಇತ್ಯಾದಿ ಖಾತೆಗಳು ಕಾರಖಾನೆ, ಸ್ಥಾನಿಕ ಸ್ವರಾಜ್ಯಗಳ ಖಾತೆ, ಲೋಕೋಪಯೋಗಿ ಖಾತೆಗಳ ಕಾರಕನು; ಕಬ್ಬಿಣ, ಉಕ್ಕು, ಎಣ್ಣೆ (ಎಲ್ಲ ಪ್ರಕಾರದ) ಕಟ್ಟಿಗೆ, ಕಟ್ಟಡ ಹಾಗೂ ಇಮಾರತಿಗೆ ಬೇಕಾಗುವ ಇಟ್ಟಂಗಿ ಸಿಮೆಂಟು, ಗಚ್ಚು-ಮೊದಲಾದ ವಸ್ತುಗಳ ಕಾರಕ. ಪಶುಪಕ್ಷಿಗಳಿಗೆ ಬೇಕಾಗುವ ಧಾನ್ಯ ಹುಲ್ಲುಗಳ ಕಾರಕನು. ಕೃಷಿಜೀವಿ (Farmer or Cultivator) ವಕೀಲ, ಶ್ರಮಜೀವಿಗಳ ಕಾರಕನು.

## ರಾಶಿಗಳಿಂದ :

ಭಿನ್ನ ಭಿನ್ನ ರಾಶಿಯವರ ಗುಣಧರ್ಮಗಳು ಭಿನ್ನಭಿನ್ನವಾಗಿರುತ್ತವೆ. ಪ್ರಸ್ತುತ ಈ ಪ್ರಕರಣದಲ್ಲಿ ಆಯಾ ರಾಶಿಯ ಜನರ ಗುಣಧರ್ಮಗಳಾವವು ಎಂಬುದನ್ನು ಸ್ಥೂಲಮಾನದಿಂದ ಕೊಡಲಾಗುವದು. ಅವರವರ ಜಾತಕಗಳ ಮೇಲಿನ ಹೆಚ್ಚಿನ ವಿಷಯವನ್ನು ಕಂಡುಕೊಳ್ಳಬೇಕು.

ಮೇಷ : ರಾಶಿಯ ಜನರು ಯಾವದೇ ಕೆಲಸವು ತಮ್ಮದೇ ಹಿರಿಯತನದಲ್ಲಿ ಸಾಗಬೇಕೆಂಬ ಪ್ರವೃತ್ತಿಯುಳ್ಳವರು (ಪುಢಾರಿಗಳು), ಯಾವದೇ ಉದ್ಯೋಗದಲ್ಲಿ ನಾವೀನ್ಯತೆ ತರಲು ಯತ್ನಿಸುತ್ತಿದ್ದರೂ ಪ್ರಜಾಪ್ರಭುತ್ವ, ಲೋಕಮತವನ್ನು ಅಲಕ್ಷಿಸಿ ಜನನಿಂದೆಗೆ ಪಾತ್ರರಾಗುವರು. ಮೇಲಿಂದ ಮೇಲೆ ಸ್ಥಳಾಂತರವನ್ನು ಕೈಕೊಳ್ಳುವರು, ಯಾವದೊಂದು ಉದ್ಯೋಗದಲ್ಲಿ ಕೊನೆಯವರೆಗೆ ಉಳಿಯಲಾರರು. ವಾದ ಸ್ಪರ್ಧೆಯಲ್ಲಿ ಆಸಕ್ತರು.

ವೃಷಭ : ಯಾರೊಬ್ಬರ ವಿಶ್ವಾಸ, ಪ್ರೀತಿ, ಸ್ನೇಹ ಪ್ರಭಾವವನ್ನು (impression ಗಳಿಸುವದರಲ್ಲಿ ಪಳಗಿದವರು, ಮಾಲಕ-ಇಲ್ಲವೆ ಅಧಿಕಾರಿ

ಇರದಿದ್ದರೂ ಅಧಿಕಾರ ಹೊಂದಿದವರು, ಮ್ಯಾನೇಜರ, ಮ್ಯಾನೇಜಿಂಗ ಏಜಂಟ, ವ್ಯವಸ್ಥಾಪಕ, ಪರ್ಸನಲ್ ಅಸಿಸ್ಟಂಟ, ಹೆಡ್‌ಕ್ಲಾರ್ಕ ಏಜಂಟ, ಶೀಘ್ರಲಿಪಿಗಾರ, ರಾಯಭಾರಿ, ಕಾರಕೂನ, ನಂಬಿಗಸ್ಥ ಇತ್ಯಾದಿ ಹುದ್ದೆಗಳನ್ನು ನಿರ್ವಹಿಸುವದರಲ್ಲಿ ಪಳಗಿದವರು, ಒಂದು ಕಡೆಗೆ ಕುಳಿತು ಕೆಲಸ ಮಾಡುವವರಲ್ಲ. ಪತ್ರವ್ಯವಹಾರಕ್ಕಿಂತ ಸಮಕ್ಷಮ ಭೇಟಿ ಹಾಗೂ ಮಾತುಕತೆಯಲ್ಲಿಯೇ ಹೆಚ್ಚು ದಕ್ಷರಿರುತ್ತಾರೆ. ಪ್ರಜಾಪ್ರಭುತ್ವ ಹಾಗೂ ಲೋಕಮತಕ್ಕೆ ಶಿರಬಾಗುತ್ತಾರೆ.

ಮಿಥುನ : ಅಸ್ಥಿರ, ಚಂಚಲ, ಅನೇಕ ಕೆಲಸಗಳನ್ನು ಒಮ್ಮೆಲೆ ತೆಗೆದುಕೊಳ್ಳುವ ಪ್ರವೃತ್ತಿ. ಯಾವ ಕೆಲಸದಲ್ಲಿ ನಾವೀನ್ಯತೆ, ಸಂಶೋಧನ ಹಾಗೂ ಬುದ್ಧಿಗೆ ಬೆಲೆ ಇರುವದಿಲ್ಲವೋ ಅಂಥ ಕೆಲಸವನ್ನು ಮಾಡಲು ಬಯಸುವದಿಲ್ಲ. ಹೊಸ ಸಂಶೋಧನೆ, ಬುದ್ಧಿವಂತಿಕೆಯನ್ನು ಪ್ರದರ್ಶಿಸಲು (ತೋರಿಸಲು) ಅವಕಾಶ ಸಿಗದೇ ಚಡಪಡಿಸುತ್ತ ಅಶಾಂತರಾಗುವರು. ಯಾವ ಕೆಲಸದಲ್ಲಿ ಮನೋರಂಜನವೂ, ಬುದ್ಧಿಯ ಉಪಯೋಗವೂ ಇರುವದಿಲ್ಲವೋ ಅಂಥ ಕಾರ್ಯವನ್ನು ಇರಾದೆ ಮಾಡುವದಿಲ್ಲ. ಯಾವಾಗಲೂ ಜನರ ತಪ್ಪನ್ನೇ ತೆಗೆಯುವದರಲ್ಲಿ ಹುಡುಕುವದರಲ್ಲಿ, ತಪಾಸಿಸುವದರಲ್ಲಿ ಸಿದ್ಧಹಸ್ತರು. ಯಾವದೊಂದು ಕೆಲಸದಲ್ಲಿ ಮೌಲಿಕವಾದುದನ್ನು (Originality) ಉತ್ತಮ ಡ್ರಾಫ್ಟ ಬರೆಯುವದರಲ್ಲಿ ಪಳಗಿದವರು. ಕಾಯದೆಯ ಸಲಹೆ ಕೊಡುವದರಲ್ಲಿ ಸಿದ್ಧಹಸ್ತರು. ಪ್ರಜಾಪ್ರಭುತ್ವ ಹಾಗೂ ಲೋಕಮತಗಳಿಗೆ ಶಿರಬಾಗದೆ ಜನನಿಂದೆಗೆ ಪಾತ್ರರಾಗುವರು. ಮಾತಿನ ವೈಖರಿಯಲ್ಲಿ ಚಪಲರು. ಸುಶಿಕ್ಷಿತ ಹಾಗೂ ಬುದ್ಧಿಜೀವಿಗಳು ಮಾತ್ರ ಇವರನ್ನು ಕೊಂಡಾಡುವರು; ಇತರರು ಯಾವಾಗಲೂ ಇವರನ್ನು ದ್ವೇಷಿಸುತ್ತಾರೆ. ಕಾರಕೂನಿಕೆ ಇವರಿಗೆ ಸಲ್ಲುವದಿಲ್ಲ.

ಕರ್ಕ : ಈ ರಾಶಿಯ ಜನರು ಭಾವನಾಪ್ರಧಾನರಾಗಿರುತ್ತಾರೆ. ಯಾವ ಕೆಲಸವು ಇವರ ಭಾವನೆಗೆ ವಿರುದ್ಧವಾಗಿರುವದೋ, ಅಪಮಾನಕಾರಕವಾಗುವದೋ ಅಂಥ ಕೆಲಸವನ್ನು ಮಾಡಲಾರರು. ಅಧಿಕಾರಿಗಳ ಅಜ್ಞೆ

ಎಂದರೆ ಟಾಂಗಾದ ಕುದುರೆಯಂತೆ ಮನ್ನಿಸಬೇಕೆಂಬ ನಿಯಮವನ್ನು ಇವರು ಯಾವಾಗಲೂ ಉಲ್ಲಂಘಿಸುವರು.

ಈ ರಾಶಿಯವರು ಸಮಾಜದ ಜನರಿಗೆ,ಸಮಾಜಕ್ಕೆ ಹಾಗೂ ಇತರರಿಗೆ ಯಾವಾಗಲೂ ಅಂಜುವರು. ಜನರ ನಿಂದೆಗೆ ಎಲ್ಲಿ ಪಾತ್ರರಾಗುವರೋ ಜನರು ಎಲ್ಲಿ ಹೆಸರಿಡುವರೋ ಟೀಕೆ ಮಾಡುವರೋ ಎಂಬ ಭಯ-ಭೀತಿ ಯಾವಾಗಲೂ ಇವರನ್ನು ಕಾಡುತ್ತದೆ. ಅಂತೆಯೇ ಇವರಿಂದ ಇತರರ ಮೇಲೆ ಹಕ್ಕನ್ನು ಚಲಾಯಿಸಲು ಆಗುವದಿಲ್ಲ. ಸಲಹೆಯನ್ನೀಯುವದು ಹಾಗೂ ಸಾಹಸದ ಕೆಲಸ ಮಾಡುವದು ಇವರಿಗೆ ಸಲ್ಲದು. ಇವರು ಶ್ರೇಷ್ಠ ನಂಬಿಗಸ್ಥ ನೌಕರರು. ಆದರೆ ಅಧಿಕಾರಿಗಳಾಗಲು ಅನರ್ಹರು. ಶ್ರೇಷ್ಠ ವ್ಯವಹಾರ ಕುಶಲರೂ, ವ್ಯಾಪಾರ ತಜ್ಞರೂ ಇದ್ದು ಸಹಿಷ್ಣುತೆ, ಧೃಢನಿಶ್ಚಯ, ಗಂಭೀರ ಸ್ವಭಾವ, ಮಿತಭಾಷೆಯವರು ಇರುತ್ತಾರೆ. ಪ್ರವಾಹಿ ಪದಾರ್ಥಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳಲ್ಲಿಯೂ ಎಲ್ಲ ಖಾತೆಗಳಲ್ಲಿಯೂ ಪ್ರವೀಣರು.

ಸಿಂಹ: ಅಧಿಕಾರ, ವರ್ಚಸ್ಸು, ಪ್ರಭುತ್ವ ಇರುವ ಸ್ಥಳದಲ್ಲಿಯೇ ಇವರು ನೌಕರಿ ಮಾಡಬಲ್ಲರು ಹಾಗೂ ಹುಕುಮು ಚಲಾಯಿಸಬಲ್ಲರು. ಅಧಿಕಾರವಿಲ್ಲದಿದ್ದರೂ ಅಧಿಕಾರ ಚಲಾಯಿಸುವರು. (Better to reign in hell than to serve in heaven)

ಈ ರಾಶಿಯವರಿಗೆ ಹಣ ಇಲ್ಲದಿದ್ದರೂ ನಡೆದೀತು ಆದರೆ ಅಧಿಕಾರ ಇಲ್ಲದಿದ್ದರೆ ನೀರಿನಿಂದ ಹೊರಚಲ್ಲಿದ ಮೀನಿನಂತಾಗುವರು. ಇವರು ಸ್ವಭಾವದಿಂದ ಉದಾರಿಗಳೂ ನಿಷ್ಕಪಟಿಗಳೂ ಗರ್ವಿಷ್ಠರೂ ಕಾರ್ಯತತ್ಪರರೂ ಯಾವಾಗಲೂ ಆತ್ಮಪ್ರಶಂಸೆ ಬಯಸುವವರೂ ಇರುತ್ತಾರೆ. ಯಾವದೊಂದು ಕಾರ್ಯದ ಮುಂದಾಳುತನವನ್ನಾಗಲಿ ಹೊಣೆಗಾರಿಕೆಯನ್ನಾಗಲಿ ದಕ್ಷ ರೀತಿಯಿಂದ ನಿರ್ವಹಿಸಬಲ್ಲರು. ಯಾವದೊಂದು ಖಾತೆಯ ಅಧಿಕಾರಿಗಳಾಗಲು ಅರ್ಹರು.

ಕನ್ಯಾ : ಸೇವಾವೃತ್ತಿ, ಹೇಳಿದಂತೆ ಕೇಳುವ ಪ್ರವೃತ್ತಿಯುಳ್ಳವರಿದ್ದು ಯತ್ನದಿಂದಲೂ ವ್ಯವಹಾರ ಚತುರತೆಯಿಂದಲೂ, ಕಾರ್ಯದಕ್ಷತೆ ದಲೂ ಯಜಮಾನರ ಇಲ್ಲವೆ ಅಧಿಕಾರಿಗಳ ಉದ್ಯೋಗಕ್ಕೆ ಸಹಾಯ ಡುವದರಲ್ಲಿ ಬಲಗೈಯಂತಿರುತ್ತಾರೆ.

ಚಿಕಿತ್ಸಕ ಬುದ್ಧಿ, ನಿರೀಕ್ಷಣೆ, ಪರೀಕ್ಷಣ, ಆತ್ಮಪೌರುಷ, ಕರ್ತವ್ಯ ತೆ, ಆಜ್ಞಾಪಾಲನೆ, ಎಲ್ಲರೊಂದಿಗೂ ಹೊಂದಿಕೊಂಡು ನಡೆಯುವ ವೃತ್ತಿ ಈ ಎಲ್ಲ ಗುಣಗಳುಳ್ಳವರಿದ್ದು ಪ್ರಾಯಿವ್ಹೇಟ ಸೆಕ್ರೆಟರಿ, ಹೆಡ್ ರ್, ಶಿಘ್ರ ಲಿಪಿಗಾರ, ಏಜಂಟ ಇತ್ಯಾದಿ ಕೆಲಸಗಳಿಗೆ ಅರ್ಹರು. ಯಾವು ಂದು ಯೋಜನೆಯ ಅಥವಾ ಕಾರ್ಯಕ್ಕೆ ಅಥವಾ ಸಮಾರಂಭದ ಪೂರ್ವ ಾರಿ (ಪೂರ್ವ ಕರ್ಮ) ಮಾಡುವದರಲ್ಲಿ ಪಳಗಿದವರಿರುತ್ತಾರೆ.

ತುಲಾ : ಸಾರ್ವಜನಿಕರ ಸಂಬಂಧ ಬರುವ ಕೆಲಸಗಳಲ್ಲಿ ತತ್ಪರರು. -ಕೈ, ಅರಿವೆ-ಅಂಚಡಿಗಳು ಸ್ವಲ್ಪೂ ಹೊಲಸಾಗದಿರುವ (ಅರಿವೆಗಳ ಕೂಡ ಮುರಿಯದಿರುವ) ಕೆಲಸವನ್ನು ಮಾತ್ರ ಇವರು ನಿರ್ವಹಿಸ ರು. ಕಾರಖಾನೆ-ಗಣಿ-ಗಿರಣಿ ಮೊದಲಾದ (ಶಾರೀರಿಕ) ಶ್ರಮದ ಸಗಳನ್ನು ಮಾಡಲು ಒಪ್ಪುವದಿಲ್ಲ.

ಬೇರೆಯವರ ಮನಸ್ಸಿನ ವಿಚಾರ ತಿಳಿದುಕೊಳ್ಳಬಲ್ಲ ಕಲೆ ಇವರಿಗೆ ಗತವಿರುತ್ತದೆ. ಸಾಹಿತ್ಯ, ಸಂಗೀತ, ನಾಟ್ಯ ಮೊದಲಾದ ಕಲೆಗಳಲ್ಲಿ ಣರಿದ್ದು ಸ್ವಚ್ಛತೆ, ಅಚ್ಚುಕಟ್ಟುತನ, ಶೃಂಗಾರಪ್ರಿಯತೆ ಹಾಗೂ ವಿಲಾಸಿ, ೀಗಿಗಳೂ ಸದಾನಂದರೂ, ಅಲಂಕಾರಪ್ರಿಯರೂ ಸಭ್ಯ, ಸುಶಿಕ್ಷಿತ, ಸಂಸ್ಕೃತ ಸ್ವಭಾವದವರಿರುವ ಕಾರಣ ಜಗಳ-ತಂಟೆ, ಸಾಹಸದ ಕೆಲಸ ರಿಗೆ ಒಗ್ಗುವದಿಲ್ಲ. ತಪಾಸಣೆ (inspection) ಕೆಲಸವನ್ನು ಒಳ್ಳೆಯ ತಿಯಿಂದ ನಿರ್ವಹಿಸಬಲ್ಲರು.

ವೃಶ್ಚಿಕ : ಇವರು ಅತ್ಯಂತ ಗಹನ ಹಾಗೂ ಧೂರ್ತ ವಿಚಾರದ ಸ ಮಾಡುವದರಲ್ಲಿ ಪಳಗಿದವರು, ಭಾವನೆ-ಕಲ್ಪನೆ-ಊಹೆಗಳಿಗೆ ಎಂದೂ

ಮಹತ್ವ ಕೊಡುವದಿಲ್ಲ. ನಿಂದೆ–ಸ್ತುತಿ–ಹೊಗಳಿಕೆ–ತಾತ್ಸಾರ-ಭಯ–ಮತ್ಸರ ಈ ಯಾವುದರ ಪರವೆ ಇಲ್ಲದೆ ತಮ್ಮ ಇಷ್ಟದಂತೆಯೇ ಕಾರ್ಯ ಸಾಧಿಸುವ ಪ್ರವೃತ್ತಿಯುಳ್ಳವರು. ದೊಡ್ಡ ದೊಡ್ಡ ಕಾರಖಾನೆಗಳಲ್ಲಾಗಲಿ ಅಥವಾ ಯಾವದೇ ಖಾತೆಯಲ್ಲಾಗಲಿ ವರಿಷ್ಠ ಅಧಿಕಾರಿಗಳಾಗಿಯೂ (works manager) ಕಾರ್ಯ ನಿರ್ವಹಿಸಬಲ್ಲರು.

ಅಧಿಕಾರಿ, ದಿವಾಣ, ಪರರಾಷ್ಟ್ರ ಮಂತ್ರಿ, ಗೃಹಮಂತ್ರಿ ಮೊದಲಾದ ಕಾರ್ಯವನ್ನು ಮಾಡುವದರಲ್ಲಿ ಪಳಗಿದವರಿದ್ದರೂ ಲೋಕಮತವನ್ನು ಗಳಿಸಲಾರರು. ವಿರೋಧಿಗಳನ್ನು ಬಗ್ಗುಬಡಿಯುವರಲ್ಲದೆ ದಿಟ್ಟರೂ, ಸಾಹಸಿಗಳೂ, ಅಭಿಮಾನಿಗಳೂ ಇದ್ದು ನಿರ್ದಯರೂ ಸೇಡು ತೀರಿಸಿ ಕೊಳ್ಳುವ ಪ್ರವೃತ್ತಿಯವರೂ ಇದ್ದು ಶೌರ್ಯ-ಪರಾಕ್ರಮ ಗುಣವವರೂ, ಹೊರಂಗಣ ಕಾರ್ಯನಿರ್ವಹಣಾ ಕೆಲಸಗಳಲ್ಲಿ (Outdoor executive work) ಪ್ರವೀಣರು.

ಧನು : ಮಾಲಕ ಹಾಗೂ ನೌಕರ ಈ ಎರಡೂ ಕಾರ್ಯಗಳನ್ನು ಉತ್ತಮವಾಗಿ ಮಾಡಬಲ್ಲರು. ಸ್ವತಂತ್ರ ಉದ್ಯೋಗ–ವ್ಯಾಪಾರವನ್ನಾಗಲಿ, ನೌಕರಿಯನ್ನಾಗಲಿ ಒಳ್ಳೆಯ ರೀತಿಯಿಂದ ನಿರ್ವಹಿಸಬಲ್ಲರು. ಕೈಯಲ್ಲಿ ತೆಗೆದುಕೊಂಡ ಯಾವದೇ ಕಾರ್ಯದಲ್ಲಿ ಪೂರ್ಣ ಮುಗಿಯುವ ವರೆಗೆ ದುಡಿಯುವದೇ ಇವರ ಗುಣದಲ್ಲಿರುವ ವೈಶಿಷ್ಟ್ಯ.

ಇವರು ಉದಾರಿಗಳೂ, ಸತ್ಯಪ್ರಿಯರೂ, ಮಹತ್ವಾಕಾಂಕ್ಷಿಗಳೂ, ಉತ್ಸಾಹಿಗಳೂ ಇದ್ದು ಮಾನಮರ್ಯಾದೆಯಗೋಸ್ಕರ ಬಡಿದಾಡುವವರೂ ಇರುತ್ತಾರೆ. ಆದರೆ ಸ್ವಚ್ಛತೆ, ಅಲಂಕಾರ, ಅಚ್ಚುಕಟ್ಟುತನ ಈ ಗುಣಗಳ ಕೊರತೆ ಇರುವದಲ್ಲದೆ ಸೂಕ್ಷ್ಮ ಕೆಲಸವು ಇವರಿಗೆ ಬಗೆಹರಿಯುವದಿಲ್ಲ. ಯಾವದೇ ಕೆಲಸವು ಪರಿಣಾಮಕಾರಿಯಾಗಬೇಕೆಂಬುದೇ ಇವರ ಧ್ಯೇಯ ವಿದ್ದು ಸುಂದರ, ಸಾಲಂಕೃತವಾಗಿರಬೇಕೆಂಬ ಉದ್ದೇಶವಿರುವದಿಲ್ಲ. ಟೇಬಲ್ ಕೆಲಸ ಇವರಿಗೆ ಬಗೆಹರಿಯದಿದ್ದರೂ ನಿರ್ವಹಣ ಕೆಲಸವನ್ನಾಗಲಿ, ಮೇಲ್ವಿಚಾರಣೆ ಕೆಲಸವನ್ನಾಗಲಿ ಮಾಡುವವರಲ್ಲಿ ದಕ್ಷರಿರುತ್ತಾರೆ.

ಮಕರ : ಇವರು ಯಾವದೇ ಕಾರ್ಯ ಅತ್ಯಂತ ವ್ಯವಸ್ಥಿತ ರೀತಿಯಲ್ಲಿ ಮಾಡುವ ಪ್ರವೃತ್ತಿಯುಳ್ಳವರು, ಲೆಕ್ಕಪತ್ರದಲ್ಲಿ ಕುಶಲರು, ಕಾರ್ಯತತ್ಪರತೆಯುಳ್ಳವರು, ಯೋಜನೆ ಹಾಗೂ ಸಂಘಟನಾ ಕಾರ್ಯದಲ್ಲಿ ಸಮರ್ಥರು. ವಿರೋಧಿಗಳ ಮತವನ್ನು ಪಡೆಯುವದರಲ್ಲಿ ಕೂಡ ಪ್ರವೀಣರು.

ಕುಶಾಗ್ರಮತಿಯವರೂ, ಚಾಣಾಕ್ಷರೂ, ಲೋಭಿಗಳೂ ಮತ್ಸರ ಸ್ವಭಾವದವರೂ, ಸಂಶಯಖೋರರೂ ಇವರಿದ್ದು, ಮೇಲ್ವಿಚಾರಣೆ ಕೆಲಸದಲ್ಲಿ ಪಳಗಿದವರು. ವ್ಯವಹಾರ ಕುಶಲರಾದ ಇವರು ವ್ಯಾಪಾರದಲ್ಲಿ ದಕ್ಷರು. ಅಧಿಕಾರವಿಲ್ಲದೆ ಯಾವ ಕೆಲಸವನ್ನೂ ಮಾಡಲಾರರು. ಸೇವಾವೃತ್ತಿ ಇವರಿಗೆ ಸೇರದು.

ಕುಂಭ : ಯಾವದೊಂದು ಕೆಲಸದಲ್ಲಿ ನಾವೀನ್ಯತೆ ಮಾಡುವದರಲ್ಲಿಯೂ, ಹೊಸ ಶೋಧ, ಹೊಸ ಯೋಜನೆ, ಹೊಸ ವಿಚಾರಗಳಲ್ಲಿ ಪ್ರವೀಣರು. ಜಾಹೀರಾತು, ಪ್ರಸರಣ ಕಾರ್ಯ (Propaganda) ಗಳಲ್ಲಿ ದಕ್ಷರು. ಜನಸಾಮಾನ್ಯರ ವಿಶ್ವಾಸವನ್ನು ಪಡೆಯುವದರಲ್ಲಿ ಪ್ರವೀಣರು. ಯಾವುದೊಂದು ಹೊಸ ಕಾರ್ಯದ ಸಂಸ್ಥಾಪಕರು.

ನಿರುಪದ್ರವಿ, ಸಹನಶೀಲತೆ, ಪ್ರೇಮ, ದಯೆ, ಔದಾರ್ಯ, ಉಪಕಾರ ಗುಣದವರಿದ್ದು ಮಿತಭಾಷಿಗಳೂ ಏಕಾಂತ ಪ್ರಿಯರೂ ಇರುವರಲ್ಲದೆ ತಪಾಸಣೆಯ ಕೆಲಸದಲ್ಲಾಗಲಿ, ಲೇಖನ ಕಲೆಯ ಕೆಲಸದಲ್ಲಾಗಲಿ ಪರಿಪಕ್ವತೆ ಹೊಂದಿದವರಿರುತ್ತಾರೆ.

ಮೀನ : ಇವರು ಭಾವನಾಮತಿಗಳು. ಯಾವುದೊಂದು ಘಟನೆ ಹಾಗೂ ಸಂಗತಿಯನ್ನು ಮನಸ್ಸಿಗೆ ಬಹುಬೇಗ ಹಚ್ಚಿಕೊಳ್ಳುವ ಸ್ವಭಾವದವರು. ಪರಿಸ್ಥಿತಿಯ ಭೇದವನ್ನು ಮಾಡಲಾರರು. ಉದ್ಯೋಗ, ಧಂದೆ, ನೌಕರಿಗಳಲ್ಲಿ ಚಿಕಿತ್ಸೆ ಬಹಳ. ಯಾವದೇ ಕೆಲಸ ಅಥವಾ ವಿಷಯದಲ್ಲಿ

ತೀವ್ರ ನಿರ್ಣಯಕ್ಕೆ ಬರಲಾರರು—ಹಾಮಲೆಟ್‌ನಂತೆ or to do or not to do.

ಮನಸ್ಸಿನ ವಿರುದ್ಧವಾಗಿರುವ ನೌಕರಿ, ಉದ್ಯೋಗಗಳಲ್ಲಿ ಇವರು ಅಸುಖಿಗಳಿರುತ್ತಾರೆ. ಮನೋವಿಕಾರದ ಸ್ವಭಾವವಿರುವ ಇವರು ಜನರ ಸಹಾನುಭೂತಿಯನ್ನು ಯಾವಾಗಲೂ ಅಪೇಕ್ಷಿಸುವಂಥವರು; ಸತ್ಯ, ನ್ಯಾಯ, ಪ್ರಾಮಾಣಿಕತೆ, ಕಾರ್ಯದಕ್ಷತೆಗಳಲ್ಲಿ ಪ್ರಖ್ಯಾತರು. ಸಮಾಜಪ್ರಿಯರಾದ ಇವರು ಸ್ವಂತದ ಹಾನಿಯನ್ನು ಲೆಕ್ಕಿಸದೆ ಪರೋಪಕಾರ ಮಾಡುವ ಪ್ರವೃತ್ತಿಯುಳ್ಳವರು.



## ಅ) ಎಲ್ಲ ಖಾತೆಗಳ ಸಾಮಾನ್ಯ ಹುದ್ದೆಗಳು
**Common (Ministerial) Posts in all Departments**

ಯಾವುದೇ ಖಾತೆಯನ್ನು ನೋಡಿರಿ. ನಮಗೆ ಈ ಏಳು ಪ್ರಕಾರದ ಹುದ್ದೆಗಳಿದ್ದುದು (Posts) ಕಂಡುಬರುತ್ತವೆ.

(೧) Officer — ಅಮಲ್ದಾರ್ ಇಲ್ಲವೆ ಆಡಳಿತಗಾರ
(೨) ಹೆಡ್‌ಕ್ಲಾರ್ಕ್ ಅಥವಾ ಆಫೀಸ್ ಸುಪರಿಂಟೆಂಡೆಂಟ್
(೩) ಅಕೌಂಟಂಟ್ಸ್ (Accountants)
(೪) ಮೊದಲನೇ ದರ್ಜೆಯ ಕಾರಕೂನರು (First Division Clerks),
(೫) ದ್ವಿತೀಯ ದರ್ಜೆಯ ಕಾರಕೂನರು (Second Division Clerks)
(೬) ಶೀಘ್ರಲಿಪಿಗಾರರು ಮತ್ತು ಟೈಪಿಸ್ಟರು (Stenographers and Typists)
(೭) ಜವಾನರು ಹಾಗೂ ನಾಲ್ಕನೇ ದರ್ಜೆಯ ಕೆಲಸಗಾರರು (Peons, Attendants and Chowkidars).

**೧. ಅಮಲ್ದಾರ ಇಲ್ಲವೆ ಆಡಳಿತಗಾರ :**

ಈ ಆಫೀಸರರಿಗೆ ಅಮಲ್ದಾರ್, ಅಧಿಕಾರಿ, ಆಡಳಿತಗಾರ, ಸಾಹೇಬ್, ಬಾಸ್, ನಿಯಂತ್ರಕ ಎಂದು ಕರೆಯುವ ರೂಢಿ ಇದೆ. ಇನ್ನು ಕೆಲವು

ಖಾತೆಗಳಲ್ಲಿ ಮೇನೇಜರ್ ಹಾಗೂ ಸುಪರಿಂಟೆಂಡೆಂಟ್‌ರನ್ನೂ ಕೂಡ ಅಮಲ್ದಾರ್ ಎನ್ನಬಹುದಾಗಿದೆ. ಮತ್ತೆ ಕೆಲವು ಖಾತೆಗಳಲ್ಲಿ ಆಫೀಸರ್ ಅಥವಾ ಅಧಿಕಾರಿಗಳಿಗೆ ಪ್ರತ್ಯೇಕವಾದ, ವಿಶಿಷ್ಟವಾದ ಹೆಸರುಗಳಿರುತ್ತವೆ. ಉದಾಹರಣೆಗೆ : ಕಲೆಕ್ಟರ್, ಕಮೀಶನರ್, ತಹಸೀಲ್ದಾರ್, ಡೈರೆಕ್ಟರ್, ಇನ್ಸ್‌ಪೆಕ್ಟರ್, ಕಾಂಜರ್ವೇಟರ್ ಇತ್ಯಾದಿ. ಹೀಗೆ ಭಿನ್ನ ಭಿನ್ನ ಹೆಸರು ಗಳಿದ್ದರೂ ಯಾರೂ ಆಡಳಿತವನ್ನು ನಿರ್ವಹಿಸಿಕೊಳ್ಳುವರೋ, ಅವರೆಲ್ಲರೂ ಆಡಳಿತಗಾರರು. (One who is doing administrative work is an administrator.)

## ಆಫೀಸರರಲ್ಲಿಯ ಪ್ರಕಾರಗಳು :

ಈ ಅಮಲ್ದಾರ್ ಆಫೀಸರರಲ್ಲಿ ೩ ಪ್ರಕಾರಗಳಿವೆ. (೧) I. A. S. I. P. S., I. C. S , Railway Service, Postal Service, ಇತ್ಯಾದಿ ಇದಕ್ಕೆ ತತ್ಸಮವಾದ ಪರೀಕ್ಷೆಗಳನ್ನು ಪಾಸಾಗಿ ಅಧಿಕಾರಿಗಳಾಗುವ ಹುಟ್ಟು ಅಧಿಕಾರಿಗಳ (born Officers) ಒಂದು ವರ್ಗ, (೨) ಖಾತೆಯ ಕೆಳಗಿನ ದರ್ಜೆಯಿಂದ (ಕಾರಕೂನಿಕೆಯಿಂದ ಮೇಲಧಿಕಾರಿಗಳಾಗುವ, equivalent to I.A.S. Offices) ಮೇಲಧಿಕಾರಿಗಳಾಗುವ ಎರಡನೆ ವರ್ಗ, (೩) ಕೆಳಗಿನ ದರ್ಜೆಯಿಂದ ಮೇಲಧಿಕಾರಿಗಳಾಗಿ ಬಂದವರೇ ಇರಲಿ, I. A. S. ಮೊದಲಾದ ಪರೀಕ್ಷೆಗಳನ್ನು ಪಾಸಾದ ಅಧಿಕಾರಿಗಳೇ ಇರಲಿ, ಅವರ ಕಾರ್ಯಕ್ಷೇತ್ರವು ಮಾತ್ರ ಕಾರಕೂನರಂತೆಯೇ ಇರುವ ಮೂರನೇವರ್ಗ.

## I. A. S., I. P. S. ಇತ್ಯಾದಿ ಅಧಿಕಾರಗಳ ಯೋಗಗಳು :

I. A. S., I. P. S. ಮೊದಲಾದ ಪರೀಕ್ಷೆಗಳನ್ನು ಪೂರ್ತಿಸಿ ಅಧಿಕಾರಿ ಗಳಾಗಲು (ಹುಟ್ಟು ಅಧಿಕಾರಿಗಳಾಗಲು) ಜಾತಕದಲ್ಲಿ ನಿರ್ದಿಷ್ಟವಾದ ಯೋಗಗಳೇ ಇದ್ದು ವಿಶಿಷ್ಟ ಪೂರಕ ಜಾತಕಗಳಿರುತ್ತವೆ. ಏಕೆಂದರೆ–ಎಲ್ಲರೂ I. A. S. ಅಮಲ್ದಾರರಾಗಲಾರರು. ಜಿಲ್ಹೆಗೆ ಎರಡು ಮೂರು ಅಧಿಕಾರಿ ಗಳನ್ನು ಕಾಣಬಹುದಾಗಿದೆ. ಅಂದರೆ ಸುಮಾರು ಎರಡು–ಮೂರು ಲಕ್ಷ

ಜಾತಕಗಳಲ್ಲಿ ಎರಡು, ಮೂರು I. A. S. ಅಭ್ಯರ್ಥಿಗಳ ಜಾತಕಗಳು ಸಿಗಬಹುದಾಗಿದೆ. ಅಂದಬಳಿಕ ಜಾತಕದಲ್ಲಿ ಎಂಥ ಯೋಗಗಳಿರಬೇಕು ಎಂಬುದರ ಕಲ್ಪನೆಯು ಬರುವದು.

I. A. S. ಅಧಿಕಾರಿಗಳಾಗಲು ಜಾತಕ ಹೇಗಿರಬೇಕೆಂಬುದನ್ನು ತಿಳಿಯಲು ಜಾತಕದಲ್ಲಿಯ ಎರಡು ಸಂಗತಿಗಳನ್ನು ಪರಿಶೀಲಿಸಬೇಕು. (೧) I. A. S., I. F. S. ಮೊದಲಾದ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಲು ಜಾತಕದಲ್ಲಿಯು ಶಿಕ್ಷಣಯೋಗ ಹೇಗಿದೆ, (೨) I. A. S. ಹುದ್ದೆಯ ಅಧಿಕಾರಯೋಗದ ಜಾತಕವಿದೆಯೋ ಹೇಗೆ ಎಂಬುದನ್ನು ಪರಿಶೀಲಿಸಬೇಕು.

ಮೊದಲನೆಯದಾಗಿ I. A. S., I. F. S. ಮೊದಲಾದ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಲು ಜಾತಕದಲ್ಲಿಯ ಶಿಕ್ಷಣಯೋಗ ಹೇಗಿರಬೇಕು ಎಂಬುದಕ್ಕಾಗಿ ನಾವು "ಶಿಕ್ಷಣ-ಜ್ಯೋತಿಷ್ಯ" ಎಂಬ ಗ್ರಂಥವನ್ನು ಈಗಾಗಲೆ ಪ್ರಕಟಿಸಿದ್ದೇವೆ. ಪ್ರಸ್ತುತ ಈ ಗ್ರಂಥದಲ್ಲಿ ಈ ಪ್ರಕರಣದಲ್ಲಿ I. A. S., I. P. S. ಮೊದಲಾದ ಅಧಿಕಾರಯೋಗದ ಜಾತಕ ಹೇಗಿರಬೇಕೆಂಬುದನ್ನು ವಿವೇಚಿಸೋಣ.

ಎರಡನೆಯದಾಗಿ ಜಾತಕದಲ್ಲಿಯ ಅಧಿಕಾರಯೋಗಗಳೇ ಬೇರೆ, ಶಿಕ್ಷಣಯೋಗಗಳೇ ಬೇರೆ ಇರುತ್ತವೆಂಬುದನ್ನು ಮರೆಯುವಂತಿಲ್ಲ. ಏಕೆಂದರೆ I. A. S. ಮೊದಲಾದ ಅತ್ಯುನ್ನತ ಶಿಕ್ಷಣವನ್ನು ಮುಗಿಸಿದವರೆಲ್ಲರೂ ಉನ್ನತ ಅಧಿಕಾರದಲ್ಲಿದ್ದು ಅಧಿಕಾರ ಚಲಾಯಿಸುವರೆಂಬ ನಿಯಮ ಯಾವಾಗಲೂ, ಎಲ್ಲ ಕಡೆಯಲ್ಲಿಯೂ ಇರುವದಿಲ್ಲ. ಉದಾ : I. A. S. ಶಿಕ್ಷಣವನ್ನು ಮುಗಿಸಿದ ಇಬ್ಬರು ಅಭ್ಯರ್ಥಿಗಳಲ್ಲಿ ಒಬ್ಬರು ಸ್ವತಂತ್ರವಾದ, ಪ್ರತ್ಯೇಕವಾದ ಉನ್ನತ ಅಧಿಕಾರವನ್ನು ಪಡೆಯುವನು. ಇನ್ನೊಬ್ಬನು ಸೆಕ್ರೆಟರಿಯೋ ಅಥವಾ ಅದರ ಸಮಾನವಾದ ಮತ್ತೆ ಯಾವುದಾದರೊಂದು ಸ್ಥಾನವನ್ನು ಅಲಂಕರಿಸುವನು. ಇಷ್ಟೇ ಏಕೆ, I. A. S. ದ ಶಿಕ್ಷಣವನ್ನು ಪಡೆಯದ

ಇದ್ದ ಅನೇಕ ಅಧಿಕಾರಿಗಳು ಕೂಡ I. A. S. ಅಧಿಕಾರಿಗಳಂತೆ ಅಧಿಕಾರ ಚಲಾವಣೆ ಮಾಡಿದುದನ್ನು ಕಾಣಬಹುದಾಗಿದೆ. ಅಂತೆಯೇ ಜ್ಯೋತಿಷ್ಯ ದಲ್ಲಿ ಶಿಕ್ಷಣ ಯೋಗಗಳು ಬೇರೆ ಅಧಿಕಾರ ಯೋಗಗಳು ಬೇರೆ ಎಂದು ಹೇಳಬಹುದಾಗಿದೆ.

**ಕಾರಕ ಗ್ರಹಗಳು :**

ಅಧಿಕಾರವನ್ನು ವಿಶೇಷವಾಗಿ ಸರಕಾರೀ ಉನ್ನತಾಧಿಕಾರವನ್ನು ಕೊಡುವ ಅಧಿಕಾರಿಕಾರಕ ಇಲ್ಲವೆ ಆಡಳಿತಕಾರಕ (Administrative) ಗ್ರಹವೆಂದರೆ ರವಿಯು. ಜಾತಕದಲ್ಲಿ ರವಿಯು ಬಲಾಢ್ಯನಿರದೆ ಯಾರೂ ಅಧಿಕಾರ ಚಲಾಯಿಸಲಾರರ. ವಿಶೇಷವಾಗಿ ಅಗ್ನಿರಾಶಿಗಳಾದ ಮೇಷ, ಸಿಂಹ, ಧನು ಈ ರಾಶಿಗಳ ರವಿಯು ಯೋಗಕಾರಕನಿರಬೇಕು.

ಅಗ್ನಿರಾಶಿಗಳ ತರುವಾಯ ಜಲರಾಶಿಗಳಾದ ಕರ್ಕ, ವೃಶ್ಚಿಕ, ಮೀನ, ಈ ರಾಶಿಗಳ ರವಿಯು ಕೆಲಮಟ್ಟಿಗೆ ಅಧಿಕಾರವನ್ನು ಕೊಡುವನು, ಅಥವಾ ತಡವಾಗಿ ಅಧಿಕಾರವನ್ನು ಕೊಡುವನು.

ರವಿಯ ತರುವಾಯ ಗುರು, ಮಂಗಳರು ಅಧಿಕಾರಿ ಹಾಗೂ ಅಧಿಕಾರ-ಕಾರಕರಾಗುವರು. ಗುರು, ಮಂಗಳರು ಅಧಿಕಾರ ಕೊಡುವ ರೀತಿಯು ರವಿಯು ಅಧಿಕಾರ ಕೊಡುವ ರೀತಿಗಿಂತ ಭಿನ್ನವಿದೆ.

ಮಂಗಳನು ಬಲಾಢ್ಯನಿದ್ದ ವ್ಯಕ್ತಿಗಳು ತಮ್ಮ ಸ್ವಸಾಮರ್ಥ್ಯ ದಿಂದಲೂ ಪರಾಕ್ರಮ, ಪ್ರಯತ್ನದಿಂದಲೂ, ದಕ್ಷ ಆಡಳಿತೆಯಿಂದಲೂ ಅಧಿಕಾರವನ್ನು ಪಡೆಯುವರು ಎಂದೆನ್ನುವದಕಿಂತ ಅಧಿಕಾರವನ್ನು ಕಸಿದುಕೊಳ್ಳುವರು ಇಲ್ಲವೆ ಆಕ್ರಮಿಸುವುದಲ್ಲದೆ ಅಧಿಕಾರ ಚಲಾಯಿಸುವರು.

ಗುರು ಬಲಾಢ್ಯನಿದ್ದ ವ್ಯಕ್ತಿಗಳು ತಮ್ಮ ಘನತೆ ನಿಲುವುಗಳಿಂದಲೂ ವಿದ್ಯೆ-ಬುದ್ಧಿಗಳಿಂದಲೂ ಕಾರ್ಯನಿರ್ವಹಿಸಲೋಸುಗ ಅಧಿಕಾರ ಪಡೆಯು ವರು. ಆದರೆ ಅಧಿಕಾರ ಚಲಾಯಿಸಲಾರರು.

ರವಿಯು ಬಲಾಢ್ಯನಿದ್ದ ವ್ಯಕ್ತಿಗಳು ಸುದೈವಿಗಳಿದ್ದು ಅವರಿಗೆ ಅಧಿಕಾರವು ತಾನಾಗಿಯೇ ಬರುವದು.

**ಲಗ್ನ** : I. A. S., I. F. S. ಮೊದಲಾದ ಅಧಿಕಾರಿಗಳಾಗಲು ಜಾತಕದಲ್ಲಿ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನಗಳು ಪೂರಕವಿರುತ್ತವೆ.

**ರಾಶಿ** : ರಾಶಿ ದೃಷ್ಟಿಯಿಂದ ನೋಡಿದರೆ ಇಂಥ ರಾಶಿಯವರೇ ಅಧಿಕಾರಿಗಳಾಗುವರೆಂಬ ನಿಯಮವಿಲ್ಲದಿದ್ದರೂ ಆಡಳಿತಕಾರಕ ರಾಶಿಗಳಾದ ಪುರುಷ ರಾಶಿಗಳೇ ಅಥವಾ ಪುರುಷ ರಾಶಿಯಲ್ಲಿಯೇ ಹೆಚ್ಚು ಗ್ರಹಗಳಿರುವದು ಕಂಡುಬರುತ್ತದೆ.

ಸ್ಥಾನ : ಸ್ಥಾನದೃಷ್ಟಿಯಿಂದ ನೋಡಿದರೆ I. A. S. ದ ಅಧಿಕಾರ ಸ್ಥಾನವಾದ ನವಮಸ್ಥಾನವೇ ಮೂಲ ಹಾಗೂ ಮುಖ್ಯ ಸ್ಥಾನವಿರುತ್ತದೆ. ಯಾಕಂದರೆ ನವಮ ಸ್ಥಾನಕ್ಕೆ 'ಭಾಗ್ಯಸ್ಥಾನ' ಎನ್ನುವರು. ಭಾಗ್ಯೇಶನು ಭಾಗ್ಯದಲ್ಲಿದ್ದರೆ ಅಧಿಕಾರ ಭಾಗ್ಯವನ್ನು ಪಡೆಯುವರು.

ನವಮಸ್ಥಾನದ ತರುವಾಯ ಜಾತಕದಲ್ಲಿಯ ಪಂಚಮಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ಪಂಚಮ ಸ್ಥಾನವೆಂದರೆ ಬುದ್ಧಿ-ವಿದ್ಯಾ,ಸ್ಥಾನವಿದ್ದು ಸ್ಪರ್ಧಾತ್ಮಕ ಪರೀಕ್ಷೆಗಳ ಸ್ಥಾನವೂ ಇರುತ್ತದೆ.

ನವಮ, ಪಂಚಮಸ್ಥಾನಗಳ ತರುವಾಯ ನೌಕರಿಯ ಸ್ಥಾನ ಹಾಗೂ ಸತತ ಅಧಿಕಾರ ಚಲಾಯಿಸುವ ಸ್ಥಾನವಾದ ದಶಮಸ್ಥಾನವನ್ನೂ ಪರಿಶೀಲಿಸಬೇಕು.

ಭಾವೇಶ : ಸ್ಥಾನವಲ್ಲಿರುವ ಗ್ರಹಗಳಿಗಿಂತ ಸ್ಥಾನಾಧೀಶನ ಬಲಾಬಲದ ಕಡೆಗೆ ಹೆಚ್ಚು ಲಕ್ಷ್ಯ ಕೊಡಬೇಕಾಗುತ್ತದೆ. ಉದಾಹರಣೆಗೆ : ವೃಶ್ಚಿಕ ಲಗ್ನದ ಮೂರು ಜಾತಕಗಳನ್ನು ತೆಗೆದುಕೊಳ್ಳಿರಿ.

ಮೊದಲನೆಯ ಜಾತಕದಲ್ಲಿ ಗುರುವು ಲಗ್ನ, ದ್ವಿತೀಯ, ಪಂಚಮ, ಭಾಗ್ಯ,ದಶಮ ಯಾವುದಾದರೊಂದು ಸ್ಥಾನದಲ್ಲಿದ್ದು ಭಾಗ್ಯೇಶನಾದ ಚಂದ್ರನು ಅಷ್ಟಮ ಇಲ್ಲವೆ ವ್ಯಯದಲ್ಲಿರುವನೆಂದು ತಿಳಿಯಿರಿ. ಇಲ್ಲಿ ಗುರುವಿನ ಬಲ ದಿಂದ I. A. S.ಜಾತಕನು ಶಿಕ್ಷಣವನ್ನು ಮುಗಿಸಿದರೂ ಕೂಡ ಅಧಿಕಾರಿ ಯಾಗಲಾರ. (ದುರ್ಬಲ ಭಾಗ್ಯೇಶ).

(೨) ಇನ್ನೊಂದರಲ್ಲಿ ರವಿಯು ಬಲಾಢ್ಯನಿದ್ದು ಭಾಗ್ಯೇಶನಾದ ಚಂದ್ರನು ವ್ಯಯ ಇಲ್ಲವೆ ಅಷ್ಟಮದಲ್ಲಿರುವನೆಂದು ತಿಳಿಯಿರಿ. ಇಲ್ಲಿ ರವಿಯ ಬಲದಿಂದ ಜಾತಕನು ಅಧಿಕಾರ ಪಡೆದರೂ ಕೂಡ ಭಾಗ್ಯೇಶನು ದುರ್ಬಲ ನಿರುವ ಕಾರಣ ಅಧಿಕಾರ ಚಲಾಯಿಸಲಾರ, ಅಥವಾ ಅಧಿಕಾರ ಚಲಾಯಿಸುವ ಪ್ರಸಂಗವು ಬರಲಾರದು.

(೩) ಕೊನೆಯದರಲ್ಲಿ ಮಂಗಳನು ಬಲಾಢ್ಯನಿರುವನೆಂದು ತಿಳಿಯಿರಿ. ಇಲ್ಲಿ ಭಾಗ್ಯೇಶನು ದುರ್ಬಲನಿರುವ ಕಾರಣ ಅಧಿಕಾರ ಚಲಾಯಿಸಲು ಜಾತಕನು ಬಹಳ ಹೆಣಗಾಡಬೇಕಾಗುತ್ತದೆ, ಹಾಗೂ ಆ ಅಧಿಕಾರ ಕೂಡ ಶಾಶ್ವತವಾಗಿ ಉಳಿಯಲಾರದು.

ಭಾಗ್ಯೇಶನು ಬಲಾಢ್ಯನಿದ್ದು ಇತರ ಗ್ರಹಗಳು ದುರ್ಬಲವಿದ್ದಾಗ್ಯೂ ಭಾಗ್ಯೋದಯ ಕಾಲದಲ್ಲಿ ಅಧಿಕಾರ ಲಭಿಸುತ್ತದೆ.

### I. A. S. ಅಧಿಕಾರ ಯೋಗಗಳು

(೧) ಮೇಷ, ಸಿಂಹ, ಧನು, ಲಗ್ನಗಳಿದ್ದು ರವಿ, ಗುರು, ಮಂಗಳ ಇವರು ಲಗ್ನ, ಪಂಚಮ, ಭಾಗ್ಯದಲ್ಲಿದ್ದರೆ,

(೨) ಧನು ಲಗ್ನವಿದ್ದು ಲಗ್ನದಲ್ಲಿ ಗುರುವೂ ಭಾಗ್ಯದಲ್ಲಿ ರವಿಯೂ ಲಾಭದಲ್ಲಿ ಶುಕ್ರನೂ ಇದ್ದರೆ,

(೩) ವೃಶ್ಚಿಕಲಗ್ನದ ದಶಮದಲ್ಲಿ ರವಿಯೂ, ಭಾಗ್ಯದಲ್ಲಿ ಚಂದ್ರನೂ ಇದ್ದು ಗುರುವು ಲಗ್ನ, ಪಂಚಮ, ಭಾಗ್ಯ, ಹಾಗೂ ಲಾಭದಲ್ಲಿದ್ದರೆ,

(೪) ಕರ್ಕಲಗ್ನವಿದ್ದು ಗುರುವು ಲಗ್ನ ಇಲ್ಲವೆ ಭಾಗ್ಯದಲ್ಲಿ, ಹಾಗೂ ಮಂಗಳನು ದಶಮ ಇಲ್ಲವೆ ಪಂಚಮದಲ್ಲಿದ್ದರೆ,

(೫) ಸಿಂಹಲಗ್ನವಿದ್ದು ಮಂಗಳನು ಲಗ್ನ, ಪಂಚಮ, ಭಾಗ್ಯದಲ್ಲಿ, ಗುರುವು ಕೂಡ ಈ ಯಾವುದಾದರೊಂದು ಸ್ಥಾನದಲ್ಲಿದ್ದರೆ,

(೬) ವೃಷಭಲಗ್ನವಿದ್ದು ಶನಿಯು ಭಾಗ್ಯ ಇಲ್ಲವೆ ದಶಮದಲ್ಲಿದ್ದು, ರವಿಯು ಚತುರ್ಥದಲ್ಲಿದ್ದು, ಬುಧನು ಪಂಚಮದಲ್ಲಿಯೇ ಇದ್ದರೆ,

(೭) ಮಿಥುನ ಲಗ್ನವಿದ್ದು, ಶನಿಯು ಲಗ್ನ, ಪಂಚಮ, ಭಾಗ್ಯದಲ್ಲಿ, ಶುಕ್ರನು ಕೂಡ ಈ ಯಾವುದಾದರೊಂದು ಸ್ಥಾನದಲ್ಲಿ ರವಿ-ಗುರು-ಮಂಗಳ ರಲ್ಲಿ ಯಾರೊಬ್ಬರು ಬಲಾಢ್ಯರಿದ್ದರೆ,

(೮) ಮೀನಲಗ್ನವಿದ್ದು, ಮಂಗಳ, ಚಂದ್ರರು ಬಲಾಢ್ಯರಿದ್ದು, ಗುರುವು ಲಗ್ನ, ದಶಮ, ಪಂಚಮದಲ್ಲಿದ್ದರೆ,

(೯) ಜಾತಕದಲ್ಲಿ ಏಳು ಗ್ರಹಗಳು ಸ್ವಗೃಹದಲ್ಲಿದ್ದರೆ, ಅಥವಾ ಮೂರು ಗ್ರಹಗಳು ಉಚ್ಚರಾಶಿಯಲ್ಲಿಯೂ, ನಾಲ್ಕು ಗ್ರಹಗಳು ಸ್ವಗ್ರಹ ದಲ್ಲಿಯೂ ಇದ್ದರೆ ಅಥವಾ ನಾಲ್ಕು ಗ್ರಹಗಳು ಉಚ್ಚರಾಶಿಯಲ್ಲಿ. ಮೂರು ಗ್ರಹಗಳು ಮಿತ್ರರಾಶಿಯಲ್ಲಿದ್ದರೆ,

(೧೦) ಗ್ರಹಗಳು ರಾಶಿಬಲಕ್ಕಿಂತ ಸ್ಥಾನಬಲದವರೇ ಹೆಚ್ಚಾ ಗಿದ್ದರೆ,

(೧೧) ಭಾಗ್ಯೇಶ, ಲಗ್ನೇಶ ಪಂಚಮೇಶರು ಬಲಾಢ್ಯರಿದ್ದರೆ,

(೧೨) ನೌಕರಿಯ ಪ್ರಾರಂಭದಲ್ಲಿ ಅಂದರೆ ವಯಸ್ಸಿನ ೧೮ ರಿಂದ ೨೫ ರೊಳಗಾಗಿ ಗೋಚರಿಯಿಂದ ಶನಿಯು ಸಾಡೇಸಾತಿ, ಇಲ್ಲವೆ ಪಂಚ ಮಾಷ್ಟಮಗಳಾಗಿರದಿದ್ದರೆ,

(೧೩) ವಯಸ್ಸಿನ ೧೮ ರಿಂದ ೨೫ ರೊಳಗಾಗಿ ಯೋಗಕಾರಕ ಗ್ರಹಗಳ ದಶಾ, ಅಂತರ್ದಶೆ ಇದ್ದರೆ,

(೧೪) ಜಾತಕದಲ್ಲಿ ಅನೇಕ ಗ್ರಹಗಳು ಉದಿತ ಗೋಲಾರ್ಧ ದಲ್ಲಿದ್ದರೆ,

(೧೫) ಜಾತಕದಲ್ಲಿ ರಾಜಯೋಗಗಳೂ ಬಹಳವಿದ್ದರೆ.

**೨. ಖಾತೆಯ ಕೆಳಗಿನ ದರ್ಜೆಯಿಂದ ಮೇಲಧಿಕಾರಿಗಳಾಗುವ ವರ್ಗ**

**ಕಾರಕ ಗ್ರಹಗಳು :** I.A.S., I.F.S. ಮೊದಲಾದ ಹುದ್ದೆಯಲ್ಲಿರುವ ಹುಟ್ಟು ಅಧಿಕಾರಿಯಾಗಲು ಜಾತಕದಲ್ಲಿ ರವಿ, ಗುರು, ಮಂಗಳ ಈ ಮೂರು ಗ್ರಹಗಳು ಯೋಗಕಾರಕರೂ ಬಲಾಢ್ಯರೂ ಹೇಗೆ ಇರಬೇಕೋ ಹಾಗೆಯೇ ಖಾತೆಯ ಕೆಳಗಿನ ಹುದ್ದೆಯಿಂದ ಮೇಲಧಿಕಾರಿಗಳಾಗಲು ಜಾತಕದಲ್ಲಿ ಶನಿ, ಬುಧ, ಶುಕ್ರ, ಚಂದ್ರ ಈ ನಾಲ್ಕು ಗ್ರಹಗಳು ಕಾರಕರಿರಬೇಕು.

**ಲಗ್ನಗಳು :** ಕಾರಕೂನಿಕೆಯಿಂದ ಅಮಲ್ದಾರರಾಗುವವರ ಜಾತಕದಲ್ಲಿ ಹೆಚ್ಚಾಗಿ ವೃಷಭ, ಕನ್ಯಾ, ತುಲಾ, ಮಕರ, ಕುಂಭ ಈ ಲಗ್ನದವರೇ ಇರುವದನ್ನು ಕಾಣಬಹುದಾಗಿದೆ.

**ಕಾರಕ ಸ್ಥಾನಗಳು :** I. A. S., I. F. S. ಮೊದಲಾದ ಹುದ್ದೆಯ ಹುಟ್ಟು ಅಧಿಕಾರಿಗಳಾಗಲು ಜಾತಕದಲ್ಲಿಯ ಭಾಗ್ಯಸ್ಥಾನವನ್ನು ಹೇಗೆ ಪರಿಶೀಲಿಸುವರೋ ಹಾಗೇ ಕಾರಕೂನಿಕೆಯಿಂದ ಮೇಲಧಿಕಾರಿಗಳಾಗಲು ಜಾತಕದಲ್ಲಿಯ ದಶಮಸ್ಥಾನವೇ ಪೂರಕ ಹಾಗೂ ಕಾರಕಸ್ಥಾನವಿರುತ್ತದೆ.

I. A. S., I. F. S. ಮೊದಲಾದ ಹುದ್ದೆಯ ಹುಟ್ಟು ಅಧಿಕಾರಿಗಳಾಗಲು ಜಾತಕದಲ್ಲಿ ಭಾಗ್ಯಸ್ಥಾನದ ನಂತರ ಪಂಚಮ ಸ್ಥಾನವನ್ನು ಹೇಗೆ ಪರಿಶೀಲಿಸುವರೋ ಹಾಗೇ ಇಲ್ಲಿಯೂ ದಶಮಸ್ಥಾನದ ನಂತರ ಸುಖ ಸ್ಥಾನವನ್ನೂ ಪರಿಶೀಲಿಸಬೇಕು. I. A. S. ದ ಹುಟ್ಟು ಅಧಿಕಾರಿಗಳ ಜಾತಕ ದಲ್ಲಿ ಗ್ರಹಗಳು ರಾಶಿಬಲದವರಿಗಿಂತ ಸ್ಥಾನಬಲದವರಿರುತ್ತವೆ. ಇಲ್ಲಿ ಗ್ರಹಗಳು ರಾಶಿಬಲದವಿದ್ದು ಸ್ಥಾನಬಲದವರಿರುವುದಿಲ್ಲ. ಅಲ್ಲಿ I. A. S.ದ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಉತ್ತೀರ್ಣರಾದವರನ್ನು ಹೇಗೆ ನೇಮಿಸುವರೋ

ಹಾಗೇ ಇಲ್ಲಿಯೂ ಕೂಡ ದಶಮಸ್ಥಾನದ ನಂತರ ಸುಖಸ್ಥಾನವನ್ನು ನೋಡಬೇಕಾಗುತ್ತದೆ. ಏಕೆಂದರೆ ಇಲ್ಲಿ Departmental (ಡಿಪಾರ್ಟ್‌ಮೆಂಟಲ್) ಪರೀಕ್ಷೆಗಳಲ್ಲಿ ತೇರ್ಗಡೆಯಾಗಲು ಹಾಗೂ ಮೇಲಧಿಕಾರಿಗಳಿಂದ ಉತ್ತಮ ಕಾನ್ಫಿಡೆನ್ಶಿಯಲ್ ರಿಮಾರ್ಕ (Confidential Report) ಪಡೆಯಲು ಜಾತಕದಲ್ಲಿಯ ಚತುರ್ಥ ಸ್ಥಾನವೇ ಮೂಲ ಹಾಗೂ ಮುಖ್ಯವಿರುತ್ತದೆ.

ರಾಶಿ : ಕಾರಕೂಸಿಕೆಯಿಂದ ಮೇಲಾಧಿಕಾರಿಗಳಾಗುವ ಜಾತಕದಲ್ಲಿ ಹೆಚ್ಚಾಗಿ ಸ್ತ್ರೀರಾಶಿಯವರೇ ಅಥವಾ ಸ್ತ್ರೀರಾಶಿಯಲ್ಲಿಯೇ ಅನೇಕ ಗ್ರಹಗಳು ಇರುವದನ್ನು ಕಾಣಬಹುದಾಗಿದೆ.

ಯೋಗಗಳು :

(೧) ಜಾತಕದಲ್ಲಿ ಅನೇಕ ಗ್ರಹಗಳು ರಾಶಿಬಲದವರೇ ಹೆಚ್ಚಾಗಿದ್ದು ಸ್ಥಾನಬಲದವರಿರುವುದಿಲ್ಲ.

(೨) ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿರುತ್ತವೆ.

(೩) ಅನುದಿತ ಗೋಲಾರ್ಧದಲ್ಲಿಯೇ ಗ್ರಹಗಳು ಹೆಚ್ಚಾಗಿರುತ್ತವೆ.

(೪) ಆಡಳಿತ ಕಾರಕಗ್ರಹಗಳಾದ ರವಿ, ಗುರು, ಮಂಗಳರು ರಾಶಿಬಲದವರಿದ್ದು ಸ್ಥಾನಬಲದವರಿರುವುದಿಲ್ಲ. ಆದರೆ ಬುಧ, ಶುಕ್ರ, ಶನಿಯರು ಸ್ಥಾನಬಲದವರಿದ್ದು ರಾಶಿಬಲದವರಿರುವುದಿಲ್ಲ.

(೫) ನೌಕರಿಯ ಕೊನೆಯ ಭಾಗದಲ್ಲಿ ಯೋಗಕಾರಕ ಗ್ರಹಗಳ ಹಾಗೂ ಬಲಾಢ್ಯ ಗ್ರಹಗಳ ಶುಭದೆಶೆ ನಡೆಯುತ್ತದೆ.

(೬) ನೌಕರಿಯ ಅಂತ್ಯಭಾಗದಲ್ಲಿ ಸಾಡೇಸಾತಿ ಪಂಚಮಾಷ್ಟಮ ಶನಿ ಇರದೆ ಗೋಚರಿಯಿಂದ ಒಂಬತ್ತು, ಹತ್ತು, ಹನ್ನೊಂದನೇ ಶನಿ ಇರುತ್ತಾನೆ.

(೭) ವೃಷಭ ಲಗ್ನದ ಲಗ್ನ, ದಶಮ, ನವಮ, ಪಂಚಮ ಈ ಯಾವುದೇ ಸ್ಥಾನದಲ್ಲಿ ಶನಿ ಇದ್ದು ಪಂಚಮದಲ್ಲಿ ಬುಧನಿದ್ದರೆ.

(೮) ತುಲಾಲಗ್ನವಿದ್ದು ಶನಿ, ಚಂದ್ರ, ಶುಕ್ರರಲ್ಲಿ ಯಾರಿಬ್ಬರು ಬಲಾಢ್ಯರಿದ್ದರೆ,

(೯) ಮಕರ ಲಗ್ನದ ಲಗ್ನ, ಭಾಗ್ಯ, ದಶಮ ಈ ಯಾವುದೇ ಮೂರು ಸ್ಥಾನದಲ್ಲಿ ಬುಧ, ಶನಿಯರ ಶುಭಯೋಗವಿದ್ದರೆ ಅಥವಾ ಈ ಎರಡೂ ಗ್ರಹಗಳು ಯಾವವೇ ಸ್ಥಾನದಲ್ಲಿದ್ದರೆ,

(೧೦) ಕುಂಭ ಲಗ್ನದ ಭಾಗ್ಯ, ಚತುರ್ಥ, ಪಂಚಮ ಲಗ್ನ ಈ ಯಾವದೇ ಸ್ಥಾನದಲ್ಲಿ ಶನಿ ಇಲ್ಲವೆ ಶುಕ್ರರಿದ್ದು ಅಥವಾ ಶನಿ, ಶುಕ್ರರ ಶುಭ ಯೋಗವಿದ್ದರೆ ಅಥವಾ ಶನಿ, ಶುಕ್ರ ಈರ್ವರೂ ಈ ಸ್ಥಾನದಲ್ಲಿದ್ದರೆ,

(೧೧) ಕನ್ಯಾ ಲಗ್ನದ ಭಾಗ್ಯ, ದಶಮ, ದ್ವಿತೀಯ, ಪಂಚಮ ಈ ಸ್ಥಾನಗಳಲ್ಲಿ ಬುಧ, ಶುಕ್ರರ ಯೋಗವಿದ್ದರೆ

ಮೇಲೆ ತೋರಿಸಿದ ಈ ಯೋಗಗಳಲ್ಲಿ ಜನಿಸಿದವರು ಎಷ್ಟೆ ಕೆಳಗಿನ ದರ್ಜೆಯಲ್ಲಿ ನೌಕರಿ ಮಾಡುತ್ತಿದ್ದರೂ ಮೇಲಧಿಕಾರಿಗಳಾಗುವರು.

೩) ಅಧಿಕಾರವನ್ನು ಚಲಾಯಿಸದಿರುವ ಅಧಿಕಾರಿಗಳು :

ಕೆಳಗಿನ ದರ್ಜೆಯಿಂದ ಮೇಲಧಿಕಾರಿಗಳಾಗಿ ಬಂದವರೇ ಇರಲಿ, ಅಥವಾ ಐ. ಎ. ಎಸ್ I. A. S. ಮೊದಲಾದ ಪರೀಕ್ಷೆಗಳನ್ನು ಮುಗಿಸಿದ ಹುಟ್ಟು ಅಧಿಕಾರಿಗಳೇ ಇರಲಿ ಅವರ ಕಾರ್ಯಕ್ಷೇತ್ರ ಮಾತ್ರ ಕಾರಕೂನ ರಂತೆಯೇ ಇರುತ್ತದೆ.

ಇವರು ಇತರ ಅಧಿಕಾರಿಗಳಂತೆ (ಕ್ಲಾಸ I, II) ಅಧಿಕಾರಿಗಳಿದ್ದು ಸಂಬಳ ಹಾಗೂ ಇತರ ಸೌಕರ್ಯಗಳು, ಮಾನಸನ್ಮಾನ (Status) ಕೂಡ ಸಮವಾಗಿಯೇ ಇರುತ್ತವೆ. ಆದರೂ ಕೂಡ ಇವರು ಅಧಿಕಾರ ಚಲಾಯಿಸ ಲಾರರು. ಸಾಮಾನ್ಯವಾಗಿ ಇವರು ಡೆಪ್ಯುಟಿ, ಸಹಾಯಕ, ಪರ್ಸನಲ್ ಅಸಿಸ್ಟಂಟ ಈ ಮೊದಲಾದ ಹುದ್ದೆಯವರು ಇರುತ್ತಾರೆ.

ಸಾಮಾನ್ಯ ನಿಯಮಗಳು : ರವಿ, ಮಂಗಳ, ಗುರುಗಳು ಅಧಿಕಾರ ಕಾರಕ ಗ್ರಹಗಳು. ಬುಧ, ಶುಕ್ರ, ಶನಿಯರು ಕಾರಕೂನಿಕೆ ಕಾರಕ

ಗ್ರಹಗಳು. ಪುರುಷ ರಾಶಿಯ ಚಂದ್ರನು ಅಧಿಕಾರಕಾರಕನೂ, ಸ್ತ್ರೀ ರಾಶಿಯ ಚಂದ್ರನು ಕಾರಕೂನಿಕೆಯ ಕಾರಕನೂ ಇರುವರು.

ಭಾಗ್ಯ, ಪಂಚಮ, ಲಗ್ನ ಈ ಸ್ಥಾನಗಳು ಅಧಿಕಾರಿ ಕಾರಕ ಸ್ಥಾನಗಳು. ತೃತೀಯ, ದಶಮ ಈ ಸ್ಥಾನಗಳು ಕಾರಕೂನಿಕೆಯ ಸ್ಥಾನಗಳು.

ಮೇಷ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಇವು ಅಧಿಕಾರಿ ಕಾರಕ ಲಗ್ನಗಳು.

ವೃಷಭ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ ಇವು ಕಾರಕೂನಿಕೆ ಕಾರಕ ಲಗ್ನಗಳು ಇರುತ್ತವೆ. ಇವರಿಗೆ ಅಧಿಕಾರವಿದ್ದರೂ ಚಲಾಯಿಸಲು ಬಾರದಂಥ ವೈಫಲ್ಯಕಾರಕ ಯೋಗಗಳು ಇವರ ಜಾತಕದಲ್ಲಿ ಈ ಕೆಳಗಿನಂತಿರುತ್ತವೆ :—

(೧) ಅಧಿಕಾರೀ ಕಾರಕ ಗ್ರಹಗಳಾದ ರವಿ, ಮಂಗಳ, ಗುರುಗಳು ಕೇವಲ ರಾಶಿಬಲದವರಿದ್ದು, ಸ್ಥಾನಬಲ ಅಥವಾ ಯೋಗಕಾರಕರಿರುವದಿಲ್ಲ. ಉದಾಹರಣೆಗೆ : ಕರ್ಕ ರಾಶಿಯ ಗುರುವು ವೃಷಭ ಲಗ್ನಕ್ಕೆ ಅಥವಾ ಧನು ರಾಶಿಯ ಗುರುವು ಮಕರ ಲಗ್ನಕ್ಕೆ ಇದ್ದರೆ ಏನು ಪ್ರಯೋಜನ ?

(೨) ಭಿನ್ನ ಭಿನ್ನ ಲಗ್ನಕ್ಕೆ ಇರುವ ಯೋಗಕಾರಕ ಗ್ರಹಗಳು ರಾಶಿಬಲ ಹಾಗೂ ಸ್ಥಾನಬಲವಿದ್ದಾಗ್ಯೂ ಕೂಡ ಅಸ್ತ, ವಕ್ರ, ಪಾಪಗ್ರಹಮಧ್ಯ, ವೃದ್ಧಾಪ್ಯ, ಬಾಲಾವಸ್ಥೆಯಲ್ಲಿರುವವು. ಉದಾ: ಮೇಷ ಲಗ್ನವಿದ್ದು, ಧನು ರಾಶಿಯ ಭಾಗ್ಯದಲ್ಲಿ ರವಿ, ಗುರು-ಮಂಗಳರಿದ್ದು, ಗುರು–ಮಂಗಳರು ಅಸ್ತ, ವಕ್ರ, ವೃದ್ಧಾಪ್ಯದಲ್ಲಿದ್ದರೆ ಭಾಗ್ಯೇಶ ಲಗ್ನೇಶರಾದ ಗುರು, ಮಂಗರ ಶುಭ ಪರಿಣಾಮವಾಗುವದಿಲ್ಲ. (ಅಧಿಕಾರಯೋಗ ಪಡೆದೂ ಅಧಿಕಾರ ಚಲಾಯಿಸಲಾರರು).

(೩) ಯೋಗಕಾರಕ ಗ್ರಹಗಳು ಸ್ಥಾನಬಲವಿಲ್ಲದೆ ರಾಶಿಬಲದವರಿದ್ದು ಯೋಗಕಾರಕವಿರದೆ ಇರುವ ಗ್ರಹಗಳು ರಾಶಿ ಬಲದವರೂ ಯೋಗಕಾರಕರೂ ಇರುತ್ತಾರೆ.

(೪) ಯೋಗಕಾರಕ ಗ್ರಹಗಳು ದುರ್ಬಲರೂ ಯೋಗಕಾರಕವಿರದಿರುವ ಗ್ರಹಗಳು ರಾಶಿಬಲದವರಿದ್ದರೆ ಉದಾ : ವೃಷಭ ಲಗ್ನದ ಜಾತಕದಲ್ಲಿ ಮೇಷ ರಾಶಿಯ ವ್ಯಯಸ್ಥಾನದಲ್ಲಿ ಶನಿ-ಬುಧರೂ, ಕರ್ಕದಲ್ಲಿ ಗುರು-ವೂ, ಮೀನದಲ್ಲಿ ಶುಕ್ರನೂ ಇದ್ದಾರೆಂದು ತಿಳಿಯಿರಿ. ಇಲ್ಲಿ ಗುರು ಶುಕ್ರರಿಂದ ಅಧಿಕಾರ ಪಡೆದರೂ ದುರ್ಬಲ ಶನಿ-ಬುಧರಿಂದ ಅಧಿಕಾರ ಚಲಾಯಿಸಲಾರರು.

(೫) ಇವರ ಜಾತಕದಲ್ಲಿ ರವಿಯು ಬಲಾಢ್ಯನು, ಮಂಗಳನು ದುರ್ಬಲನು ಇದ್ದು, ಚಂದ್ರನು ಪುರುಷ ರಾಶಿಯಲ್ಲಿದ್ದರೂ ಕ್ಷೀಣ, ವೃದ್ಧಾಪ್ಯ ಇಲ್ಲವೆ ಶನಿ ದೃಷ್ಟಿಯಲ್ಲಿರುವನು. ಅಂತೆಯೇ ಇವರು ರವಿಯ ಪ್ರಭಾವದಿಂದ ಸುದ್ದಿವಿಗಳಾಗಿ ಅಧಿಕಾರ ಪಡೆದರೂ ದುರ್ಬಲ ಮಂಗಳನ ಮೂಲಕ ಅಧಿಕಾರ ಚಲಾಯಿಸಲಾರರು. ಇದರಂತೆಯೇ ಪುರುಷ ರಾಶಿಯ ಚಂದ್ರನ ಮೂಲಕ ಅಧಿಕಾರ ಪಡೆದರೂ ಕ್ಷೀಣ ಚಂದ್ರನ ಮೂಲಕ ಅಧಿಕಾರ ಚಲಾಯಿಸಲಾರರು.

(೬) ಇವರ ಜಾತಕದಲ್ಲಿ ಭಾಗ್ಯೇಶನಿಗಿಂತ ದಶಮೇಶ ಹೆಚ್ಚು ಬಲಾಢ್ಯನಿರುತ್ತಾನೆ.

(೭) ಭಾಗ್ಯಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದು ಭಾಗ್ಯೇಶನು ದುರ್ಬಲನಿರುತ್ತಾನೆ. ಉದಾ: ಧನು ಲಗ್ನವಿದ್ದು, ಭಾಗ್ಯದಲ್ಲಿ ಸಿಂಹ ರಾಶಿಯ ಮಂಗಳ ಗುರುಗಳಿದ್ದು ಭಾಗ್ಯೇಶನಾದ ರವಿಯು ನೀಚ ರಾಶಿಯಾದ ತುಲಾದಲ್ಲಿ ಇದ್ದಾನೆಂದು ತಿಳಿಯಿರಿ. ಇಲ್ಲಿ ಗುರು-ಮಂಗಳರ ಯೋಗದಿಂದ ಜಾತಕನು ಸುದ್ದಿವಿಯಾಗಿದ್ದು ಅಧಿಕಾರವನ್ನು ಪಡೆದರೂ ನೀಚ ಭಾಗ್ಯೇಶನಿದ್ದ ಕಾರಣ ಅಭಾಗಿಯಂತೆ ಅಧಿಕಾರ ಚಲಾಯಿಸಲಾರನು

ಈ ಮೇಲೆ ಕಾಣಿಸಿದ ವಿಫಲ ಯೋಗಗಳಿರುವ ಜಾತಕನು ಅಧಿಕಾರವಿದ್ದರೂ ಅಧಿಕಾರ ಚಲಾಯಿಸಲಾರನು.

೨) ಹೆಡ್‌ಕ್ಲಾರ್ಕ್ ಅಥವಾ ಆಫೀಸ್ ಸೂಪರಿಂಟೆಂಡೆಂಟ್ :

ಇವರನ್ನು ಸೂಪರಿಂಟೆಂಡೆಂಟ್, ಹೆಡ್‌ಕ್ಲಾರ್ಕ್. ಮ್ಯಾನೇಜರ್ ಇತ್ಯಾದಿ ನಾಮಧೇಯಗಳಿಂದ ಕರೆಯುವ ಸಾಂಪ್ರದಾಯವಿದೆ. ಇವರ ಜಾತಕದಲ್ಲಿ ಅಂತಹ ಹೇಳಿಕೊಳ್ಳುವ ಯೋಗಗಳಾಗಲಿ ನಿರ್ದಿಷ್ಟವಾದ ವೈಶಿಷ್ಟ್ಯವಾದ ಯೋಗಗಳಾಗಲಿ ಇರುವುದು ಕಂಡುಬರುವುದಿಲ್ಲ. ಕಾರಕೂನನೆಂದು ಸೇರಿದವನು ಡಿಪಾರ್ಟ್‌ಮೆಂಟಲ್ ಪರೀಕ್ಷೆಗಳಲ್ಲಿ ತೇರ್ಗಡೆಯಾಗುವದಲ್ಲದೆ ಅನೇಕ ವರ್ಷಗಳವರೆಗೆ ನೌಕರಿಯಲ್ಲಿದ್ದು ಸೀನಿಯಾರಿಟಿ ಪ್ರಕಾರ ಈ ಹುದ್ದೆಗಳನ್ನು ಪಡೆಯಬಹುದಾಗಿದೆ.

೩) ಅಕೌಂಟಂಟ್ :

ಯಾವುದೇ ಆಫೀಸಿನಲ್ಲಿ ಆಡಳಿತೆಯ ವಿಭಾಗದಲ್ಲಿ ಪ್ರಾಮುಖ್ಯವಾಗಿ ಎರಡು ವಿಭಾಗಗಳನ್ನು ಕಲ್ಪಿಸಬಹುದು. (i) ಅಕೌಂಟ್ಸ್ ಬ್ರ್ಯಾಂಚ್ (Account Branch), (ii) ಕರೆಸ್ಪಾಂಡೆನ್ಸ್ ಬ್ರ್ಯಾಂಚ್ (Correspondence Branch). ಕರೆಸ್ಪಾಂಡೆನ್ಸ್ ಬ್ರ್ಯಾಂಚಿನ ಮೇಲ್ವಿಚಾರಕ ಹೆಡ್ ಕ್ಲಾರ್ಕನಿದ್ದರೆ, ಲೆಕ್ಕಪತ್ರದ ಮೇಲ್ವಿಚಾರಕರು ಅಕೌಂಟಂಟ ಇರುತ್ತಾರೆ.

ಅಕೌಂಟಂಟ್ ಆಗುವ ಯೋಗಗಳು :

ಅಕೌಂಟಂಟ್ಸ್ ಆಡಿಟರ್ಸ, ಕ್ಯಾಶಿಯರ್ಸ, ಟ್ರೆಝರರ್ಸ ಇತ್ಯಾದಿ ಕೆಲಸಗಳನ್ನು ಮಾಡುತ್ತಿರುವವರು ಸಾಮಾನ್ಯವಾಗಿ ಕಾರಕೂನಿಕೆಯಿಂದ ನೌಕರಿಯನ್ನು ಪ್ರಾರಂಭಿಸುತ್ತಾರೆ. ಬಹುಶಃ ಈ ವರ್ಗದವರು ಸ್ವತಂತ್ರರಾದ ಅಮಲ್ದಾರ್ ಇಲ್ಲವೆ ಆಫೀಸರ್ ಆಗುವುದಿಲ್ಲ.

ಇಂಥವರ ಜಾತಕದಲ್ಲಿ ರವಿಯು ಬಲಾಢ್ಯನಿರುವುದಿಲ್ಲ. ಗುರು-ಮಂಗಳರೂ ಕೂಡ ಅಷ್ಟೊಂದು ಬಲಶಾಲಿಯಾಗಿರುವುದಿಲ್ಲ. ಆಡಿಟರ್ಸ, ಕ್ಯಾಶಿಯರ್ಸ, ಟ್ರೆಝರರ್ಸ ಇತ್ಯಾದಿ ಕೆಲಸಗಾರರಿಗೆ ಬುಧನೇ ಕಾರಕಗ್ರಹ.

ವೃಷಭ, ಮಿಥುನ, ಕನ್ಯಾ, ತುಲಾ, ಮಕರ, ಕುಂಭ— (ವಾಯು ಇಲ್ಲವೆ ಭೂರಾಶಿಯು) ಈ ರಾಶಿಗಳ ಬಲಾಢ್ಯ ಬುಧನು ಯೋಗಕಾರಕನೂ, ಶುಭಗ್ರಹ ದೃಷ್ಟಿಯುಳ್ಳವನೂ ಇರಬೇಕು. ಬುಧನು ರವಿಯಿಂದ ಅಂಶಾತ್ಮಕವಾಗಿ ದೂರ ಇದ್ದಷ್ಟು ಉತ್ತಮ. (ಆದರೆ ಅಸ್ತನಿರಬೂಡದು.)

ಗಣಿತ ವಿಷಯಕ್ಕೆ ಮಂಗಳನೇನೋ ಕಾರಕನಿದ್ದಾನೆಂಬುದು ನಿಜ. ಆದರೆ ಅಕೌಂಟ್ಸ್, ಆಡಿಟಿಂಗ ಇಂಥ ಲೆಕ್ಕಪತ್ರದ ಕೆಲಸಗಳಿಗೆ ಬುಧನೇ ಕಾರಕನಿರುವನು.

ಮಂಗಳನು ಗಣಿತ ವಿಷಯಕ್ಕೆ ಕಾರಕನಿದ್ದರೂ, ಮಂಗಳನ ಗುಣ ಧರ್ಮದಂತೆ (ಜಾತಕದಲ್ಲಿ ಮಂಗಳನು ಬಲಾಢ್ಯನಿದ್ದ) ಈ ವ್ಯಕ್ತಿಗಳು ಎಲ್ಲ ಕಡೆಗಳಲ್ಲಿಯೂ ಅವಸರಮಾಡುವವರೂ, ದುಡುಕುವ ಸ್ವಭಾವದವರೂ ಶೀಘ್ರ ಕೋಪಿಗಳೂ ಒಮ್ಮೆಲೇ ನಿರ್ಣಯವನ್ನು ತೆಗೆದುಕೊಳ್ಳುವ ಸ್ವಭಾವದವರೂ ಆಗಿರುವ ಕಾರಣ ಲೆಕ್ಕಪತ್ರಗಳಲ್ಲಿ ಇಂಥ ವ್ಯಕ್ತಿಗಳು ಅನೇಕಸಾರೆ ಹಾನಿ ಮಾಡಿಕೊಳ್ಳುವರು.

ಮಂಗಳನೇನೋ ಬಲಾಢ್ಯನಿದ್ದರೂ ಅಗ್ನಿರಾಶಿಯ ಮಂಗಳನು ಇರಲೇ ಬಾರದು. ವಾಯು ಇಲ್ಲವೆ ಭೂರಾಶಿಯ ಮಂಗಳನು ಬುಧನೊಂದಿಗೆ ಶುಭಯೋಗ ಮಾಡುತ್ತಿರಬೇಕು.

ಲಗ್ನಗಳು : ಇನ್ನು ಲಗ್ನಗಳ ಮೇಲಿಂದ ವಿಚಾರಿಸಿದರೆ, ವೃಷಭ, ಮಿಥುನ, ಕನ್ಯಾ, ತುಲ, ಧನು, ಮಕರ, ಕುಂಭ, ಮೀನ ಈ ಲಗ್ನಗಳು ಪೂರಕವಾಗಿರುತ್ತವೆ.

ಮೇಷ ಹಾಗೂ ವೃಶ್ಚಿಕ ಲಗ್ನದ ವ್ಯಕ್ತಿಗಳು ಇಂತಹ ಕೆಲಸಗಳನ್ನು ಮಾಡಲು ಒಪ್ಪುವುದಿಲ್ಲ. ಮೇಷ ಲಗ್ನದ ವ್ಯಕ್ತಿಗಳು ಅಂಕಿಗಳನ್ನು ಸರಿಯಾಗಿ ಹಚ್ಚಲು ತಪ್ಪುತ್ತಿದ್ದರೆ ವೃಶ್ಚಿಕ ಲಗ್ನದ ವ್ಯಕ್ತಿಗಳು ಬೇರೀಜು ಮಾಡುವುದರಲ್ಲಿ ತಪ್ಪುತ್ತಾರೆ. ಕರ್ಕ ಹಾಗೂ ಸಿಂಹ ಲಗ್ನಗಳ ವ್ಯಕ್ತಿಗಳಂತೂ ಅಕೌಂಟಂಟ,

ಆಡಿಟರ್, ಕ್ಯಾಶಿಯರ್ ಆಗಲು ಅನರ್ಹರೆಂದೇ ಹೇಳಬಹುದು. ಇಂಥವರಿಗೆ ತಮ್ಮ ಕೈಯಿಂದ ಪ್ರತಿನಿತ್ಯ ಹಣ ತೆತ್ತಬೇಕಾದ ಪ್ರಸಂಗಗಳು ಬರುತ್ತವೆ.

ರಾಶಿ : ಇನ್ನು ರಾಶಿಯ ದೃಷ್ಟಿಯಿಂದ ನೋಡಿದರೆ, ಜಲ ರಾಶಿಯ ವ್ಯಕ್ತಿಗಳೂ ಅಗ್ನಿರಾಶಿಯ ವ್ಯಕ್ತಿಗಳೂ ಇಂಥ ಕೆಲಸಕ್ಕೆ ಅನರ್ಹರು. ಅವರು ಇಂತಹ ಕೆಲಸಗಳಿಗೆ ಹೋಗಲೇಬಾರದೆಂದು ನಮ್ಮ ಅಭಿಪ್ರಾಯ. ಏಕೆಂದರೆ : ಕರ್ಕ, ವೃಶ್ಚಿಕ, ಮೀನ ಈ ರಾಶಿಯ ಜನರು ಲೆಕ್ಕಪತ್ರಗಳನ್ನೂ ಹಣಕಾಸುಗಳನ್ನೂ (documents) ದಾಖಲೆಗಳನ್ನೂ ಸರಿಯಾಗಿ ಇಡುವುದಿಲ್ಲ. ಅಸ್ತವ್ಯಸ್ತವಾಗಿ ಇಡುವರಲ್ಲದೆ ಇಟ್ಟದ್ದು ಇಟ್ಟಲ್ಲೆ, ಕೊಟ್ಟದ್ದು ಕೊಟ್ಟಲ್ಲೆ ಆಗುವುದು. ಅವರಲ್ಲಿ ಓರಣ, ಅಚ್ಚುಕಟ್ಟುತನದ ಅಭಾವವಿರುತ್ತದೆ. ಎಷ್ಟೋ ಸಲ ಇಂಥ ಜನರು ಅನೇಕ ಮಹತ್ವದ ಕಾಗದಪತ್ರಗಳನ್ನು ಕಳೆದುಕೊಳ್ಳುವರು ಮತ್ತು ಬಹುಬೇಗ ಮರೆಯುವ ಸ್ವಭಾವದವರೂ ಆಗಿರುತ್ತಾರೆ.

ಮೇಷ, ಸಿಂಹ, ಧನು ಈ ಅಗ್ನಿರಾಶಿಯ ಜನರಿಗಂತೂ ಲೆಕ್ಕಪತ್ರ ಮಾಡಲು ಬರುವದಿಲ್ಲ. ವಿಶೇಷವಾಗಿ ಕ್ಯಾಶಿಯರ್, ಟ್ರೇಜರರ್ ಆಗಲಂತೂ ಅನರ್ಹರು. ಸರ್ಕಾರದ ಹಣವೇ ಆಗಲಿ, ಬೇರೆ ಜನರ ಹಣವೇ ಆಗಲಿ, ತನ್ನ ಸ್ವಂತ ಹಣವೆಂದು ತಿಳಿದು ಬೇಕಾದ ಹಾಗೆ ಖರ್ಚು ಮಾಡಲು ಅನುಮಾನಿಸುವುದಿಲ್ಲ, ಇಂದು ಒಂದು ಹತ್ತರ ನೋಟು ಹೆಚ್ಚು ಹೋಗಿದೆ, ನಿನ್ನೆ ನೂರರ ನೋಟು ಕಾಣದಾಗಿತ್ತು ಅಂತಾ ಪ್ರತಿನಿತ್ಯ ಗೋಳಾಡುವ ಅನೇಕ ಜನರ ಉದಾಹರಣೆಗಳು ಅನುಭವಕ್ಕೆ ಬಂದಿವೆ. ಕಾಯಿದೆಗಳ ಪರಿವೆಯಿಲ್ಲದೆ ಪುರಾವೆಗಳ ಆಧಾರವಿಲ್ಲದೆ ಸರ್ಕಾರದ ಹಣವೆಂದರೆ ತನ್ನದೇ ಸ್ವಂತ ಹಣವೆಂದು ತಿಳಿದು, ದಾನಶೂರ ಕರ್ಣರಂತೆ ವರ್ತಿಸಿ, ಹಿಂದಿನಿಂದ ನರಳಾಡುವ ನೌಕರದ ಸಂಖ್ಯೆಗೇನೂ ಕಡಿಮೆಯಿಲ್ಲ.

ಇನ್ನು ಮೇಷ ರಾಶಿಯ ಜನರಿಂದ ಕೆಲಸ ಬೇಗ ಸಾಗುವುದಿಲ್ಲ. ಇಂತಹ ಅಕೌಂಟಂಟ, ಆಡಿಟರ, ಕ್ಯಾಶಿಯರರಗಳು ಲೆಕ್ಕವನ್ನು ಹೊಂದಿಸಲು ಅಹೋ ರಾತ್ರಿ ಕೂಡ್ರುವ ಜನರ ಸಂಖ್ಯೆಯೇನೂ ಕಡಿಮೆಯಿಲ್ಲ.

ಸಿಂಹ ಹಾಗೂ ಧನು ರಾಶಿಯ ಜನರು ಸರ್ಕಾರೀ ಹಣದಲ್ಲಿಯೂ ಬೇರೆಯವರ ಹಣದಲ್ಲಿಯೂ ಕೂಡ ಔದಾರ್ಯದ ಪ್ರತೀಕರಾಗಿ ಜೈಲಿನ ಆಮಂತ್ರಣವನ್ನು ಸ್ವೀಕರಿಸಿದ ಉದಾಹರಣೆಗಳೆಷ್ಟೋ ಇರುತ್ತವೆ.

೪ ಮತ್ತು ೫) ಕಾರಕೂನರು :

ಮೊದಲನೆಯ ದರ್ಜೆಯ ಹಾಗೂ ದ್ವಿತೀಯ ದರ್ಜೆಯ ಕಾರಕೂನರ ಯೋಗಗಳಲ್ಲಿ ವಿಶೇಷವಾಗಿ ಭೇದವಿರುವದಿಲ್ಲ.

ಜಾತಕದಲ್ಲಿ ಕಾರಕೂನಿಕೆ ಯೋಗಗಳಿದ್ದರೆ ಜಾತಕನು ಕಾರಕೂನನಾಗುವನು. ಈ ಕಾರಕೂನರ ಯೋಗಗಳನ್ನು ಇದೇ ಪುಸ್ತಕದ ೧ ನೆಯ ಪ್ರಕರಣದ ೫-೬ ನೆಯ ಪುಟಗಳಲ್ಲಿ ಕೊಡಲಾಗಿದೆ.

೬) ಶೀಘ್ರಲಿಪಿಗಾರರು ಹಾಗೂ ಟೈಪಿಸ್ಟರು :

ಸರ್ಕಾರೀ ಹಾಗೂ ಖಾಸಗಿ ಕಚೇರಿಗಳಲ್ಲಿಯೂ ಮತ್ತು ಇತರ ಸಂಘ-ಸಂಸ್ಥೆಗಳಲ್ಲಿಯೂ ನಡೆಯುವ ಅಸಂಖ್ಯಾತ ಪತ್ರವ್ಯವಹಾರ ಮತ್ತು ಪತ್ರಗಳ ವಿಲೇವಾರಿ ಶೀಘ್ರವಾಗಿಯೂ ಸುಲಭವಾಗಿಯೂ ಜರುಗುವುದರಲ್ಲಿ ಇಂದು ಮೇಲಧಿಕಾರಿಗಳಿಗೆ ಅತ್ಯಂತ ಹೆಚ್ಚಿನ ಸಹಾಯಕರಾಗಿರುವರೆಂದರೆ ಶೀಘ್ರ-ಲಿಪಿಗಾರರು ಮತ್ತು ಟೈಪಿಸ್ಟ ಜನರು.

ಇಂದು ಅನೇಕರು ಟೈಪಿಂಗ ಹಾಗೂ ಶಾರ್ಟಹ್ಯಾಂಡ ಕಲಿಯಲು ಹೆಚ್ಚು ಒಲವನ್ನೂ ಉತ್ಸಾಹವನ್ನೂ ತೋರುತ್ತಿರುವುರು. ಇದಕ್ಕೆ ಕಾರಣ ಮೊದಲನೆಯದಾಗಿ, ಇದು ಅಲ್ಪಾವಧಿಯ ಶಿಕ್ಷಣವಿದ್ದು, ಶಾಲಾ-ಕಾಲೇಜಿನ ಶಿಕ್ಷಣದ ಜೊತೆಗೆ ಅಥವಾ ನೌಕರಿಯನ್ನು ಮಾಡುತ್ತಾ ಕೂಡ ಹೆಚ್ಚು ಶ್ರಮ ಪಡದೆ ಈ ಶಿಕ್ಷಣವನ್ನು ಮುಗಿಸಬಹುದಾಗಿದೆ. ಎರಡನೆಯದಾಗಿ ಇತರ ಖಾಸಗೀ ಕಂಪನಿ, ಫ್ಯಾಕ್ಟರಿಗಳಲ್ಲಾಗಲಿ ಸರ್ಕಾರೀ ಕೆಲಸದಲ್ಲಾಗಲಿ ಈ ಜನರಿಗಾಗಿ ಬೇಡಿಕೆ ಬಹಳವಿರುವುದು. ಮೂರನೆಯದಾಗಿ, ಈ ವರ್ಗದ ನೌಕರರ ವೇತನ ಮಟ್ಟ ಇತರ ಮಟ್ಟಕ್ಕಿಂತ ಹೆಚ್ಚಿದ್ದು, ಜವಾಬ್ದಾರಿಯೂ ಕಡಿಮೆ ಇರುತ್ತದೆ.

ಶೀಘ್ರಲಿಪಿಗಾರರ ವೇತನದ ಮಟ್ಟವು ಮೊದಲನೆಯ ದರ್ಜೆಯ ಕಾರಕೂನರ ವೇತನ ಮಟ್ಟಕ್ಕಿಂತಲೂ ಹೆಚ್ಚಿದ್ದು ಆಕರ್ಷಕವಿರುತ್ತದೆ. ಇದಲ್ಲದೆ ಉನ್ನತಾಧಿಕಾರಿಗಳೊಡನೆ ಇವರಿಗೆ ನಿಕಟ ಸಂಪರ್ಕವಿರುವುದರಿಂದ ಈ ನೌಕರದಾರರಿಗೆ ಕಚೇರಿಗಳಲ್ಲಿ ಮರ್ಯಾದೆಯು ಬಹಳವಿರುತ್ತದೆ.

ಇತ್ತೀಚೆಗೆ ಸಾಮಾನ್ಯವಾಗಿ ಎಲ್ಲ ಕಚೇರಿ, ಕಾರ್ಖಾನೆಗಳಲ್ಲಿ ಕಡೆಯಲ್ಲಿಯ ಉನ್ನತ ಅಧಿಕಾರಿಗಳು ಮತ್ತು ಮಂತ್ರಿಗಳು ಈ ಶೀಘ್ರ ಲಿಪಿಗಾರರನ್ನು ನಿಯಮಿಸಿಕೊಳ್ಳುವ ಪರಿಪಾಠ ಹೆಚ್ಚಾಗಿದೆ. ಪರಿಪಾಠ ಎನ್ನುವದಕ್ಕಿಂತ ಇದೊಂದು ಆಢ್ಯತೆಯಾಗಿದೆ (Fashion) ಎನ್ನಬಹುದು.

ಈ ರೀತಿ ನೌಕರಿಯ ಅವಕಾಶ ದೃಷ್ಟಿಯಿಂದಲೂ ಮತ್ತು ಪ್ರಗತಿಯ ದೃಷ್ಟಿಯಿಂದಲೂ ನೆಟ್ಟಗಿರುವಂತಹ ಈ ಉದ್ಯೋಗಕ್ಕೆ ಬೇಕಾದ ಶಿಕ್ಷಣವನ್ನು ಪಡೆಯಲು ಅನೇಕರು ಬಹುಸಂಖ್ಯೆಯಲ್ಲಿ ಅಣಿಯಾಗುತ್ತಿರುವುದರಲ್ಲಿ ಔಚಿತ್ಯವಿದೆಯೆಂದು ಹೇಳಬಹುದು.

ಇನ್ನು ಫಲಜ್ಯೋತಿಷ್ಯದಲ್ಲಿ ಟೈಪಿಸ್ಟ ಹಾಗೂ ಶೀಘ್ರಲಿಪಿಗಾರರ ಈ ಶಿಕ್ಷಣಕ್ಕೆ ಹಾಗೂ ಉದ್ಯೋಗಕ್ಕೆ ಕಾರಕರಾರು ಮತ್ತು ಇಂತಹ ನೌಕರಿಗಳನ್ನು ಪಡೆಯಲು ಜಾತಕ ಹೇಗಿರಬೇಕೆಂಬುದನ್ನು ಪರಿಶೀಲಿಸುವಾ :

ಕಾರಕ ಗ್ರಹ : ಟೈಪಿಂಗ ಹಾಗೂ ಶೀಘ್ರ ಲಿಪಿಯ ಶಿಕ್ಷಣ ಹಾಗೂ ನೌಕರಿಗೆ ಬುಧನು ಕಾರಕನಿರುತ್ತಾನೆ. ಬುಧನ ತರುವಾಯ ಶನಿ ಗ್ರಹವು ಕೂಡ ಪೂರಕವಿರುತ್ತದೆ. ಜಾತಕದಲ್ಲಿ ಚಂದ್ರನು ಬಲಾಢ್ಯನೂ ಯೋಗಕಾರಕನೂ ಇದ್ದರೆ ಬಹಳೇ ಉತ್ತಮ. ಇಂತಹ ಜನರು ಮೃದುವಾಗಿ ಮಾತನಾಡುತ್ತಾ ಅಧಿಕಾರಿಗಳನ್ನು ಒಲಿಸಿಕೊಳ್ಳಬಲ್ಲರು.

ಜಾತಕದಲ್ಲಿ ಮಂಗಳನು ಬಲಾಢ್ಯನಿರುವಂತಹ ವ್ಯಕ್ತಿಗಳಂತೂ ಈ ನೌಕರಿಗೆ ಕೈಹಾಕದಿರುವುದೇ ಒಳಿತು. ಮಂಗಳನ ಗುಣಧರ್ಮ ಅಂದರೆ ಅವಿಧೇಯತೆ, ಅಹಂಮಾನ್ಯತೆ ಹಾಗೂ ದರ್ಪವಿದ್ದು ಪ್ರತಿನಿತ್ಯವೂ ಬಡಿದಾಡಬೇಕಾಗುತ್ತದೆ.

ರವಿ ಬಲಾಢ್ಯನಿರುವಂತಹ ವ್ಯಕ್ತಿಗಳಂತೂ ಇಂಥ ಉದ್ಯೋಗದಲ್ಲಿ ತೊಡಗುವುದಿಲ್ಲವೆಂದೇ ಹೇಳಬಹುದು. ಅವರು ಇದನ್ನು ಕಲಿತರೂ ತಮ್ಮ ಕಾರ್ಯದ ಗೌಪ್ಯವನ್ನು ಕಾಪಾಡಲು, ತಾವೇ ಕೆಲಸ ಮಾಡಬೇಕಾಗುವದರಿಂದ ಕಲಿಯುತ್ತಾರೆ.

ಸ್ಥಾನ : ಸ್ಥಾನ ದೃಷ್ಟಿಯಿಂದ ನೋಡಿದರೆ ಟೈಪಿಂಗ್ ಹಾಗೂ ಶಾರ್ಟಹ್ಯಾಂಡಗಳಿಗೆ ತೃತೀಯ ಸ್ಥಾನವನ್ನೂ ತೃತೀಯಾಧೀಶನ ಬಲಾಬಲ ವನ್ನೂ ನೋಡಬೇಕಾಗುತ್ತದೆ. ಶೀಘ್ರಲಿಪಿಗಾರರಿಗೆ ಮೇಲಿಂದ ಮೇಲೆ ಪ್ರವಾಸ ಮಾಡಬೇಕಾಗುವದರಿಂದ (ಅಮಲ್ದಾರ ಅಧಿಕಾರಿಗಳ ಸಂಗಡ) ಇಂತಹ ವ್ಯಕ್ತಿಗಳ ಜಾತಕದಲ್ಲಿ ತೃತೀಯ, ಭಾಗ್ಯ ಸಪ್ತಮದಲ್ಲಿ ಅನೇಕ ಗ್ರಹಗಳು ಇರುವುದಲ್ಲದೆ, ಚರರಾಶಿಯ ಗ್ರಹಗಳೇ ಹೆಚ್ಚು ಇರುತ್ತವೆ. ವಿಶೇಷವಾಗಿ ತೃತೀಯ ಸ್ಥಾನದಲ್ಲಿಯೇ ಅನೇಕ ಗ್ರಹಗಳು ಇರುವುದು ಕಂಡುಬರುತ್ತದೆ.

ಲಗ್ನ : ಶೀಘ್ರಲಿಪಿಗಾರರ ಹಾಗೂ ಟೈಪಿಸ್ಟರ ಜಾತಕದಲ್ಲಿ ಇಂತಹದೇ ಲಗ್ನವಿರುತ್ತದೆ, ಇಂತಹದೇ ಲಗ್ನವಿರಬೇಕು ಎಂಬ ನಿಯಮವಿಲ್ಲದಿದ್ದರೂ ಕರ್ಕ, ಸಿಂಹ, ಕನ್ಯ, ವೃಷಭ, ಮಕರ, ಈ ಲಗ್ನಗಳು ಪೋಷಕವೆಂದು ಹೇಳಬಹುದು.

ರಾಶಿ : ಉತ್ತಮ ಶೀಘ್ರಲಿಪಿಗಾರ ಹಾಗೂ ಟೈಪಿಸ್ಟರೆಂದು ಕೆಲಸ ಮಾಡುತ್ತಿರುವವರು ಹೆಚ್ಚಾಗಿ ಕನ್ಯಾರಾಶಿಯವರು ಇರುವುದನ್ನು ಕಾಣುತ್ತೇವೆ.

ವಿಧೇಯತೆ, ಆಜ್ಞಾಪಾಲನೆ, ನಮ್ರತೆ, ಅಚ್ಚುಕಟ್ಟುತನ, ಸುಲಭಲಬ್ಧತೆ —ಈ ಎಲ್ಲ ಗುಣಗಳು ಟೈಪಿಸ್ಟ ಹಾಗೂ ಶೀಘ್ರಲಿಪಿಗಾರರಲ್ಲಿರುವುದು ಕಂಡುಬರುತ್ತದ.

ಮೇಲೆ ತೋರಿಸಿದ ಎಲ್ಲ ಗುಣಗಳು ಕನ್ಯಾರಾಶಿಯವರಲ್ಲಿರುವುದು ಕಂಡುಬರುತ್ತದೆ. ಕನ್ಯಾರಾಶಿಯ ನಂತರ ಸ್ತ್ರೀ ರಾಶಿಗಳಾದ ವೃಷಭ, ಕರ್ಕ,

ವೃಶ್ಚಿಕ, ಮಕರ, ಮೀನ ಈ ರಾಶಿಯ ಜನರು ಉತ್ತಮ ಶೀಘ್ರಲಿಪಿಗಾರ ಹಾಗೂ ಟೈಪಿಸ್ಟ ಆಗಬಲ್ಲರು.

ಪುರುಷ ರಾಶಿಗಳಾದ ಮೇಷ, ಮಿಥುನ, ಸಿಂಹ, ತುಲಾ, ಧನು, ಕುಂಭ ಈ ರಾಶಿಯ ಜನರು ಎಂದೂ ಈ ಉದ್ಯೋಗಕ್ಕೆ ಕೈಹಾಕದಿರುವುದೇ ಉಚಿತವಿರುತ್ತದೆ. (ಪ್ರತಿನಿತ್ಯ ಬಡಿದಾಡಬೇಕಾಗುತ್ತದೆ).

ಮುದ್ರೆವೀ ಶೀಘ್ರಲಿಪಿಗಾರ : ವಿದ್ಯೆ ಯಾವುದೇ ಇರಲಿ, ಉದ್ಯೋಗ ಎಂತಹುದೇ ಇರಲಿ, ದೈವದ ಬೆಂಬಲವಿದ್ದರೆ ಸಾಕು, ಎಂತಹ ವ್ಯಕ್ತಿಯನ್ನೂ ಮುಂದೆ ತರುತ್ತದೆ.

ಅದೆಂತಹ ಕರ್ತೃತ್ವಶಕ್ತಿ ಉಳ್ಳವನೂ ಮಹಾ ವಿದ್ವಾಂಸನೂ ಇದ್ದಾಗ್ಯೂ ಕೂಡ ದೈವದ ಬೆಂಬಲವಿಲ್ಲದೇ ಚಡಪಡಿ ಸುತ್ತಿರುವುದನ್ನು ಕಂಡಿದ್ದೇವೆ. ಇದಕ್ಕೆ ಶೀಘ್ರಲಿಪಿಗಾರರು ಹೇಗೆ ಹೊರತಾಗುತ್ತಾರೆ!

ನಮ್ಮೊಬ್ಬ ಮಿತ್ರರು ಕೇವಲ S. S. C. ಆಗಿ, ಶಾರ್ಟಹ್ಯಾಂಡ ಮುಗಿಸಿ ಇಂಗ್ಲಂಡ, ಅಮೇರಿಕಾ ಸುತ್ತಾಡಿ ಲಕ್ಷಾಧೀಶರಾಗಿ ನಿವೃತ್ತರಾಗಿದ್ದಾರೆ. ಇದು ಹೇಗೆ ಎಂದು ವಿಚಾರಿಸಲಾಗಿ ಅವರೊಬ್ಬರು ಮಂತ್ರಿಯ ಪರ್ಸನಲ್ ಸ್ಟೇನೋಗ್ರಾಫರ ( Personal Stenographer ) ಆಗಿದ್ದರಂತೆ! ಇದೊಂದೇ ಉದಾಹರಣೆಯೇ ಸಾಕು— ಯಾವದೆ ಉದ್ಯೋಗಕ್ಕೆ ದೈವದ ಬೆಂಬಲ ಬೇಕೆಂಬುವುದಕ್ಕೆ.

ಉನ್ನತ ಅಧಿಕಾರಿ, ರಾಜ್ಯಪಾಲರು, ಮಂತ್ರಿಗಳು, ರಾಯಭಾರಿಗಳು ಮೊದಲಾದವರ ಶೀಘ್ರಲಿಪಿಗಾರರಾಗಲು ಜಾತಕದಲ್ಲಿ ನವಮಸ್ಥಾನವೂ, ನವಮೇಶನೂ ಬಲಾಢ್ಯರಿರಬೇಕು. ರವಿ, ಗುರು ಗ್ರಹಗಳೂ ಬಲಾಢ್ಯರಿರಬೇಕು. ತೃತೀಯೇಶ ಹಾಗೂ ನವಮೇಶರ ಶುಭಸಂಬಂಧ ಯೋಗವಿರಬೇಕು. ನವಮೇಶ ಹಾಗೂ ಬುಧನ ಶುಭಸಂಬಂಧವು ಇರಬೇಕು. ಶನಿ ದೃಷ್ಟಿರಹಿತ ಚಂದ್ರನಿರಬೇಕು.

೭) ಜವಾನರು ಹಾಗೂ ೪ನೇ ದರ್ಜೆಯ ಕೆಲಸಗಾರರು :

ಜವಾನರು ಹಾಗೂ ನಾಲ್ಕನೇ ದರ್ಜೆಯ ಕೆಲಸಗಾರರ ಜಾತಕದಲ್ಲಿ ಹೇಳಿಕೊಳ್ಳುವಂತಹ ಯಾವುದೇ ಶುಭಯೋಗಗಳು ಇರುವುದಿಲ್ಲ.

ಇವರ ಜಾತಕದಲ್ಲಿ ಕೆಳಗೆ ಕಾಣಿಸಿದಂಥ ಅಶುಭಯೋಗಗಳಿರುವುದು ಕಂಡುಬರುತ್ತದೆ.

(೧) ಅನೇಕ ಗ್ರಹಗಳು ಅನುದಿತ ಗೋಲಾರ್ಧದಲ್ಲಿರುತ್ತವೆ.

(೨) ಬಾಲ್ಯಾವಸ್ಥೆಯಲ್ಲಿಯೇ ಸಾಡೇಸಾತಿ ಇರುತ್ತದೆ.

(೩) ಪಂಚಮಸ್ಥಾನದಲ್ಲಿ ಶನಿ–ಮಂಗಳ, ರವಿ–ಶನಿ, ಶನಿ–ಕೇತು, ಶನಿ–ರಾಹು ಈ ಗ್ರಹಗಳ ಯುತಿ ಇಲ್ಲವೆ ಪ್ರತಿಯೋಗವು ಇದ್ದು, ಪಂಚಮೇಶನು ದುರ್ಬಲನೂ, ಗುರುವೂ ಕೂಡ ಅಶುಭದಾಯಕನೂ ಇರುವರು.

(೪) ಅನೇಕ ಗ್ರಹಗಳು ನೀಚ, ಶತ್ರುಕ್ಷೇತ್ರ, ಶತ್ರುಮಧ್ಯ, ಪಾಪಗ್ರಹ ದೃಷ್ಟ, ಅಸ್ತಂಗತ ಇರುವುವಲ್ಲದೆ ಬಾಲ್ಯಾವಸ್ಥೆ ಇಲ್ಲವೆ ವೃದ್ಧಾಪ್ಯದಲ್ಲಿರುತ್ತವೆ.

(೫) ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿರುತ್ತವೆ. ಇವರ ಜಾತಕ ದಲ್ಲಿಯ ಸುಖಸ್ಥಾನ, ಲಗ್ನ ಹಾಗೂ ಭಾಗ್ಯಸ್ಥಾನ ಅಶುಭ ವಿರುವದು ಕಂಡುಬರುತ್ತದೆ.

(೬) ಆಡಳಿತಕಾರಕ ಗ್ರಹಗಳಾದ ರವಿ, ಗುರು, ಮಂಗಳರು ಮತ್ತು ಲಗ್ನೇಶಭಾಗ್ಯೇಶರು ಅಶುಭದಾಯಕರೂ ಕಾರಕೂನಿಕೆಯ ಗ್ರಹಗಳಾದ ಬುಧ, ಶುಕ್ರರೂ ಕೂಡ ಅಶುಭಕಾರಕರೂ ಇದ್ದು, ಸೇವಾಕಾರಕ ಗ್ರಹವಾದ ಶನಿಯೂ ತಕ್ಕಮಟ್ಟಿಗೆ ಶುಭ ದಾಯಕ (ಸ್ಥಾನಬಲವಿಲ್ಲದೆ, ರಾಶಿಬಲವದ) ನಿರುವದುಂಟು.

## (ಬ) ವಿಶಿಷ್ಟ ಖಾತೆಯ ಸಾಮಾನ್ಯ ಹುದ್ದೆಗಳು :

ಈ ವರೆಗೆ ಎಲ್ಲ ಖಾತೆಗಳ ಸಾಮಾನ್ಯ ಹುದ್ದೆಗಳನ್ನು ವಿವರಿಸಿ ಲಾಯಿತು. ಇನ್ನು ಕೆಲ ವಿಶಿಷ್ಟ ಖಾತೆಗಳ ಸಾಮಾನ್ಯ ಹುದ್ದೆಗಳನ್ನು ವಿವರಿಸುವಾ.

ಈ ವಿಶಿಷ್ಟ ಖಾತೆಗಳ ಸಾಮಾನ್ಯ ಹುದ್ದೆಗಳು ಆರು ಪ್ರಕಾರದವಿರು ವುದು ಕಂಡುಬರುತ್ತದೆ.

(೧) ಇನಸ್ಪೆಕ್ಟರ

(೨) ಸ್ಟೋರಕೀಪರ

(೩) ವೈಜ್ಞಾನಿಕ ವಿಭಾಗದ ನೌಕರರು (Scientific Staff)

(೪) ಅಗ್ನಿಶಾಮಕದಳದ ಸಿಬಂದಿ

(೫) ಅರ್ಥಶಾಸ್ತ್ರಜ್ಞರು ಹಾಗೂ ಅಂಕಿ-ಸಂಖ್ಯಾ ತಜ್ಞರು (Economists and Statisticians)

(೬) ಇಂಜನಿಯರ್ಸ ಹಾಗೂ ತಾಂತ್ರಿಕ ಕೆಲಸಗಾರರ ಸಿಬ್ಬಂದಿ (Engineers and Technical Workers)

೧. ಇನಸ್ಪೆಕ್ಟರ : ಕೇಂದ್ರ ಸರಕಾರದ ಹಾಗೂ ರಾಜ್ಯ ಸರಕಾರದ ಖಾತೆಗಳಲ್ಲಿಯೇ ಆಗಲಿ ಅಥವಾ ಕಾರ್ಪೊರೇಶನ್ ಹಾಗೂ ಇತರ ಖಾಸಗಿ ಕೆಲಸಗಳಲ್ಲಿಯೇ ಆಗಲಿ ಈ ಹುದ್ದೆಯ ನೌಕರದಾರರನ್ನು ಕಾಣಬಹುದು. ಇವರು ಮುದ್ರಾಂಕಿತ ಅಧಿಕಾರಿಗಳೂ ಅಲ್ಲ, ಟಾಂಗಾದ ಕುದುರೆಯಂತಿರುವ ಕಾರಕೂನರೂ ಅಲ್ಲ, ವರಿಷ್ಠ ಕಚೇರಿಗಳಲ್ಲಿದ್ದು ಅಧಿಕಾರಿಗಳ ಪರವಾಗಿ ಕೆಳಗಿನ ಕಚೇರಿಗಳ ತಪಾಸಣೆಯ ವೃತ್ತಿ ಅಥವಾ ಅಧಿಕಾರಿಗಳ ರಾಯಭಾರಿ ಯಂತೆ ವರ್ತಿಸುವದೇ ಇವರ ಮುಖ್ಯ ಕಾರ್ಯ.

ಕಾರಕ ಗ್ರಹ : ಇವರೇನೂ ಅಧಿಕಾರಿಗಳಲ್ಲ; ಆದರೂ ಅಧಿಕಾರ ಚಲಾಯಿಸುವರು, ಇಲ್ಲವೆ ಅಧಿಕಾರಿಗಳಿಗೆ ಅಧಿಕಾರ ಚಲಾಯಿಸಲು ಸಹಾಯ ಮಾಡುವರು. ಅಧಿಕಾರವಿಲ್ಲದಿದ್ದರೂ ಅಧಿಕಾರ ಚಲಾಯಿಸುವ ಮಂಗಳನೇ ಈ ಹುದ್ದೆಯ ಕಾರಕನಾಗುವನು; ಆದರೆ ಮಂಗಳನು ಸ್ಥಾನಬಲದವ ನಿರದೆ ಯೋಗಕಾರಕನಿರದ ಕೇವಲ ರಾಶಿ ಬಲದವನಿರುತ್ತಾನೆ.

ಮಂಗಳನ ತರುವಾಯ ಬುಧನೂ ಕೆಲಮಟ್ಟಿಗೆ ಈ ಹುದ್ದೆಯ ಕಾರಕ ನಾಗುವನು. ಏಕೆಂದರೆ ವಿದ್ಯೆಗಿಂತಲೂ ಬುದ್ಧಿ ಪ್ರಧಾನವಾದುದೇ ಇವರ ಕೆಲಸ (ಗುರುವಿಗಿಂತ ಬುಧನು ಇವರ ಜಾತಕದಲ್ಲಿ ಬಲಾಢ್ಯನಿರುತ್ತಾನೆ).

ಸ್ಥಾನ : ಇವರ ಜಾತಕದಲ್ಲಿರುವ ವೈಶಿಷ್ಟ್ಯವೆಂದರೆ ಕಾರಕ ಲಗ್ನ, ಕಾರಕ ಗ್ರಹಗಳಿಗಿಂತ ಕಾರಕಸ್ಥಾನವೇ ಮುಖ್ಯವಿರುತ್ತದೆ.

ಈ ಪ್ರಕಾರದ ಹುದ್ದೆಗಳಿಗೆ ಅನೇಕ ಸ್ಥಾನಗಳಿವೆ. ಅನೇಕ ಗ್ರಹಗಳು ಹೆಚ್ಚಾಗಿ ಲಗ್ನ, ತೃತೀಯ, ಭಾಗ್ಯ, ಸಪ್ತಮ, ವ್ಯಯ ಈ ಸ್ಥಾನದಲ್ಲಿರುವವು.

ಅನೇಕ ಗ್ರಹಗಳು ಚರರಾಶಿಯಲ್ಲಿ ಇಲ್ಲವೆ ದ್ವಿಸ್ವಭಾವ ರಾಶಿಯಲ್ಲಿರು ವವು. ಆದರಲ್ಲಿಯೂ ತೃತೀಯ ಇಲ್ಲವೆ ಲಗ್ನದಲ್ಲಿ ಹೆಚ್ಚು ಇರುವವು. ವಿಶೇಷವಾಗಿ ರವಿ, ಚಂದ್ರರು ಹೆಚ್ಚಾಗಿ ಈ ಸ್ಥಾನಗಳಲ್ಲಿರುವರು.

ರಾಶಿ : ರಾಶಿ ದೃಷ್ಟಿಯಿಂದ ನೋಡಿದರೆ ಇಂಥ ರಾಶಿಯವರೇ ಇರಬೇಕೆಂಬ ನಿಯಮವಿಲ್ಲ.

ಸ್ಟೋರ್‌ಕೀಪರ್ಸ್ :

ಸಂಗ್ರಹಾಲಯ ವಿಭಾಗ ಸಿಬ್ಬಂದಿ (Store keepers-Staff)

ಕೇಂದ್ರ ಸರಕಾರದ ಹಾಗೂ ರಾಜ್ಯ ಸರಕಾರದ ಆಧೀನದಲ್ಲಿಯೂ ಖಾಸಗಿ ಕ್ಷೇತ್ರದಲ್ಲಿಯೂ ನಾವು ಸ್ಟೋರ್ಸ ವಿಭಾಗದ ಸಿಬ್ಬಂದಿಯನ್ನು (ಮಾಲುಮುದ್ದೆ ಸಂಗ್ರಾಹಕರು) ಕಾಣಬಹುದು. ಈ ಎಲ್ಲ ಖಾತೆಗಳಲ್ಲಿ

ಇವರಿಗೋಸ್ಕರ ಪ್ರತ್ಯೇಕ ಸ್ವತಂತ್ರವಾದ ವಿಭಾಗ (Independent Section) ಮಿ-ತವಾದುದನ್ನು ಕಾಣಬಹುದು.

ಇವರು ಕೆಲಸದ ವಿವಿಧ ಸರಕುಗಳ ಆಮದುಗಳ ಬಗ್ಗೆ ಬರೆದಿಡುವುದು, ಸರಕುಗಳನ್ನು ಸಂಗ್ರಹಿಸುವುದು, ಸರಕುಗಳನ್ನು ಕೆಡದಂತೆ ನೋಡಿಕೊಳ್ಳುವುದು, ಸರಿಯಾಗಿ ಹಂಚುವುದು ಮತ್ತು ವಿವಿಧ ಸರಕುಗಳ ಲೆಕ್ಕಪತ್ರವನ್ನಿಡ್ಡುವುದು ಇತ್ಯಾದಿಗಳಿರುತ್ತವೆ.

ಕೇಂದ್ರ ಸರಕಾರದಲ್ಲಿ ರೇಲ್ವೆ, ಆರೋಗ್ಯ, ಕೃಷಿ, ಹಣಕಾಸು ಲೋಕೋಪಯೋಗಿ ಇತ್ಯಾದಿ ಖಾತೆಗಳಲ್ಲಿಯೂ ಅವರವರ ಖಾತೆಗಳಿಗೆ ವರ್ಷವಿಡೀ ಅವಶ್ಯ ಬೀಳುವ ಸರಕುಗಳ ಸಂಗ್ರಹ, ಹಂಚುವಿಕೆ ಇತ್ಯಾದಿ ಚಟುವಟಿಕೆ ಈ ಖಾತೆಗಳಲ್ಲಿ ಕಂಡುಬರುತ್ತದೆ. ಅದೇ ಪ್ರಕಾರ ರಾಜ್ಯಸರಕಾರದ ಖಾತೆಗಳಲ್ಲಿಯೂ ಸ್ಟೇಟ್ ಟ್ರಾನ್ಸಪೋರ್ಟ ಮೊದಲಾದ ಕಾರ್ಪೋರೇಶನ್ ಖಾತೆಗಳಲ್ಲಿಯೂ ಮತ್ತು ವಿವಿಧ ಖಾಸಗಿ ಕ್ಷೇತ್ರಗಳಲ್ಲಿಯೂ ಕಂಡುಬರುವುದು.

ವಿವಿಧ ಖಾತೆಗಳಲ್ಲಿ ಈ ಸ್ಟೋರ್ಸ್ ವಿಭಾಗದ ಸಿಬ್ಬಂದಿ ನೌಕರ ವರ್ಗದವರನ್ನು ವಿವಿಧ ಹುದ್ದೆಗಳಿಂದ ಕರೆಯುವ ರೂಢಿಯನ್ನು ಕಾಣಬಹುದು. ಉದಾಹರಣೆಗಾಗಿ : ರೇಲ್ವೆ ಖಾತೆಯಲ್ಲಿ ಡಿಪೋ ಸೂಪರಿಂಟೆಂಡೆಟ್ಸ್, ಸ್ಟೋರ್ಸ್‌ಕೀಪರ್ಸ, ವಾರ್ಡ ಕೀಪರ್ಸ್, ಡೆಲಿವರಿ ಕಾರಕೂನರು, ಸ್ಟೋರ್ಸ್ ಕಾರಕೂನರು ಎಂದು ಕರೆಯಲ್ಪಡುವ ನೌಕರ ವರ್ಗದವರನ್ನು ಕಂಡರೆ ಕೃಷಿ, ಆಹಾರ ಖಾತೆಗಳಲ್ಲಿ ಗೋಡಾನ ಸೂಪರಿಂಟೆಂಡೆಂಟ್ಸ್, ಗೋಡಾನ ಕೀಪರ್ಸ್ ಇತ್ಯಾದಿಯಾಗಿ ಕರೆಯಲ್ಪಡುತ್ತಾರೆ. ಟಂಕಸಾಲೆಯಲ್ಲಿ ಬುಲಿಯನ್ ರಜಿಸ್ಟ್ರಾರ್, ಬುಲಿಯನ್ ಕೀಪರ್ ಎಂದು ಕರೆಯಲ್ಪಡುತ್ತರೆ. ಎಲ್ಲ ಖಾತೆಗಳಲ್ಲಿ ಹೆಚ್ಚಾಗಿ ಸ್ಟೋರ್ಸ್‌ಕೀಪರ್, ಸ್ಟೋರ್‌ಕ್ಲಾರ್ಕ, ಸ್ಟೋರ್ ವೆರಿಫೈಯರ್, ಸ್ಟೋರ್ ಅಸಿಸ್ಟಂಟ್, ಸ್ಟೋರ್ ಹೋಲ್ಡರ್, ಸ್ಟೋರ್ ಸೂಪರಿಂಟೆಂಡೆಂಟ ಇತ್ಯಾದಿ ನಾಮಧೇಯ ಹುದ್ದೆಗಳಿಂದ ಇವರು

ಯಾವುದೆ ಹೆಸರಿನಿಂದ ಕರೆಯಲ್ಪಡಲಿ ಯಾವುದೆ ಖಾತೆಯ ನೌಕರ ನಿರ್ಲಿ ಮಾಡುವ ಕಾರ್ಯ ಒಂದೇ ಬಗೆಯದು. ಆದುದರಿಂದ ಜ್ಯೋತಿಷ್ಯ ಶಾಸ್ತ್ರದ ದೃಷ್ಟಿಯಲ್ಲಿ ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಈ ಹುದ್ದೆಯ ಅಥವಾ ಈ ಸಿಬ್ಬಂದಿ ವರ್ಗದವರ ಕಾರಕ ಗ್ರಹಗಳಾವವು ಸ್ಥಾನ, ಲಗ್ನ, ರಾಶಿಗಳಾವವು ಎಂಬುದನ್ನು ನೋಡುವಾ.

**ಕಾರಕ ಗ್ರಹ :** ದಾಖಲೆ ಇಡುವುದು, ಲೆಕ್ಕಪತ್ರವನ್ನು ನೋಡಿ ಕೊಳ್ಳುವುದು, ಕೊಡುವುದು, ತೆಗೆದುಕೊಳ್ಳುವುದು, ಖರೀದಿ–ವಿಕ್ರಯ ಮಾಡುವುದು ಈ ಮೊದಲಾದ ಗುಣಧರ್ಮಗಳ ಪೂರಕ ಗ್ರಹವಾದ ಬುಧನೇ ಕಾರಕಗ್ರಹವೆಂದು ಹೇಳಬಹುದು.

**ಕಾರಕ ಸ್ಥಾನ :** ಈ ತರಹದ ಹುದ್ದೆಗಳಿಗೆ ಕಾರಕಸ್ಥಾನವೆಂದರೆ ಪಂಚಮ ಸ್ಥಾನವಾಗುವುದು. ಏಕೆಂದರೆ ಪಂಚಮ ಸ್ಥಾನಕ್ಕೆ ಸ್ಟೋರೇಜ್ (Storage) ಎನ್ನುವರು. ಆದುದರಿಂದ ಸಂಗ್ರಹಕಾರಕನಾದ ಪಂಚಮೇಶನು ಬಲಾಢ್ಯನಿರಬೇಕು.

ಲೆಕ್ಕಪತ್ರವನ್ನು ಸರಿಯಾಗಿ ಇಡುವುದು ಅಂದರೆ ಅಚ್ಚುಕಟ್ಟಾಗಿಯೂ ಓರಣವಾಗಿಯೂ, ಸುವ್ಯವಸ್ಥಿತವಾಗಿಯೂ (Keeping Accounts up to-date) ಇಡಲು ಕಾರಕಸ್ಥಾನವಾದ ತೃತೀಯಸ್ಥಾನವೂ ತೃತೀಯಾ ಧೀಶನೂ ಬಲಾಢ್ಯವಿರಬೇಕು.

ಲಾಭಸ್ಥಾನವೂ ಕೂಡ ಕೆಲಮಟ್ಟಿಗೆ ಸಂಗ್ರಹಕಾರಕವಾಗುವುದರಿಂ ಲಾಭೇಶನೂ ಬಲಾಢ್ಯನಿರಬೇಕು.

**ಕಾರಕ ಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ ಮಕರ, ಮೀನ, ಕುಂಭ, ತುಲಾ, ಕರ್ಕ ಈ ಲಗ್ನದವರೇ ಹೆಚ್ಚಾಗಿರುವುದ ಕಂಡುಬರುತ್ತದೆ.

ರಾಶಿ : ರಾಶಿ ದೃಷ್ಟಿಯಿಂದ ನೋಡಿದರೆ ಮಿಥುನ, ತುಲಾ, ಕುಂಭ, ಮಕರ, ಕರ್ಕ, ವೃಶ್ಚಿಕ ಈ ರಾಶಿಯ ಜನರು ದಕ್ಷಾತಾನುಕ್ರಮವಾಗಿ ಯಶಶ್ವೀ ರೀತಿಯಿಂದ ಈ ಹುದ್ದೆಯನ್ನು ನಿರ್ವಹಿಸುವರು.

ಯೋಗ: (i) ಇವರ ಜಾತಕದಲ್ಲಿ ಅಷ್ಟಮೇಶನೂ ಹಾಗೂ ಅಷ್ಟಮ ಸ್ಥಾನ ಶುಭ ಹಾಗು ಬಲಾಢ್ಯವಿರುತ್ತವೆ.

(ii) ಬುಧ ಹಾಗೂ ಅಷ್ಟಮೇಶನ ಶುಭ ಸಂಬಂಧ ವಿರುತ್ತದೆ.

(iii) ಪಂಚಮೇಶ ಹಾಗೂ ತೃತೀಯೇಶರ ಶುಭಯೋಗ ವಿರುತ್ತದೆ.

(iv) ಪಂಚಮೇಶ, ತೃತಿಯೇಶ, ಅಷ್ಟಮೇಶ ಹಾಗೂ ಬುಧ ಇವರ ಶುಭಯೋಗವೂ ಇರುತ್ತದೆ.

(v) ಪಂಚಮಸ್ಥಾನ, ಅಷ್ಟಮಸ್ಥಾನ, ತೃತೀಯಸ್ಥಾನ ಈ ಸ್ಥಾನದಲ್ಲಿರುವ ಗ್ರಹಗಳ ಶುಭಯೋಗವು ಬುಧ ನೊಂದಿಗೆ ಇರುತ್ತದೆ.

ಈ ಸ್ಟೋರ್ಸ ವಿಭಾಗದ ಸಿಬ್ಬಂದಿಯ ನೌಕರದಾರರು ಕೆಲಸ ಮಾಡಲು ಮುಖ್ಯವಾಗಿ ಎರಡು ಅಂಶಗಳನ್ನು ಗಮನಿಸತಕ್ಕದ್ದು.

(i) ಖಾತೆಯ ಕಾರಕ ಗ್ರಹ.

(ii) ವಿವಿಧ ಖಾತೆಯ ಬಳಕೆಗೆ ಬೇಕಾಗುವ ಸರಕುಗಳು.

ಏಕೆಂದರೆ ಭಿನ್ನ ಭಿನ್ನ ಖಾತೆಯಲ್ಲಿ ಕೆಲಸ ಮಾಡಲು ಹುದ್ದೆಯ ಕಾರಕ ಗ್ರಹದೊಂದಿಗೆ ಖಾತೆಯ ಕಾರಕ ಗ್ರಹವನ್ನು ಪರಶೀಲಿಸಬೇಕು. ಉದಾಹರಣೆಗಾಗಿ : ಸಾರ್ವಜನಿಕ, ರೈಲ್ವೆ, ಕಾರಖಾನೆ ಈ ಖಾತೆಗಳಲ್ಲಿ ಕೆಲಸ ಮಾಡುವ ನೌಕರದಾರನಿಗೆ ಹುದ್ದೆಯ ಕಾರಕ ಗ್ರಹವಾದ ಬುಧನೊಂದಿಗೆ ಖಾತೆಯ ಕಾರಕ ಗ್ರಹನಾದ ಶನಿಯನ್ನೂ ಪರಶೀಲಿಸಬೇಕು. ಇದರಂತೆಯೆ

ಟಂಕಶಾಲೆಯಲ್ಲಿ ಕೆಲಸಮಾಡುವ ನೌಕರನಿಗೆ ಹುದ್ದೆಯ ಕಾರಕ ಗ್ರಹವಾದ ಬುಧನೊಂದಿಗೆ ಟಂಕ ಶಾಲೆಯ ಕಾರಕ ಗ್ರಹವಾದ ಶುಕ್ರನ ಬಲಾಬಲವನ್ನು ನೋಡಬೇಕು.

ಎರಡನೆಯದಾಗಿ, ಸಂಗ್ರಹ ಮಾಡುವ ಇಲ್ಲವೆ ಹಂಚುವ ಕಾರ್ಯಕ್ಕಾಗಿ ಉಪಯೋಗಿಸುವ ವಿವಿಧ ವಸ್ತುಗಳು, ಸರಕುಗಳು, ಮಾಲುಮುದ್ದೆಗಳನ್ನು ಕೂಡ ಪರಿಶೀಲಿಸಬೇಕು. ಉದಾಹರಣೆಗಾಗಿ: ಆಹಾರ ಖಾತೆಯಲ್ಲಿ ಆಹಾರ ಸಂಗ್ರಹಿಸುವ ನೌಕರನಿಗೆ ಆಹಾರ ಪದಾರ್ಥಗಳ ಕಾರಕ ಗ್ರಹವಾದ ಧಾನ್ಯಕಾರಕನಾದ ಚಂದ್ರನ ಬಲಾಬಲವನ್ನು ಹುದ್ದೆಯ ಕಾರಕ ಗ್ರಹನಾದ ಬುಧನೊಂದಿಗೆ ಪರಿಶೀಲಿಸಬೇಕು. ಇದರಂತೆಯೇ ಮಿಲಿಟರಿಯಲ್ಲಿ ಉಪಯೋಗಿಸುವ ಮಿಲಿಟರಿ ವಸ್ತುಗಳ ಕಾರಕ ಗ್ರಹವಾದ ಮಂಗಳನ ಬಲಾಬಲವನ್ನು ಬುಧನೊಡಿಗೆ ಮಿಲಿಟರಿ ಖಾತೆಯಲ್ಲಿರುವ ಸ್ಟೋರ್ಸ್ ವಿಭಾಗದ ಸಿಬ್ಬಂದಿ ನೌಕರದಾರನ ಬಗ್ಗೆ ಪರಿಶೀಲಿಸಲೇಬೇಕಾಗುತ್ತದೆ.

### ೩) ವೈಜ್ಞಾನಿಕ ವಿಭಾಗದ ನೌಕರರ ವರ್ಗ ಹಾಗೂ ವೈಜ್ಞಾನಿಕ ಔದ್ಯೋಗಿಕ ಸಂಶೋಧನ ಮಂಡಳ.

### Scientific Staffs and Council of Scientific-Industrial Research.

ವಿಜ್ಞಾನದ ಬೆಳವಣಿಗೆಗೆ ಕೊನೆಯೆಂಬುದೇ ಇಲ್ಲವೆಂದು ಹೇಳಬಹುದು. ಅದರಲ್ಲಿ ಎಷ್ಟೊಂದು ವಿಧವಾಗಿ ಹೊಸಹೊಸ ಸಂಶೋಧನೆಗಳನ್ನು ಕಂಡು ಹಿಡಿದರೂ ವಿಜ್ಞಾನ ಅಪಾರವಾಗಿದೆ. ಅದರ ಜ್ಞಾನಕ್ಕೆ ಮಿತಿಯಿಲ್ಲ ಎಂಬ ಕಲ್ಪನೆ ಇಂದಿನ ಅಣು ಯುಗದಲ್ಲಿ ಹಿರಿಯ ಶಾಸ್ತ್ರಜ್ಞರಿಗೂ ಇದೆ. ಎಂದ ಮೇಲೆ ಪರದೇಶದಲ್ಲಿ ಇಷ್ಟೊಂದು ಪ್ರಗತಿದಾಯಕವಾಗಿ ಬೆಳೆಯುತ್ತಾ ನಡೆದ "ಸಂಶೋಧನೆ"ಗೆ ಭಾರತದಲ್ಲಿ ಸ್ವಾತಂತ್ರ್ಯ ಪ್ರಾಪ್ತಿಯ ನಂತರವೇ ಮಹತ್ವ ಬಂದಿದೆ ಎನ್ನಬಹುದು. ಅಷ್ಟೇ ಏಕೆ, ಅಗಾಧ ಜ್ಞಾನವಿದ್ದ ಭಾರತೀಯ ಶಾಸ್ತ್ರಜ್ಞರು ಭಾರತದಲ್ಲಿಯ ಕೆಳ ದರ್ಜೆಯ ಅನುಕೂಲತೆಗೆ ಬೇಜಾರ

ಪಟ್ಟು ಪರದೇಶದಲ್ಲಿಯೇ ನೆಲೆಸುತ್ತಿರುವ ಅಂಶಕ್ಕೂ ನಾವು ಗಮನ ಕೊಡಬೇಕು. ನಮ್ಮ ಅನೇಕ ಮಿತ್ರರು ಉಚ್ಚ ಶಿಕ್ಷಣಕ್ಕಾಗಿ ಪರದೇಶಕ್ಕೆ ಹೋಗಿ ಶಿಕ್ಷಣವನ್ನು ಮುಗಿಸಿದ ನಂತರ ಅಲ್ಲಿಯೇ ಇರೋಣವೇ ಹೇಗೆಂದು (To settle at abroad only) ನಮ್ಮನ್ನು ಕೇಳುತ್ತಿದ್ದಾರೆ. ಎಲ್ಲ ಭಾರಿ ತಾಂತ್ರಿಕ ಅಥವಾ ವೈಜ್ಞಾನಿಕ ಸಲಕರಣೆಗಾಗಿ ಪರದೇಶಕ್ಕೆ ಮೊರೆ ಹೋಗಬೇಕಾಗಿ ಬಂದ ಭಾರತದ ಸ್ಥಿತಿ ನಿಜವಾಗಿಯೂ ಇತರ ಉನ್ನತ ಪ್ರಗತಿದಾಯಕ ಜಗತ್ತಿನಲ್ಲಿಯ ದೇಶಗಳನ್ನು ಕಂಡಾಗ ಹೊಳೆಯುತ್ತದೆ. ಈ ವಿಭಾಗದಲ್ಲಿ ಅದರಲ್ಲಿಯೂ ಸದ್ಯದ ಯುಗದಲ್ಲಿಯೇ ಮಹತ್ವವೆನಿಸಿದ ಈ ಸಂಶೋಧನದಲ್ಲಿ ನಾವು ಇತರರಿಗಿಂತ ಎಷ್ಟೊಂದು ಹಿಂದೆ ಎಂಬ ಕಲ್ಪನೆ ಬಂದು ಕಣ್ಣು ಬಿಡುವ ಪ್ರಸಂಗ ನಿಜವಾಗಿಯೂ ದುಃಖದಾಯಕವಾದುದು.

ಈ ಹಿನ್ನೆಲೆಯಲ್ಲಿ ಸರಕಾರವು ಸಾಕಷ್ಟು ಪ್ರಯತ್ನಿಸಿ ಅದಕ್ಕಾಗಿಯೇ ಶಾಸ್ತ್ರೀಯ ಹಾಗೂ ಔದ್ಯೋಗಿಕ ಶೋಧನದ ಮಂಡಲವೆಂದು (Couocil of Scientific and Industrial Research) ಪ್ರತ್ಯೇಕ ಖಾತೆಯನ್ನು ನಿರ್ಮಿಸಿ ಭಾರತದ ವಿವಿಧ ಭಾಗಗಳಲ್ಲಿ ಪ್ರಯೋಗಾತ್ಮಕ ಶಾಲೆಗಳನ್ನು ತೆರೆದು ಅಲ್ಲಿ ಉಚ್ಚ ಶಾಸ್ತ್ರಜ್ಞರ ವಿಜ್ಞಾನಕ್ಕೆ ಅನುಕೂಲದಾಡಿಕೊಟ್ಟಿರುವುದು ಶ್ಲಾಘನೀಯವಾಗಿದೆ. ಇಲ್ಲವೆ ಉಚ್ಚ ಶಾಸ್ತ್ರಜ್ಞರನ್ನು ಸಂಶೋಧನೆಗಾಗಿಯೇ ಸೈನ್ಯಖಾತೆ, ಆಹಾರ, ಕೃಷಿ, ಹವಾಮಾನ, ಅಣುಶಕ್ತಿ ಈ ಮೊದಲಾದ ವಿವಿಧ ಖಾತೆಗಳಲ್ಲಿ ವಿವಿಧ ರಂಗಗಳಲ್ಲಿ ಸೇರಿಸಿಕೊಂಡು ಅವರ ಜ್ಞಾನದ ಉಪಯೋಗವನ್ನು ಪಡೆಯಲಾಗುತ್ತದೆ. ಇದು ನಿಜವಾಗಿಯೂ ಪ್ರಗತಿ-ದಾಯಕ ಚಿಹ್ನವೆಂದು ಹೇಳಬಹುದು,

ಮುಖ್ಯವಾಗಿ ಎಲ್ಲತರಹದ ವಿಷಯಗಳ ಮೇಲೆ ರಕ್ತ, ಕೃಷಿ ಉತ್ಪಾದಿತ ಬೆಳೆ, ಆಹಾರ, ಔಷಧ, ಖನಿಜ, ವಿವಿಧ ಧಾತುಗಳು ಹಾಗೂ ರಸಾಯನಗಳು ಮೊದಲಾದ ವಿವಿಧ ತರಹದ ಪ್ರಯೋಗಗಳು ನಡೆದು ಸಂಶೋಧನೆ ನಡೆಸಿ ಹೊಸ ಅಂಶವನ್ನು ಕಂಡುಹಿಡಿದು ಅದರ ಲಾಭ,ಹಾನಿ, ಉಪಯೋಗ ಮೊದ ಲಾದವುಗಳ ಚರ್ಚೆ ಇದರಲ್ಲಿ ನಡೆಯುತ್ತಿದೆಯೆಂದು ಸ್ಥೂಲವಾಗಿ ಹೇಳ

ಬಹುದು. ವಿಶ್ವ ಅನಂತವಾಗಿದೆ, ಅಪಾರವಾಗಿದೆ ಎಂದ ಮೇಲೆ ಇಲ್ಲಿ ಯಾವುದರ ಮೇಲೆ ಪ್ರಯೋಗ ನಡೆಯುತ್ತದೆ, ಹೇಗೆ ನಡೆಯುತ್ತದೆ ಎಂಬುದು ಮಹತ್ವದ್ದಲ್ಲದೆ ಪ್ರಯೋಗದ ಪರಿಣಾಮಕ್ಕಾಗಿ ಶ್ರಮಿಸುತ್ತಾರೆ. ಇದರಿಂದ ಮಾನವನ ಕಲ್ಯಾಣವಾಗಬಹುದು, ನಾಶವಾಗಬಹುದು. ಇದು ಒಂದು ಗಮನಾರ್ಹ ಅಂಶವೆಂದು ತಿಳಿಯಬೇಕಾಗುತ್ತದೆ, ಏಕೆಂದರೆ ಜಗದ್ವಿಖ್ಯಾತ ವಿಜ್ಞಾನಿ ಐನ್‌ಸ್ಟಿನಿನ ಸಾಪೇಕ್ಷವಾದ ( Theory of Relativity ) ದಿಂದ ಮಾನವನ ಕುಟುಂಬಕ್ಕೆ ಕಲ್ಯಾಣವೂ ಆಗಿದೆ, ಅದರ ನಾಶಕ್ಕೂ ಭೀತಿಗೂ ಅಣುಬಾಂಬುಗಳ ಉತ್ಪಾದನೆಯೂ ಆಗಿದೆ. ಆದುದ ರಿಂದ ಯಾವ ಧಾತುವಿನ ಮೇಲೆ ಸಂಶೋಧನೆ ನಡೆಸಲ್ಪಡುತ್ತದೆ ಎಂಬುದನ್ನು ಕಂಡುಹಿಡಿದು ಮಾನವನ ಕುಟುಂಬಕ್ಕೆ ಕಲ್ಯಾಣವಾದೀತೇ ಹಾನಿಯಾದೀತೇ ಎಂಬ ಅಂಶವೂ ಕೂಡ ಜ್ಯೋತಿಷ್ಯದ ಆಧಾರದ ಮೇಲಿಂದ ಹೇಳ ಬಹುದಾಗಿದೆ.

ಸರಕಾರ ಹಾಗೂ ಜನತೆ ಈ ವಿಭಾಗಕ್ಕೆ ಏನು ಮಾಡಿದರೂ ಸರಿ. ನಾವು ಮಾತ್ರ ಜ್ಯೋತಿಷ್ಯದ ದೃಷ್ಟಿಯಿಂದ ನಮ್ಮ ಜ್ಞಾನದ ಹಾಗೂ ಅನುಭವ ದಿಂದ ಈ ಶಾಸ್ತ್ರೀಯ ವಿಭಾಗದ ಸಂಶೋಧನೆ ವಿಷಯವಾಗಿ ಜ್ಯೋತಿಷ್ಯದ ಭಾಷ್ಯ ಏನು, ಕಾರಕ ಗ್ರಹಗಳಾವವು, ಸಂಶೋಧನೆಯಲ್ಲಿ ತೊಡಗುವ ವ್ಯಕ್ತಿಯ ಜಾತಕ ಎಂತಿರಬೇಕು, ಪ್ರಯೋಗ ಶಾಲೆಯಲ್ಲಿ ಹಗಲಿರುಳು ದುಡಿಯುವ ಗ್ರಹಗಳ ಭಾವಗಳೇನು, ಸ್ಥಾನ, ರಾಶಿ, ಲಗ್ನ ಇವು ಎಂತಿರ ಬೇಕು ಇತ್ಯಾದಿ ಸ್ಥೂಲವಾಗಿ ವಿಚಾರಿಸುವಾ.

ಈ ಸಂಶೋಧನ ವಿಭಾಗದ ನೌಕರರ ಮುಖ್ಯ ಕಾರ್ಯ ಸಂಶೋಧನ ಅಂದರೆ ಹುಡುಕುವಿಕೆ. ಇದನ್ನು ನಾವು ಬರೆದ "ಶಿಕ್ಷಣ ಜ್ಯೋತಿಷ್ಯ" ಎಂಬ ಪ್ರತ್ಯೇಕವಾದ ಗ್ರಂಥದಲ್ಲಿ ಇದರ ಬಗ್ಗೆ ಕೂಲಂಕಷವಾಗಿ ವಿವರಿಸಲಾಗಿದೆ.

ಪ್ರಸ್ತುತ ಈ ಪುಸ್ತಕದಲ್ಲಿ ಉದ್ಯೋಗಕ್ಕೆ ಸಂಬಂಧಿಸಿದ ವಿಷಯ ಗಳನ್ನು ಮಾತ್ರ ಇಲ್ಲಿ ವಿವೇಚಿಸಲಾಗುವುದು. ಏಕೆಂದರೆ ಶಿಕ್ಷಣ ಯೋಗಗಳು

ಬೇರೆ, ಉದ್ಯೋಗ ಯೋಗಗಳು ಬೇರೆ, ಅಧಿಕಾರ ಯೋಗಗಳು ಬೇರೆ ಬೇರೆ ಎಂಬುದನ್ನು ವಾಚಕರು ಮರೆಯಕೂಡದು.

**ಕಾರಕ ಗ್ರಹ :** ಈ ತರಹದ ವೃತ್ತಿಗೆ ಮೂರು ಗ್ರಹಗಳು ಕಾರಕ ವಿರುತ್ತವೆ. ವಿಜ್ಞಾನಿ ಕಾರಕ ಗ್ರಹವಾದ ಮಂಗಳನೂ, ನೈಸರ್ಗಿಕ ಜ್ಞಾನದ ಅಧಿಪತಿಯಾದ ಗುರುವೂ, ಬುದ್ಧಿ ಕಾರಕನಾದ ಬುಧನೂ ಕಾರಕರಾಗುತ್ತಾರೆ.

**ಸ್ಥಾನ :** ಸಂಶೋಧನಾ ಪೂರಕಸ್ಥಾನವೆಂದರೆ ಪಂಚಮ ಸ್ಥಾನ.

**ಲಗ್ನ :** ಮಿಥುನ, ತುಲಾ, ಕುಂಭ, ಸಿಂಹ, ವೃಶ್ಚಿಕ, ವೃಷಭ ಈ ಲಗ್ನಗಳೇ ಹೆಚ್ಚಾಗಿರುವುದು ಕಂಡುಬರುವುದು.

**ರಾಶಿ :** ಈ ತರಹದ ವೃತ್ತಿಯಲ್ಲಿ ಇಂತಹ ರಾಶಿಯವರೇ ಇರಬೇಕೆಂಬ ನಿಯಮವಿಲ್ಲದಿದ್ದರೂ, ಮಿಥುನ, ತುಲಾ, ಕುಂಭ, ಕರ್ಕ, ವೃಶ್ಚಿಕ, ಮಕರ, ಮೀನ ಈ ರಾಶಿಯವರು ತೌಲನಿಕವಾಗಿ ಈ ವೃತ್ತಿಯಲ್ಲಿ ವೃದ್ಧಿಯನ್ನು ಹೊಂದುವರು.

**ಯೋಗ :** ಇವರ ಜಾತಕದಲ್ಲಿರುವ ಕೆಲವು ವಿಶಿಷ್ಟ ಯೋಗಗಳು :

(೧) ಅನೇಕ ಗ್ರಹಗಳು ವಾಯುರಾಶಿಯಲ್ಲಿರುತ್ತವೆ. ವಿಶೇಷ ವಾಗಿ ಚಂದ್ರ, ಗುರು, ಮಂಗಳ, ಬುಧ ಈ ನಾಲ್ಕು ಗ್ರಹಗಳಂತೂ ವಾಯುರಾಶಿಯಲ್ಲಿ ಇದ್ದೇ ಇರುತ್ತವೆ.

(೨) ಅನೇಕ ಗ್ರಹಗಳು ರಾಶಿಬಲದವರಿದ್ದು ಸ್ಥಾನಬಲದವರಿ ರುವುದಿಲ್ಲ.

(೩) ಗುರುವು, ಲಗ್ನ, ಪಂಚಮ, ಭಾಗ್ಯ, ಲಾಭ ಈ ಯಾವು ದಾದರೊಂದು ಸ್ಥಾನದಲ್ಲಿರುವನು.

(೪) ಗುರು, ಮಂಗಳ, ಬುಧ ಈ ಗ್ರಹಗಳಲ್ಲಿ ಯಾವುದೇ ಎರಡು ಗ್ರಹಗಳ ಇಲ್ಲವೆ ಮೂರೂ ಗ್ರಹಗಳ ಶುಭ ಸಂಬಂಧ ಇಲ್ಲವೆ ಶುಭ ಯೋಗವಿರಬೇಕು.

(ಔ) ಇವರ ಜಾತಕದಲ್ಲಿ ದ್ವಿತಿಯೇಶನಿಗಿಂತ ಪಂಚಮೇಶನೇ ಬಲಾಢ್ಯನಿರುತ್ತಾನೆ. ಭಾಗ್ಯೇಶನಿಗಿಂತ ತೃತಿಯೇಶ, ದಶಮೇಶರೇ ಬಲಾಢ್ಯನಿರುತ್ತಾರೆ.

**ಡೈರೆಕ್ಟರ್, ಡೆಪ್ಯೂಟಿ ಡೈರೆಕ್ಟರ, ಅಸಿಸ್ಟಂಟ ಡೈರೆಕ್ಟರ್ :**

ಇವರು ಒಂದೊಂದು ಪ್ರಯೋಗಶಾಲೆಯನ್ನು ಸಂಶೋಧನ ಹಾಗೂ ಆಡಳಿತ ಹೀಗೆ ಎರಡು ರೀತಿಯಲ್ಲಿ ಸರಾಗವಾಗಿ ವಹಿಸಿಕೊಂಡು ಹೋಗು ವಂತಹ ಉಚ್ಚ ಹಿರಿಯ ವಿಜ್ಞಾನಿಗಳು, ಶಾಸ್ತ್ರಜ್ಞರು (Scientist) ಆಗಿ ರುತ್ತಾರೆ ಇವರು ಯಾವುದೊಂದು ವಿಜ್ಞಾನದಲ್ಲಿ (Science) ಉನ್ನತ ಪದವಿ ಪಡೆದುಕೊಂಡವರೂ ಆಗಿರುತ್ತಾರೆ. ಹೆಚ್ಚಾಗಿ ಪರದೇಶದಲ್ಲಿ ಸಹ ಕಲಿತುಬಂದವರಿದ್ದು ಅಪಾರ ಜ್ಞಾನ, ಅನುಭವ ಪಡೆದವರಿರುವರಲ್ಲದೆ ತಮ್ಮ ಶಾಸ್ತ್ರದಲ್ಲಿ ಇವರ ಜ್ಞಾನಕ್ಕಾಗಿ ಇವರದು ಎತ್ತಿದ ಕೈ ಎಂದೇ ಹೇಳ ಬಹುದು. ಅಷ್ಟೊಂದು ಪ್ರಸಿದ್ಧಿಯನ್ನು ಪಡೆದವರೂ ಇರಬಹುದು. ಇವರು ತಮ್ಮ ಜ್ಞಾನದಿಂದ ಹೊಸ ಸಂಶೋಧನೆಯ ಮಾರ್ಗವನ್ನು ಇತರ ಅಧಿಕಾರಿಗಳಿಗೆ ತೋರಿಸಿ ಅವರಿಂದ ವಿವಿಧ ಪ್ರಯೋಗಗಳನ್ನು ಮಾಡಿಸಿ ಶೋಧವನ್ನು ನಡಸುವುದೇ ಇವರ ಮುಖ್ಯ ಹೊಣೆಗಾರಿಕೆ ಇರುತ್ತದೆ. ಇವರು ಆಡಳಿತದ ಹೊಣೆಗಾರಿಕೆಯನ್ನು (Administration) ಅಷ್ಟೇ ಹೊರಬೇಕಾಗುತ್ತದೆ. ಪ್ರಯೋಗಶಾಲೆಯಲ್ಲಿಯ ವಿವಿಧ ಸಿಬ್ಬಂದಿಯ ಆಡಳಿತೆ, ಪ್ರಯೋಗಶಾಲೆಯಲ್ಲಿಯ ಉಪಕರಣಗಳ ಮೇಲ್ವಿಚಾರಣೆ ಇತ್ಯಾದಿ ಆಡಳಿತಕ್ಕೆ ಸಂಬಂಧಿಸಿದ ಹೊಣೆ ಇವರದಾಗಿರುತ್ತದೆ.

**ಯೋಗಗಳು :**

(i) ಹಿಂದೆ ಬರೆದ ಎಲ್ಲ ಸಾಮಾನ್ಯ ನಿಯಮಗಳ ಹೊರತಾಗಿ ಇವರ ಜಾತಕಗಳಲ್ಲಿ ಆಡಳಿತ ಕಾರಕನಾದ ರವಿ-ಮಂಗಳ-ಗುರುಗಳು ಬಲಾಢ್ಯರಿದ್ದು ಸ್ಥಾನಬಲದವರೂ ಯೋಗ ಕಾರಕರೂ ಇರುತ್ತಾರೆ.

( i ) ಲಗ್ನೇಶ, ಪಂಚಮೇಶ, ಭಾಗ್ಯೇಶ ಇವರು ಬಲಾಢ್ಯರಿರುತ್ತಾರೆ.

( iii ) ಅನೇಕಗ್ರಹಗಳು— ಹೆಚ್ಚಾಗಿ ಚಂದ್ರನು ಪುರುಷ ರಾಶಿಯಲ್ಲಿರುತ್ತವೆ.

ಸೀನಿಯರ್ ಸೈಂಟಿಫಿಕ್ ಆಫೀಸರ, ಜೂನಿಯರ್ ಸೈಂಟಿಫಿಕ್ ಆಫೀಸರ :

ಇವರು ವಿವಿಧ ಶಾಸ್ತ್ರಗಳಲ್ಲಿ ಪಾರಂಗತರಿದ್ದು ಎಂ. ಎಸ್‌ಸಿ., ಪಿಎಚ್. ಡಿ., (M.Sc., Ph.D.) ಉನ್ನತ ಪದವಿಗಳನ್ನು ಪಡೆದವರೂ ತಾವು ಅಭ್ಯಾಸಿಸಿದ ಶಾಸ್ತ್ರದಲ್ಲಿ ವಿಶೇಷ ಅನುಭವ ಪಡೆದವರೂ ಇರುತ್ತಾರೆ. ಇವರ ಮುಖ್ಯ ಕೆಲಸ ಡೈರೆಕ್ಟರರ ಆದೇಶದ ಪ್ರಕಾರ ಹೊಸ ಸಂಶೋಧನೆಯನ್ನು ನಡೆಸುವುದು, ವಿವಿಧ ಪ್ರಯೋಗಗಳನ್ನು ಕೈಕೊಳ್ಳುವದು, ತಮ್ಮ ಆಧೀನದಲ್ಲಿರುವ ಸೈಂಟಿಫಿಕ್ ಅಸಿಸ್ಟಂಟರಿಂದ ಸಹಾಯ ಪಡೆದು ಹೊಸ ಸಿದ್ಧಾಂತಗಳನ್ನು ರೂಪಿಸುವುದು ಇರುವದಲ್ಲದೆ ಸಂಶೋಧನೆಯೇ ಮುಖ್ಯ ಕೆಲಸವಿರುತ್ತದೆ.

ಯೋಗಗಳು : ಹಿಂದೆ ಬರೆದ ಸಾಮಾನ್ಯ ನಿಯಮಗಳ ಹೊರತಾಗಿ ಇವರ ಜಾತಕದಲ್ಲಿ ಕೆಲವು ವಿಶಿಷ್ಟ ಯೋಗಗಳಿರುತ್ತವೆ :—

( i ) ಭಾಗ್ಯೇಶನಿಗಿಂತ ದಶಮೇಶನು ಬಲಾಢ್ಯನಿರುತ್ತಾನೆ.

( ii ) ರವಿಗಿಂತ ಗುರು, ಮಂಗಳರು ಬಲಾಢ್ಯರಿರುತ್ತಾರೆ.

( iii ) ಹೆಚ್ಚಾಗಿ ಗ್ರಹಗಳು— ವಿಶೇಷವಾಗಿ ಗುರು, ಚಂದ್ರ, ಮಂಗಳ, ಬುಧರು ವಾಯುರಾಶಿಯಲ್ಲಿರುತ್ತವೆ.

( iv ) ಪಂಚಮೇಶ, ತೃತಿಯೇಶರೂ ಬಲಾಢ್ಯರಿದ್ದು ಈರ್ವರ ಶುಭ ಯೋಗವಿರುತ್ತವೆ.

( v ) ಲಗ್ನೇಶನು ರಾಶಿಬಲದವನಿದ್ದರು ಸ್ಥಾನಬಲದವನಿರುವದಿಲ್ಲ.

### ಸೈಂಟಿಫಿಕ್ ಅಸಿಸಂಟ್ಸ್ :

ಇವರು ಎಂ. ಎಸ್.ಸಿ., ಪಿಎಚ್. ಡಿ.ಯ ವರೆಗೆ ಅಭ್ಯಾಸಿಸಿದವರೂ ಸಂಶೋಧನೆಯಲ್ಲಿ ಅನುಭವಿಕರೂ ಇರುತ್ತಾರೆ, ಅಥವಾ ಎಂ.ಎಸ್‌ಸಿ. ಆದವರನ್ನು ನೇರವಾಗಿ ಈ ಹುದ್ದೆಗಳಿಗೆ ಭರ್ತಿಮಾಡಿಕೊಳ್ಳಲಾಗುತ್ತದೆ. ಹಿರಿಯ ಅಧಿಕಾರಿಗಳ ಆದೇಶದಂತೆ, ಪ್ರಯೋಗ ನಡೆಸುವುದು, ವಿವಿಧ ಸಂಶೋಧನೆ ನಡೆಸುವುದೂ ಇವರ ಕೆಲಸವಾಗಿರುತ್ತದೆ. ಇವರ ಜಾತಕ ದಲ್ಲಿಯ ಯೋಗಗಳು ಈ ಕೆಳಗಿನಂತೆ ಇರುತ್ತವೆ.

ಹಿಂದೆ ಬರೆದ ಸಾಮಾನ್ಯ ನಿಯಮಗಳ ಹೊರತಾಗಿ ಈ ಯೋಗಗಳು ಇರುತ್ತವೆ :—

( i ) ರವಿ, ಲಗ್ನೇಶ, ಭಾಗ್ಯೇಶ ದುರ್ಬಲರಿರುತ್ತಾರೆ.

( ii ) ದಶಮೇಶನು ಬಲಿಷ್ಠನಿರುತ್ತಾನೆ.

(iii ) ಪಂಚಮೇಶನಿಗಿಂತ ತೃತೀಯೇಶನು ಬಲಾಢ್ಯನಿರುತ್ತಾನೆ.

(iv ) ಗುರುವಿಗಿಂತಲೂ ಬುಧನು ಬಲಾಢ್ಯನಿರುತ್ತಾನೆ.

( v ) ಅನೇಕ ಗ್ರಹಗಳು ಸ್ಥಾನಬಲದವರಿರದೆ ರಾಶಿಬಲದವ ರಿರುತ್ತಾರೆ.

೪) ಅಗ್ನಿಶಾಮಕ ದಳ (Fire Fighting Staff) :

ಅಗ್ನಿಶಾಮಕದಳದ ಉಪಯೋಗದ ವಿಷಯವಾಗಿ ಬರೆಯುವುದು ಅಸಮಂಜಸವೆನಿಸದು. ಈ ಖಾತೆ ಅಷ್ಟೊಂದು ಜನ ಬಳಕೆಯಲ್ಲಿ ಬಂದಿರು ವುದೇ ಇದಕ್ಕೆ ಮೂಲಕಾರಣ. ಸಣ್ಣಪಟ್ಟಣಗಳಲ್ಲಿಯು ಮುನಿಸಿಪಾಲಿಟಿ ಯಿಂದ ಹಿಡಿದು ವಿವಿಧ ಮಟ್ಟದಲ್ಲಿ ನಾವು ಈ ಸಿಬ್ಬಂದಿವರ್ಗದವರನ್ನು ಕಾಣುತ್ತಿದ್ದೇವೆ. ಇವರ ಅವಶ್ಯಕತೆ ಅಪಾರವಾಗಿದೆ. ಕೇಂದ್ರ ಸರಕಾರದ ಆಧೀನದಲ್ಲಿ ಅಗ್ನಿಶಾಮಕದಳವನ್ನು ಹೊಂದಿದ ಖಾತೆಗಳಲ್ಲಿ ಸೈನ್ಯಖಾತೆ,

ರೈಲ್ವೆ, ವಿಮಾನೋಡ್ಡಾಣ ಖಾತೆ ಇವು ಪ್ರಮುಖವಾಗಿವೆಯೆನ್ನಬಹುದು. ಮೇಲ್ನೋಟಕ್ಕೆ ಅಗ್ನಿಶಾಮಕದಳದವರ ಕೆಲಸ ಒಂದೇ ಆದರೂ ಆಯಾ ಖಾತೆಗಳಿಗೆ ಅನುಸಾರವಾಗಿ ಅವರವರ ಕೆಲಸದಲ್ಲಿ ಚಾಣಾಕ್ಷತೆ, ಭಿನ್ನತೆ ಕಂಡುಬರದೆ ಇರಲಾರದು. ಏಕೆಂದರೆ ವಿಮಾನೋಡ್ಡಾಣ ಖಾತೆ (Civil Aviatiors Dept) ಯಲ್ಲಿಯ ಅಗ್ನಿಶಾಮಕದಳದವರು ಉಚ್ಚ ಶಿಕ್ಷಣ ಪಡೆದವರೂ ವಿಶಿಷ್ಟ ಕೆಲಸದಲ್ಲಿ ಅನುಭವ ಪಡೆದವರೂ ಆಗಿದ್ದು ಉಳಿದ ಖಾತೆಯ ನೌಕರದಾರರ ವೇತನಕ್ಕಿಂತ ಇವರ ವೇತನ ಹೆಚ್ಚಾಗಿರುವುದನ್ನು ಕಾಣಬಹುದು. ವಿವಿಧ ಖಾತೆಗಳಲ್ಲಿ ಈ ಅಗ್ನಿಶಾಮಕದಳ ಸಿಬ್ಬಂದಿ ವರ್ಗದವರನ್ನು ವಿವಿಧ ಹುದ್ದೆಗಳಿಂದ ಕರೆಯಲ್ಪಡುವ ರೂಢಿಯನ್ನು ಕಾಣಬಹುದು. ಉದಾಹರಣೆಗಾಗಿ: ಸೈನ್ಯ ಖಾತೆಯಲ್ಲಿ ಡಪ್ಯುಟಿ, ಅಸಿಸ್ಟಂಟ, ಫೈರಮಾಸ್ಟರ, ಸಿವಿಲಿಯನ್ ಅಸಿಸ್ಟಂಟ ಫೈರ ಮಾಸ್ಟರ, ಸ್ಟೇಷನ್ ಆಫೀಸರ, ಅಸಿಸ್ಟಂಟ ಫೈರ ಸುಪರಿಂಟೆಂಡೆಂಟ ಎಂದು ಕರೆಯಲ್ಪಡುತ್ತಿದ್ದರೆ ರೈಲ್ವೆ ಖಾತೆಯಲ್ಲಿ ಫೈರ ಇನ್ಸಪೆಕ್ಟರ, ಫೈರ ಸ್ಟೇಷನ್ ಆಫೀಸರ, ಸಬ್‌ಇನ್ಸಪೆಕ್ಟರ, ಫೈರ ಎಕ್ಸಿಕ್ಯೂಟರ (Fire executor) ಇತ್ಯಾದಿ ನೌಕರ ವರ್ಗದವರನ್ನು ಕಾಣಬಹುದು.

ಇದರ ಹಿನ್ನೆಲೆಯಲ್ಲಿ ಸಣ್ಣ ಪಟ್ಟಣಗಳ ಅಗ್ನಿಶಾಮಕ ಕೆಲಸವನ್ನು ಮುನಿಸಿಪಾಲಿಟಿಗೂ, ದೊಡ್ಡ ಪಟ್ಟಣಗಳಲ್ಲಿ ಆಕಸ್ಮಿಕ ಅಗ್ನಿಶಾಮಕ ಕೆಲಸವನ್ನು ದೊಡ್ಡ ಮುನಿಸಿಪಾಲಿಟಿಗೂ ವಹಿಸಿರುವುದನ್ನು ಕಾಣಬಹುದು. ಈ ಅಗ್ನಿಶಾಮಕ ದಳದಲ್ಲಿ ಸೇರಲು ತರಬೇತಿ ಕೋರ್ಸನ್ನು ಪಡೆದ (Trained) ಅನುಭವಿಕರನ್ನು ಈ ದಳದಲ್ಲಿ ಸೇರಿಸಿಕೊಳ್ಳುತ್ತಾರೆ.

ಆದುದರಿಂದ ಹೊಸ ಖಾತೆಯಾದ, ಹೊಸ ಬಗೆಯ ಕೆಲಸವಿದ್ದ ಅಗ್ನಿಶಾಮಕ ಕೆಲಸವೇ ಮುಖ್ಯ ಹೊರೆಯಾದ ಈ ಅಗ್ನಿಶಾಮಕ ದಳದ ನೌಕರ ವರ್ಗದವರ ಜಾತಕ ಹೇಗಿರಬೇಕು, ಯಾವ ಗ್ರಹಗಳು ದ್ಯೋತಕವಾಗಬಲ್ಲವು, ಯಾವ ಸ್ಥಾನ ರಾಶಿ, ಲಗ್ನ ಇವೆಲ್ಲವು ಜೋತಿಷ್ಯದ ಹಿನ್ನೆಲೆಯಲ್ಲಿ ಯಾವ ಜ್ಞಾನವನ್ನು ನೀಡಬಲ್ಲವು ಎಂಬುದನ್ನು ಸ್ಥೂಲವಾಗಿ ವಿಚಾರಿಸೋಣ.

ಕಾರಕ ಗ್ರಹ : ಸಾಹಸ, ಪರಾಕ್ರಮದ ಕೆಲಸವೂ ಅಗ್ನಿಯ ಸಂಬಂಧವೂ ಇರುವದರಿಂದ ಸಾಹಸ ಪರಾಕ್ರಮದ ಗುಣಧರ್ಮವುಳ್ಳ ಅಗ್ನಿ ಕಾರಕನಾದ ಮಂಗಳನೇ ಅಗ್ನಿಶಮನ ಕಾರಕನೂ ಆಗುವುದರಿಂದ ಮಂಗಳನೇ ಈ ಹುದ್ದೆಯ ಕಾರಕನಾಗುವನು. ಮಂಗಳನ ತರುವಾಯ ಬುಧನೂ ಕೆಲವಮಟ್ಟಿಗೆ ಕಾರಕನಾಗುವನು.

ಕಾರಕ ಸ್ಥಾನ : ಸಾಹಸ, ಪರಾಕ್ರಮ ಸ್ಥಾನವಾದ ತೃತೀಯ ಸ್ಥಾನವೇ ಈ ಹುದ್ದೆಯ ಸ್ಥಾನವಿರುವದರಿಂದ ತೃತೀಯೇಶನೂ ಬಲಾಢ್ಯನಿರಬೇಕು ಮತ್ತು ತೃತೀಯೇಶ ಹಾಗೂ ಮಂಗಳನ ಶುಭಯೋಗವಿರಬೇಕು.

ಕಾರಕ ಲಗ್ನ : ಕುಂಭ, ಕನ್ಯಾ, ಈ ಲಗ್ನದವರೂ ತದನಂತರ ಮೇಷ, ಕರ್ಕ, ಸಿಂಹ, ಧನು, ವೃಶ್ಚಿಕ, ಮಕರ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

ಕಾರಕ ರಾಶಿ : ರಾಶಿ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟವಾದ ರಾಶಿಯವರೇ ಇರಬೇಕೆಂಬ ನಿಯಮವಿದೆ. ಸಾಹಸದ ಕೆಲಸವೇ ಪ್ರಾಮುಖ್ಯವಿರುವುದರಿಂದ ಸಾಮಾನ್ಯವಾಗಿ ಸಿಂಹ, ವೃಶ್ಚಿಕ, ಧನು, ಮಕರ, ಮಿಥುನ, ತುಲಾ, ಕುಂಭ ಈ ರಾಶಿಯವರೆ ಹೆಚ್ಚಾಗಿರುವುದು ಕಂಡುಬರುತ್ತದೆ.

ಯೋಗ : ಈ ಹುದ್ದೆಯ ಅಧಿಕಾರಿಗಳು ಭಿನ್ನ ಭಿನ್ನ ಖಾತೆಯಲ್ಲಿ ಕೆಲಸ ಮಾಡಬೇಕಾಗುವದರಿಂದ ಖಾತೆಯ ಕಾರಕನನ್ನೂ ವೃತ್ತಿಯ ಕಾರಕನನ್ನೂ ಪರಿಶೀಲಿಸಬೇಕು. ಉದಾ : ಸ್ಥಾನಿಕ ಸಂಸ್ಥೆಯಲ್ಲಿ ಈ ಕೆಲಸಗಾರರಿಗೆ ವೃತ್ತಿಯ ಕಾರಕನಾದ ಮಂಗಳನೊಂದಿಗೆ ಸ್ಥಾನಿಕ ಸಂಸ್ಥೆಯ ಕಾರಕನಾದ ಶನಿಯ ಬಲಾಬಲವನ್ನು ಪರಿಶೀಲಿಸಬೇಕು.

## (೫) ಅರ್ಥಶಾಸ್ತ್ರಜ್ಞರೂ ಹಾಗೂ ಅಂಕಿಸಂಖ್ಯಾತಜ್ಞರು (Economists and Statisticians)

ಅರ್ಥಶಾಸ್ತ್ರ ಹಾಗೂ ಅಂಕಿಸಂಖ್ಯೆ ಶಾಸ್ತ್ರಗಳು ಮುಂದುವರೆದ ದೇಶಗಳಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದು ಇವುಗಳಲ್ಲಿಯ ಪಾರಂಗತರಿಗೆ

ವಿಶೇಷ ಮಹತ್ವವನ್ನು ಕಲ್ಪಿಸಿಕೊಟ್ಟಿರುವದನ್ನು ನಾವು ಕಾಣಬಹುದು. ದೇಶದ ಪ್ರಗತಿಯ ಅಳತೆಗೋಲೆಂದು ಬಹಳಷ್ಟು ಸಹಾಯವನ್ನು ಈ ವಿಜ್ಞಾನಿಗಳು ( ಈ ಶಾಸ್ತ್ರಜ್ಞರು ) ತಮ್ಮ ಜ್ಞಾನವನ್ನು ನೀಡುವದರಲ್ಲಿ ಮುಂದಾಗಬಲ್ಲವು. ಯೋಜನೆ (Planning) ಎಂದು ನಾವು ಹೇಳುವುದಕ್ಕೆಲ್ಲ ಈ ಶಾಸ್ತ್ರಗಳ ಸಹಾಯ ಪಡೆಯಲೇಬೇಕಾಗುತ್ತದೆ. ಈ ಶಾಸ್ತ್ರಜ್ಞರ ಅಗಾಧ ಜ್ಞಾನದ ಉಪಯೋಗವನ್ನು ಪಡೆಯಬೇಕಾಗುತ್ತದೆ. ಹೀಗಾಗಿ ಈ ವಿಜ್ಞಾನಿಗಳಿಗೆ ವಿಶೇಷ ಸ್ಥಾನ ದೊರಕಿದೆ.

ಕೇಂದ್ರ ಸರಕಾರದಲ್ಲಿಯೂ ರಾಜ್ಯ ಸರಕಾರಗಳಲ್ಲಿಯೂ ಇತರ ಖಾಸಗಿ ರಂಗದಲ್ಲಿಯೂ ಇವರ ಸೇವೆಯು ವಿವಿಧ ಖಾತೆಗಳಲ್ಲಿ ಉಪಯೋಗಿಸಲ್ಪಡುತ್ತವೆ. ಕೇವಲ ಕೇಂದ್ರ ಸರಕಾರದಲ್ಲಿಯೇ ಈ ಅರ್ಥಶಾಸ್ತ್ರ ಹಾಗೂ ಅಂಕಿ-ಸಂಖ್ಯಾ ಶಾಸ್ತ್ರ ಅಭ್ಯಸಿಸಿ ಪದವಿಯನ್ನು ಪಡೆದವರು ಒಂದು ಸಾವಿರದ ಐದು ನೂರ ನಲವತ್ತೇಳು ಜನ ( ೧೯೫೭ ರಲ್ಲಿ ಸಿಕ್ಕ ಅಂಕಿ-ಅಂಶಗಳ ಪ್ರಕಾರ ) ಇದ್ದರೆಂದಮೇಲೆ ಇವರ ಮಹತ್ವದ ಅರಿವಾಗುವದು. ಇವರು ವಿವಿಧ ಖಾತೆಗಳಲ್ಲಿ ಅಂದರೆ ಆರ್ಥಿಕ ಖಾತೆ, ವಾಣಿಜ್ಯ ಖಾತೆ, ಆಹಾರ ಹಾಗೂ ಕೃಷಿ ಖಾತೆ, ಪ್ಲಾನಿಂಗ ಕಮೀಶನ್ ಇತ್ಯಾದಿಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಡೈರೆಕ್ಟರ, ಜಾಯಿಂಟ ಡೈರೆಕ್ಟರ, ಡೆಪ್ಯುಟಿ ಡೈರೆಕ್ಟರ, ಅಸಿಸ್ಟಂಟ ಡೈರೆಕ್ಟರಗಳೆಂದು ಉಚ್ಚ ಹುದ್ದೆಗಳ ಮೇಲೆ ಅರ್ಥಶಾಸ್ತ್ರ ಹಾಗೂ ಅಂಕಿ-ಸಂಖ್ಯಾ ಶಾಸ್ತ್ರದಲ್ಲಿ ಉಚ್ಚ ಪದವಿ ಪಡೆದು ಪಾರಂಗತರ ದವರನ್ನೂ ಈ ರಂಗದಲ್ಲಿ ವಿವಿಧ ಬಗೆಯ ಅನುಭವವನ್ನು ಪಡೆದವರನ್ನೂ ನಿಯಮಿಸುತ್ತಾರೆ. ಕಾರಣ ಇವರು ಅವಶ್ಯವಾಗಿ ಅರ್ಥಶಾಸ್ತ್ರ ಹಾಗೂ ಅಂಕಿಸಂಖ್ಯಾ ಶಾಸ್ತ್ರದ ಅಭ್ಯಾಸಿಗಳೂ ಅದರಲ್ಲಿ ಪದವೀ ಪಡೆದವರೂ ಇರಬೇಕಾಗುತ್ತದೆ. ಉಳಿದ ಶಾಸ್ತ್ರಪಾರಂಗತರಿಗೆ ಇಲ್ಲಿ ಸ್ಥಳವಿಲ್ಲ. ಆದುದರಿಂದ ಈ ವಿಶಿಷ್ಟ ಹುದ್ದೆಗಳನ್ನು ಪಡೆದ, ವಿಶಿಷ್ಟ ಸ್ಥಾನವನ್ನು ಅಲಂಕರಿಸಿದ ಇವರ ಜಾತಕಗಳು ಹೇಗಿರಬೇಕು, ಗ್ರಹಯೋಗಗಳು ಎಂತಿರಬೇಕು, ಕಾರಕ ಗ್ರಹ, ಲಗ್ನ, ಸ್ಥಾನ,

ರಾಶಿ ಮೊದಲಾದವುಗಳ ಬಗ್ಗೆ ಜ್ಯೋತಿಷ್ಯದ ಭಾಷ್ಯವೇನು ಹೇಳುವುದು ಎಂಬುದನ್ನು ನೋಡುವಾ ಈ ಅರ್ಥಶಾಸ್ತ್ರಜ್ಞರ ಹಾಗೂ ಅಂಕಿ-ಸಂಖ್ಯಾ ಶಾಸ್ತ್ರಜ್ಞರ ಜಾತಕದಲ್ಲಿ ಈ ಕೆಳಗೆ ಕಾಣಿಸಿದ ಯೋಗಗಳಿರುತ್ತವೆ. ಅರ್ಥ ಶಾಸ್ತ್ರಜ್ಞರಿಗೆ ಹಾಗೂ ಅಂಕಿ-ಸಂಖ್ಯಾ ತಜ್ಞರಿಗೆ ಬುಧ-ಮಂಗಳರು ಕಾರಕ ರಾಗುತ್ತಾರೆ. ಮಂಗಳನು ಗಣಿತ ಹಾಗೂ ಕಠಿಣ ಸಿದ್ಧಾಂತಗಳಿಗಾಗಿಯೂ, ಬುಧನು ಜಮಾಖರ್ಚು, ಬೇರಿಜು ಮುಂತಾದವುಗಳಿಗೂ ಕಾರಕರಿರುತ್ತಾರೆ. ಸ್ಥಾನ ದೃಷ್ಟಿಯಿಂದ ಪಂಚಮ ಹಾಗೂ ತೃತೀಯ ಸ್ಥಾನಗಳೂ ಕಾರಕರಿರು ವದರಿಂದ ಪಂಚಮಾಧೀಶ, ತೃತೀಯೇಶ ಈ ರ್ವರೂ ಬಲಾಢ್ಯರಿರುತ್ತಾರೆ. ಸಂಖ್ಯಾ ಶಾಸ್ತ್ರಜ್ಞರಿಗೆ ತೃತೀಯ ಸ್ಥಾನವು ಕಾರಕವಾದರೆ ಅರ್ಥಶಾಸ್ತ್ರಜ್ಞರಿಗೆ ಪಂಚಮ ಸ್ಥಾನವು ಕಾರಕವಾಗುತ್ತದೆ.

ಅರ್ಥಶಾಸ್ತ್ರಜ್ಞರಿಗೆ ವೃಷಭ, ಮಿಥುನ, ಕನ್ಯಾ, ತುಲಾ, ಮಕರ, ಕುಂಭ ಈ ಲಗ್ನಗಳು ಕಾರಕವಿದ್ದರೆ ಸಂಖ್ಯಾಶಾಸ್ತ್ರಜ್ಞರಿಗೆ ಕರ್ಕ, ಮೇಷ, ಕನ್ಯಾ, ಕುಂಭ, ಸಿಂಹ, ಧನು, ಮೀನ ಈ ಲಗ್ನಗಳು ಕಾರಕವಾಗುತ್ತವೆ.

ಈ ಎರಡೂ ಶಾಸ್ತ್ರಜ್ಞರು ಹೆಚ್ಚಾಗಿ ಮಿಥುನ, ತುಲಾ, ಕುಂಭ, ವೃಷಭ, ಕನ್ಯಾ, ಮಕರ ಈ ರಾಶಿಯವರಿರುವದೇ ಕಂಡುಬರುತ್ತದೆ. ಈ ಎರಡೂ ವಿಧದ ತಜ್ಞರ ಜಾತಕದಲ್ಲಿ ಬುಧ, ಮಂಗಳ, ತೃತೀಯೇಶ, ಪಂಚಮೇಶ ಇವರೆಲ್ಲರ ಇಲ್ಲವೆ ಯಾರೀರ್ವರ ಶುಭ ಸಂಬಂಧವಾಗಲಿ ಶುಭಯೋಗ ವಾಗಲಿ ಇರುವದು ಕಂಡುಬರುತ್ತದೆ.

(೬) ಇಂಜನಿಯರರು ಹಾಗೂ ತಾಂತ್ರಿಕ ಕೆಲಸಗಾರರು :

ಸಾಮಾನ್ಯವಾಗಿ ಪ್ರಪಂಚದಲ್ಲಿ ಕೆಳಗಿನಂತೆ ವಿವಿಧ ಇಂಜನೀಯರರನ್ನು ಕಾಣಬಹುದು.

೧. ಮೆಕ್ಯಾನಿಕಲ್ ಇಂಜನೀಯರರು

೨. ಇಲೆಕ್ಟ್ರಿಕಲ್ ಇಂಜನೀಯರರು

೩. ಸಿವಿಲ್ ಇಂಜಿನೀಯರರು

೪. ರೇಡಿಯೋ ಇಂಜಿನೀಯರರು

೫. ಆಟೊಮೋಬಾಯಿಲ್ ಇಂಜಿನೀಯರರು

೬. ಗಣಿ ಹಾಗೂ ಕಲ್ಲಿದ್ದಲಿಗಳ ಎಂಜಿನೀಯರರು

೭. ಮೆಟಲರ್ಜಿಕಲ್ ಇಂಜಿನೀಯರರು

೮. ಟೆಲಿಕಮ್ಯುನಿಕೇಶನ್ ಇಂಜಿನೀಯರರು

೯. ಕೆಮಿಕಲ್ ಇಂಜಿನೀಯರರು

೧೦. ಆರ್ಕಿಟೆಕ್ಟ ಇಂಜಿನೀಯರರು

ಈ ವಿವಿಧ ಇಂಜಿನೀಯರರ ಕಾರ್ಯಾಚಾರಣೆ, ಕಾರ್ಯವೈವಿಧ್ಯ, ಮೊದಲಾದವುಗಳನ್ನು ಪರಿಶೀಲಿಸಲಾಗಿ "ಇಂಜನೀಯರ"ರಾಗಲು ಸಾಮಾನ್ಯವಾದ ನಿಯಮಗಳು ಯಾವವು ಎಂಬುದನ್ನು ವಿವೇಚಿಸಬಹುದು.

**ಸಾಮಾನ್ಯ ನಿಯಮಗಳು :**

(೧) ಇಂಜನಿಯರಿಂಗ ಕಾರಕನಾದ ಮಂಗಳನೇ ಕಾರಕಗ್ರಹನು ಇರುವದರಿಂದ ಮಂಗಳನು ಯೋಗಕಾರಕನೂ, ಬಲಾಢ್ಯನೂ ಇರುವನು.

(೨) ಒಂದು ವಿಧವಾಗಿ ಇವರ ಕಾರ್ಯವು ಪ್ರಾಮುಖ್ಯತಃ ಶ್ರಮ-ಜೀವಿ (Manual worker) ಹಾಗೂ ಹೊರವಲಯ ಕಾರ್ಯ ನಿರ್ವಹಣೆ (Outdoor executive) ಇರುವದರಿಂದ ಶ್ರಮ ಜೀವಿ ಕಾರಕನಾದ (Outdoor) ಶನಿಯೂ, ಕಾರಕನಾದ ಮಂಗಳನೂ ಬಲಾಢ್ಯರಿರುವರು.

(೩) ಸ್ವತಃ ಕಾರ್ಯಾಚರಣೆ ಮಾಡಬೇಕಾಗುವದರಿಂದ ಚಂದ್ರನು ಹಾಗೂ ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುವವು.

(೪) ಸಾಮಾನ್ಯವಾಗಿ ಇವರ ಜಾತಕದಲ್ಲಿ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನಗಳೇ ಹೆಚ್ಚಾಗಿರುತ್ತವೆ.

೧) ಮೆಕ್ಯಾನಿಕಲ್ ಇಂಜನೀಯರರು :

ಇವರ ಜಾತಕದಲ್ಲಿ ಮೇಲಿನ ಸಾಮಾನ್ಯ ನಿಯಮಗಳ ಹೊರತಾಗಿ ಶನಿ, ಮಂಗಳರು ಬಲಾಢ್ಯರಿದ್ದು ರವಿ, ಗುರುಗಳು ದುರ್ಬಲರಿರುತ್ತಾರೆ. ಭಾಗ್ಯ ಸ್ಥಾನಕ್ಕಿಂತ ದಶಮಸ್ಥಾನವೇ ಬಲಾಢ್ಯವಿರುತ್ತದೆ. ಯಂತ್ರಸಾಮಗ್ರಿಗಳ, ವಿವಿಧ ಇಂಜಿನುಗಳ ಪ್ರಭುತ್ವವಿರುವ ಶನಿಯು ಮಂಗಳನಿಗಿಂತ ಹೆಚ್ಚು ಬಲಾಢ್ಯನಿರುವನು. ಯಾಕಂದರೆ ಮೆಕ್ಯಾನಿಕಲ್ ಇಂಜನಿಯರಿಂಗಕ್ಕೆ ಬೇಕಾಗುವ ಕಬ್ಬಿಣ ಉಕ್ಕುಗಳ ಮೇಲೆಯೂ, ಉಗಿ, ಆಯಿಲ್ ಮೊದಲಾದ ಇಂಜಿನುಗಳ ಮೇಲೆಯೂ ಶನಿಯ ಪ್ರಭುತ್ವವಿರುತ್ತವೆ.

೨) ಇಲೆಕ್ಟ್ರಿಕಲ್ ಇಂಜನೀಯರರು :

ಇವರ ಜಾತಕದಲ್ಲಿ ಶನಿಗ್ರಹಕ್ಕಿಂತ ಮಂಗಳನೇ ಹೆಚ್ಚು ಬಲಾಢ್ಯನಿರುವದರಿಂದ ಅಗ್ನಿ ಹಾಗೂ ಭೂರಾಶಿಯ ಮಂಗಳನು ಬಲಾಢ್ಯನಿರುತ್ತಾನೆ.

೩) ಸಿವಿಲ್ ಇಂಜನೀಯರರು :

ಇವರ ಜಾತಕದಲ್ಲಿ ಮೇಲಿನ ಸಾಮಾನ್ಯ ನಿಯಮಗಳ ಹೊರತಾಗಿ ಇವರ ವಿಷಯವಾಗಿ ಪ್ರತ್ಯೇಕವಾಗಿ ಸಾರ್ವಜನಿಕ ಖಾತೆ ವಿಭಾಗದಲ್ಲಿ ವಿವೇಚಿಸಿದಂತೆ ಸಿವಿಲ್ ಇಂಜನೀಯರಿಂಗಕ್ಕೆ ಕಾರಕನಾದ ಶನಿಯು ಹೊರತಾಗಿ ರವಿ, ಗುರುಗಳೂ ಬಲಾಢ್ಯರಿರುವದು ಕಂಡುಬರುತ್ತದೆ.

೪) ರೇಡಿಯೋ ಇಂಜನೀಯರರು :

ಸಾಮಾನ್ಯ ನಿಯಮಗಳ ಹೊರತಾಗಿ ಇವರ ಜಾತಕದಲ್ಲಿ ಮಂಗಳನಿಗಿಂತ ಬುಧನೇ ಹೆಚ್ಚು ಬಲಾಢ್ಯನಿದ್ದು ಪೃಥ್ವಿ ಇಲ್ಲವೆ ವಾಯುರಾಶಿಯಲ್ಲಿ

ಚಂದ್ರನಿರುವ ಜನರೇ ಹೆಚ್ಚಾಗಿ ರೇಡಿಯೋ ಇಂಜಿನೀಯರರಾಗುವರು. ಆದರೆ ಮಂಗಳನು ಮಾತ್ರ ದುರ್ಬಲನಿರಕೂಡದು.

ತೃತೀಯ ಹಾಗೂ ನವಮಾಧೀಶರು ಬಲಾಢ್ಯರಿದ್ದು ಬುಧನೊಂದಿಗೆ ಶುಭಯೋಗವನ್ನು ಮಾಡುತ್ತಿರಬೇಕು.

೫) ಆಟೋಮೋಬಾಯಿಲ್ ಇಂಜಿನೀಯರರು :

ಸಾಮಾನ್ಯ ನಿಯಮಗಳ ಹೊರತಾಗಿ ಇವರ ಜಾತಕದಲ್ಲಿ ಮಂಗಳ ಗ್ರಹಕ್ಕಿಂತ ಶನಿಯೇ ಬಲಾಢ್ಯನಿದ್ದು ಪೃಥ್ವಿರಾಶಿಯಲ್ಲಿ ಗ್ರಹಗಳೇ ಹೆಚ್ಚಾಗಿ ರುವವಲ್ಲದೆ ವಿಶೇಷವಾಗಿ ಚಂದ್ರನೂ ಪೃಥ್ವಿರಾಶಿಯಲ್ಲಿರುವನು.

ವೃಷಭ, ತುಲಾ, ವೃಶ್ಚಿಕ, ಮಕರ, ಕುಂಭ ಈ ಲಗ್ನದವರೇ ಹೆಚ್ಚಾಗಿ ರುವದು ಕಂಡುಬರುತ್ತದೆ.

೬) ಗಣಿ ಹಾಗೂ ಕಲ್ಲಿದ್ದಲಿಗಳ ಇಂಜಿನೀಯರರು :

ಸಾಮಾನ್ಯ ನಿಯಮಗಳ ಹೊರತಾಗಿ ಗಣಿ, ಎಣ್ಣೆ ಹಾಗೂ ಉರುವಲು ಕಾರಕನಾದ ಶನಿಯಲ್ಲದೇ ಚತುರ್ಥಾಧೀಶನೂ ನೈಸರ್ಗಿಕವಾಗಿ ಚತುರ್ಥೇಶ ನಾದ ಚಂದ್ರನೂ ಬಲಾಢ್ಯರಿರುವರಲ್ಲದೆ ಅನೇಕ ಗ್ರಹಗಳು ಭೂರಾಶಿ ಯಲ್ಲಿದ್ದು, ವಿಶೇಷವಾಗಿ ಚಂದ್ರನು ಭೂರಾಶಿಯಲ್ಲಿರುವನು.

೭) ಮೆಟಲರ್ಜಿಕಲ್ ಇಂಜಿನೀಯರರು :

ಇವರ ಜಾತಕವೂ ಗಣಿ ಹಾಗೂ ಕಲ್ಲಿದ್ದಲಿಗಳ ಇಂಜಿನೀಯರರಂತೆಯೇ ಇದ್ದು ಧಾತು, ಪರೀಕ್ಷಕಕಾರಕ ಪ್ರವೃತ್ತಿಯ ಬುಧನೂ ಬಲಾಢ್ಯನಿರುವನು.

೮) ಟೆಲಿಕಮ್ಯುನಿಕೇಶನ್ ಇಂಜಿನೀಯರರು :

ಇವರ ಜಾತಕವು ರೇಡಿಯೋ ಇಂಜಿನಿಯರರ ಜಾತಕದಲ್ಲಿಯ ಯೋಗ ಗಳಂತೆಯೇ ಇದ್ದು ಚಂದ್ರನು ವಾಯುರಾಶಿಯಲ್ಲಿರುವನು.

೯) ಕೆಮಿಕಲ್ ಇಂಜಿನೀಯರರು :

ಸಾಮಾನ್ಯ ನಿಯಮಗಳ ಹೊರತಾಗಿ ರಸಾಯನ ದ್ರವ್ಯಗಳ ಕಾರಕನಾದ ಶನಿಯೂ, ಕುಶಲತೆಯ ಕಾರಕನಾದ ಬುಧನೂ ಬಲಾಢ್ಯರಿರುವರಲ್ಲದೆ ಷಷ್ಠೇಶನೂ ಬಲಾಢ್ಯನಿದ್ದು ಮಂಗಳನು ಬಲಾಢ್ಯನಿರದಿದ್ದರೂ ದುರ್ಬಲನಿರುವದಿಲ್ಲ.

೧೦) ಆರ್ಕಿಟೆಕ್ಟ ಇಂಜನೀಯರರು :

ಸಾಮಾನ್ಯ ನಿಯಮಗಳ ಹೊರತಾಗಿ ಇವರ ಜಾತಕದಲ್ಲಿ ಶನಿ, ಮಂಗಳರಿಗಿಂತ ಬುಧ, ಶುಕ್ರರು ಬಲಾಢ್ಯರಿರುವರು.

ತಾಂತ್ರಿಕ ಕೆಲಸಗಾರರು :

ಈ ತಾಂತ್ರಿಕ ಕೆಲಸಗಾರರಲ್ಲಿ ಮುಖ್ಯವಾಗಿ ಮೂರು ಪ್ರಕಾರಗಳಿವೆ.

(೧) ಪ್ರಥಮವಾಗಿ ಯಂತ್ರಗಳನ್ನು ನಡೆಸುವ ವರ್ಗ.

(೨) ಎರಡನೆಯದಾಗಿ ಯಂತ್ರಗಳನ್ನು ದುರಸ್ತಿಮಾಡುವ ಮತ್ತೂ ಅದರ ವಿವಿಧ ಬಿಡಿ ಭಾಗಗಳನ್ನು ತಯಾರಿಸುವ ವರ್ಗ.

(೩) ಮೂರನೆಯದಾಗಿ ಮೇಲಿನ ಎರಡೂ ವರ್ಗಗಳಿಗೆ ಸಹಾಯ ಮಾಡುವ ಎರಡೂ ಕಲೆಗಳನ್ನು ಬಲ್ಲ ಮೂರನೆಯ ವರ್ಗ.

ಸಾಮಾನ್ಯವಾಗಿ ಈ ಮೂರೂ ವರ್ಗಗಳಲ್ಲಿ ಸಮಾವೇಶವಾದ ತಾಂತ್ರಿಕ ಕೆಲಸಗಾರರ ಜಾತಕದಲ್ಲಿಯ ಯೋಗಗಳು ಕೆಲವು ಮಟ್ಟಿಗೆ ಒಂದೇ ತರಹದವು ಆಗಿದ್ದು ಕೆಳಗಿನ ಸಾಮಾನ್ಯ ನಿಯಮಗಳಿಂದ ಕೂಡಿರುತ್ತದೆ.

ಸಾಮಾನ್ಯ ನಿಯಮಗಳು

(೧) ಮಶಿನರಿ ನಡೆಸುವದಾಗಲಿ ಮಶಿನರಿ ಪಾರ್ಟ್ಸ ತಯಾರಿಸುವದೇ ಇರಲಿ, ಜೋಡಿಸುವದೇ ಇರಲಿ ಈ ಮೂರು ವರ್ಗದವರನ್ನೂ ಶ್ರಮ

ಜೀವಿಗಳೆಂದೇ ಕರೆಯುಬಹುದು. ಆದುದರಿಂದ ಶ್ರಮಜೀವಿಕಾರಕನೂ ಕಬ್ಬಿಣ, ಉಕ್ಕು, ಎಣ್ಣೆ ಮೊದಲಾದವುಗಳ ಕಾರಕನೂ ಆದ ಶನಿಯೇ ಈ ಉದ್ಯೋಗ ಕಾರಕನಿದ್ದು ವಾಯು ಇಲ್ಲವೆ ಭೂರಾಶಿಯವನಿದ್ದು ಸ್ಥಾನಬಲ ದವನಿರದೆ ರಾಶಿ ಬಲದವನು ಮಾತ್ರ ಇರುವನು. ಉದಾಹರಣೆಗಾಗಿ : ಧನು ಇಲ್ಲವೆ ಮೀನ ಲಗ್ನದ ಜಾತಕದಲ್ಲಿ ಭೂರಾಶಿ ಇಲ್ಲವೆ ವಾಯುರಾಶಿಯ ಶನಿ ಇದ್ದರೂ ಏನು ಪ್ರಯೋಜನ ? ಆದರೆ ಇವರು ಡ್ರಾಯವ್ಹರ, ಮೆಕ್ಯಾನಿಕ್, ವೆಲ್ಡರ್ ಮೊದಲಾದ ಮೂರು ವರ್ಗದ ಕೆಲಸಗಾರರಾಗುವರು. ಆದರೆ ಅದೇ ಭೂ ಇಲ್ಲವೆ ವಾಯು ರಾಶಿಯ ಶನಿಯು ವೃಷಭ ಇಲ್ಲವೆ ತುಲಾ ಲಗ್ನ ದಲ್ಲಿದ್ದರೆ ಅವರು "ಇಂಜನೀಯರ" ಇಲ್ಲವೆ ಅಧಿಕಾರಿಗಳಾಗುವರು.

(೨) ಶನಿಯ ತರುವಾಯ ಈ ಉದ್ಯೊಗಕ್ಕೆ, ಇಂಜಿನು-ಯಂತ್ರ ನಡೆಸುವದಕ್ಕೆ, ಇಂಜಿನ ಪಾರ್ಟ ಜೋಡಿಸುವದಕ್ಕೆ ಮಂಗಳನ ಗುಣಧರ್ಮ ವಿರುದವರಿಂದ ಮಂಗಳನು ಕಾರಕನಾಗುವನು. ಆದರೆ ಆ ಮಂಗಳನು ಸ್ಥಾನ ಬಲವಿರುವವನಾಗಲಿ, ಯೋಗಕಾರಕನಾಗಲಿ ಇರದೆ ರಾಶಿಬಲದವನು ಮಾತ್ರ ಇರುವನು. ಉದಾಹರಣೆಗಾಗಿ : ಮಿಥುನ ಲಗ್ನದ ಜಾತಕನಿಗೆ ಮೇಷ, ಸಿಂಹ, ಧನು, ಮಕರ, ವೃಶ್ಚಿಕ ಈ ರಾಶಿಗಳ ಮಂಗಳನು ಇದ್ದಾನೆಂದು ತಿಳಿದರೆ ಇಂತಹ ಜನರು ಡ್ರಾಯವ್ಹರ, ಆಪರೇಟರ, ಮೆಕ್ಯಾನಿಕ್ ಆಗುವರು. ಆದರೆ ಇವೇ ರಾಶಿಗಳ ಮಂಗಳನು ಮೇಷ, ಕರ್ಕ, ಸಿಂಹ, ಧನು ಈ ಲಗ್ನಗಳ ಮೇಲೆ ಇದ್ದರೆ ಅವರು ಶ್ರೇಷ್ಠ ಇಂಜನಿಯರರು ಇಲ್ಲವೆ ಅಧಿಕಾರಿ ಗಳಾಗುವರು.

(೩) ಶನಿ, ಮಂಗಳರ ತರುವಾಯ ರಾಹು ಕೂಡಾ ಈ ಉದ್ಯೋಗಕ್ಕೆ ಕಾರಕನಾಗುವದರಿಂದ ಮಿಥುನ, ಕನ್ಯಾ, ಸಿಂಹ, ವೃಷಭ, ಮಕರ, ಮೇಷ ಈ ರಾಶಿಗಳ ರಾಹು ಷಷ್ಠ ಇಲ್ಲವೆ ತೃತೀಯ ಸ್ಥಾನದಲ್ಲಿರುವನು.

(೪) ಈ ಕೆಲಸಗಳಿಗೆ ಷಷ್ಠ ಹಾಗೂ ತೃತೀಯ ಸ್ಥಾನಗಳು ಕಾರಕ ಸ್ಥಾನಗಳಿರುವದರಿಂದ ಈ ಸ್ಥಾನಾಧೀಶರು ಬಲಾಢ್ಯರಿರಬೇಕು.

(೫) ಹೆಚ್ಚು ವಿದ್ಯಾಭ್ಯಾಸ, ವಿಶ್ವವಿದ್ಯಾಲಯದ ಶಿಕ್ಷಣಗಳಿಗೆ ಆತಂಕ ವಿರುವದರಿಂದ ಇವರ ಜಾತಕದಲ್ಲಿ ಪಂಚಮೇಶ, ದ್ವಿತೀಯೇಶ ಹಾಗೂ ಗುರು ದುರ್ಬಲರಿರುತ್ತಾರೆ.

(೬) ರಾಜಯೋಗಗಳು ಇವರ ಜಾತಕದಲ್ಲಿರುವದಿಲ್ಲ.

(೭) ಅಧಿಕಾರಿ ಕಾರಕನಾದ ರವಿಯೂ ದುರ್ಬಲನಿರುವನು.

(೮) ಶನಿ ದೃಷ್ಟಿ ಇಲ್ಲವೆ ಶನಿಯೊಂದಿಗೆ ಚಂದ್ರನಿರುವನು.

(೯) ಸ್ಥಾನಬಲದಕ್ಕಿಂತ ರಾಶಿಬಲದವರೇ ಆದ ಅನೇಕ ಗ್ರಹಗಳು ಇವರ ಜಾತಕದಲ್ಲಿರುತ್ತವೆ.

(೧೦) ಚಂದ್ರನು ಪುರುಷ ರಾಶಿಯಲ್ಲಿದ್ದು ಉಳಿದ ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿರುತ್ತವೆ.

(೧೧) ಶಿಕ್ಷಣ, ವಯಸ್ಸಿನಲ್ಲಿ ಸಾಡೇಸಾತಿ ಯೋಗ ಇಲ್ಲವೆ ಪಂಚ-ಮಾಷ್ಟಮ ಶನಿ ಇವರ ಜಾತಕದಲ್ಲಿ ಕಂಡುಬರುವವು.

(೧೨) ಭಾಗ್ಯಸ್ಥಾನ ಹಾಗೂ ಭಾಗ್ಯೇಶ ದುರ್ಬಲರಿರುತ್ತಾರೆ.

### ಪ್ರಕಾರಗಳು

(೧) ವೆಲ್ಡರ, ಟರ್ನರ, ಲೇಥಮನ್, ಗ್ರ್ಯಾಂಡರ, ಫೌಂಡ್ರಿ-ಮ್ಯಾನ್, ಟೂಲಮೇಕರ, ಡ್ರಿಲರ್, ಪ್ಯಾಟರ್ನ ಮೇಕರ, ಮೋಲ್ಡರ್, ಪ್ಲಂಬರ, ಸೀಟ-ಮೆಟಲ್‌ವರ್ಕರ್, ಕೇಬಲ್ ಜೋಯಿಂಟರ—

ಈ ಮೊದಲಾದ ಯಂತ್ರಗಳ ಭಾಗಗಳನ್ನು ತಯಾರಿಸುವವರ ಜಾತಕ ದಲ್ಲಿ ಮಂಗಳನಿಗಿಂತ ಶನಿಯೇ ಬಲಾಢ್ಯನಿರುತ್ತಾನೆ. ಮತ್ತು ಷಷ್ಠ ಹಾಗೂ ದಶಮಸ್ಥಾನಗಳೂ ಬಲಾಢ್ಯವಿದ್ದು ದಶಮೇಶನೂ ಬಲಾಢ್ಯನಿರುತ್ತಾನೆ.

(೨) ಡ್ರೈವರ, ಮಶಿನ್ ಆಪರೇಟರ, ಇಂಜನ್ ಚಾಲಕ, ಬಾಯಲರ್ ಅಟೆಂಡೆಂಟ ಈ ಮೊದಲಾದ ವ್ಯಕ್ತಿಯವರ ಜಾತಕದಲ್ಲಿ ಶನಿಗಿಂತ ಮಂಗಳನೇ ಬಲಾಢ್ಯನಿರುತ್ತಾನೆ. ಹಾಗೂ ತೃತೀಯ, ದಶಮ ಸ್ಥಾನಗಳು ಮತ್ತು ತೃತೀಯೇಶ, ದಶಮೇಶರು ಬಲಾಢ್ಯರಿರುತ್ತಾರೆ.

(೩) ಹೆಲ್ಪರ, ಫಿಟರ, ಮೆಕ್ಯಾನಿಕ್, ಫೋರಮನ್ :

ಇವರು ಯಂತ್ರಗಳ ಭಾಗಗಳನ್ನು ಉಚ್ಚುವ ಹಾಗೂ ಜೋಡಿಸುವ ವೃತ್ತಿಯುಳ್ಳವರಾದ್ದರಿಂದ ಇವರ ಜಾತಕದಲ್ಲಿ ಶನಿ ಮಂಗಳರೀರ್ವರೂ ಸ್ಥಾನಬಲದವರಿರದೆ ರಾಶಿ ಬಲದವರಿದ್ದು ಬಲಾಢ್ಯ ತೃತೀಯೇಶನೊಂದಿಗೆ ಶುಭಯೋಗಗಳನ್ನು ಮಾಡುತ್ತಾರೆ.

(೪) ಇಲೆಕ್ಟ್ರೀಸಿಯನ್, ವಾಯರಮನ್ :

ಇವರ ಜಾತಕದಲ್ಲಿಯೂ ಕೂಡ ಹಿಂದೆ ಬರೆದ ಸಾಮಾನ್ಯ ನಿಯಮಗಳ ಹೊರತಾಗಿ ತೃತಿಯೇಶನೂ ಮತ್ತು ಮಂಗಳನೂ ಬಲಾಢ್ಯರಿರುತ್ತಾರೆ.

ಇಂಜಿನಿಯರ ಹಾಗು ಇನ್ನಿತರ ಯಾವತ್ತೂ ತಾಂತ್ರಿಕ ಸಿಬ್ಬಂದಿಯ ಶಿಕ್ಷಣದ ವಿಷಯವಾಗಿ ವಿವರವಾದ ವಿವೇಚನೆಯು ನಮ್ಮ "ಶಿಕ್ಷಣ ಜ್ಯೋತಿಷ್ಯ" ಗ್ರಂಥದಲ್ಲಿದೆ.



# ೪

# ಭಿನ್ನ ಭಿನ್ನ ಖಾತೆಗಳ ಕಾರಕಗ್ರಹ, ಲಗ್ನ, ಸ್ಥಾನಾದಿಗಳು

‡‡

**ಖಾತೆಗಳಲ್ಲಿರುವ ಪ್ರಕಾರ :**

ಫಲಜ್ಯೋತಿಷ್ಯವನ್ನು ಹೇಳುವ ಫಲಜ್ಯೋತಿಷಿಗಳಿಗೆ ವ್ಯಕ್ತಿಯು ಪ್ರಶ್ನಿಸುವ ಪ್ರತಿಯೊಂದು ಪ್ರಶ್ನೆಗೂ ಪರಿಹಾರಕರವಾದ ಉತ್ತರವನ್ನು ಕೊಡಲೇಬೇಕಾಗುತ್ತದೆ. ಯಾರೊಬ್ಬ ವ್ಯಕ್ತಿಯು ತನಗೆ ಸರಕಾರಿ ನೌಕರಿಯ ಯೋಗವಿದೆಯೊ, ಖಾಸಗಿ ನೌಕರಿಯ ಯೋಗವಿದೆಯೊ ಎಂದು ಪ್ರಶ್ನಿಸಿದರೆ ಉತ್ತರ ಕೊಡುವದು ಸುಲಭವಾಗುತ್ತದೆ. ಆದರೆ ಅದೇ ವ್ಯಕ್ತಿಯು ಕೇಂದ್ರ ಸರಕಾರದ ನೌಕರಿ ಯೋಗವಿದೆಯೋ ಅಥವಾ ಪ್ರಾಂತೀಯ(ರಾಜ್ಯ) ಸರಕಾರದ ನೌಕರಿ ಯೋಗವಿದೆಯೋ ಎಂದು ಪ್ರಶ್ನಿಸಿದರೆ ಉತ್ತರ ಕೊಡುವದು ಕಠಿಣವಾಗುತ್ತದೆ. ಆದುದರಿಂದ ಈ ಎಲ್ಲ ಸಮಸ್ಯೆಗಳನ್ನು ಹೇಗೆ ಪರಿಶೀಲಿಸಬೇಕೆಂಬುದನ್ನು ಈ ಪ್ರಕರಣದಲ್ಲಿ ವಿವರಿಸಲಾಗಿದೆ.

ಸಾಮಾನ್ಯವಾಗಿ ನೌಕರಿಯಲ್ಲಿ ಮುಖ್ಯವಾಗಿ ಎರಡು ಪ್ರಕಾರಗಳಿವೆ.

i) ಸಿವಿಲ್ ಸರ್ವಿಸ್ (ii) ಮಿಲಿಟರಿ ಸರ್ವಿಸ್

**ಮಿಲಿಟರಿ ಸರ್ವಿಸ್ :** ಸಿವಿಲ್ ಸರ್ವಿಸದಲ್ಲಿ ಎಷ್ಟು ಖಾತೆಗಳಿವೆಯೋ ಅಷ್ಟೇ ಖಾತೆಗಳು ಮಿಲಿಟರಿಯಲ್ಲಿ ಕೂಡ ಇವೆ, ಈ ವಿಷಯಕ್ಕಾಗಿ ಉತ್ತರವು ಇದೇ ಪ್ರಕರಣದ ಸೈನ್ಯ ಖಾತೆಯಲ್ಲಿ ಕೊಡಲಾಗಿದೆ.

ಸಿವಿಲ್ ಸರ್ವಿಸ : ಇದರಲ್ಲಿಯೂ ಕೂಡ ಐದು ಪ್ರಕಾರಗಳಿಗೆ.

i ) ಕೇಂದ್ರ ಸರಕಾರದ ಖಾತೆಗಳು

ii ) ಪ್ರಾಂತಿಯ ಸರಕಾರದ ಖಾತೆಗಳು

iii) ಕಾರ್ಪೊರೇಶನ್ನಗಳು, ಬೋರ್ಡುಗಳು, ಕಮೀಶನ್ನಗಳು

iv) ಕಾರಖಾನೆ ಹಾಗೂ ಗಿರಣಿಗಳು

v ) ಇತರ ಖಾಸಗೀ ಕೆಲಸಗಳು.

ಫಲಜ್ಯೋತಿಷ್ಯದಲ್ಲಿ ಕೇಂದ್ರ ಸರಕಾರದ ನೌಕರಿ ಕಾರಕ ಗ್ರಹಗಳ ಯೋಗಗಳು ಬೇರೆ ಪ್ರಾಂತೀಯ ಸರಕಾರಿ ನೌಕರಿಕಾರಕ ಗ್ರಹಗಳಯೋಗ ಗಳು ಬೇರೆ ಎಂದು ವಿಂಗಡಿಸುವುದು ಸೂಕ್ಷ್ಮವೂ ಕಠಿಣವೂ ಕ್ಲಿಷ್ಟಕರವೂ ಎನಿಸುವುದು. ಆದರೆ ಸರಕಾರಿ ನೌಕರಿ ಯೋಗಗಳು ಖಾಸಗಿ ನೌಕರಿ ಯೋಗಗಳು ಬೇರೆ ಬೇರೆ ಇದ್ದು ಕಾರಕ ಗ್ರಹಗಳು ಭಿನ್ನಭಿನ್ನವಿರುವುದರಿಂದ ಇವುಗಳನ್ನು ವಿಂಗಡಿಸುವುದು ಸಾಧ್ಯವಿದೆ.

ಸರಕಾರಿ ನೌಕರಿ ಯೋಗಕಾರಕ ಗ್ರಹಗಳು : ಸರಕಾರೀ ನೌಕರಿ ಕಾರಕ ಗ್ರಹವೆಂದರೆ ರವಿಯು. ಆತ ಬಲಾಢ್ಯನಿರದ ಸರಕಾರಿ ನೌಕರಿ ದೊರೆಯ ಲಾರದು. ಅಥವಾ ರವಿಯು ಬಲಾಢ್ಯರದೆ ಸರಕಾರಿ ನೌಕರಿಯಲ್ಲಿ ಉತ್ಕರ್ಷ ವಾಗಲಿ, ಅಭ್ಯುದಯವಾಗಲಿ, ಪರಿಷ್ಠ ಅಧಿಕಾರಿಯಾಗುವ ಯೋಗವಾಗಲಿ ದೊರೆಯುವದಿಲ್ಲ. ರವಿಯ ತರುವಾಯ ಗುರು, ಮಂಗಳರು ಸರಕಾರಿ ನೌಕರಿ ಕಾರಕರಿರುತ್ತಾರೆ.

ಸರಕಾರಿ ನೌಕರಿ ಯೋಗಗಳಂ :

(೧) ಭಿನ್ನ ಭಿನ್ನ ಲಗ್ನಗಳಿಗೆ ಭಿನ್ನ ಭಿನ್ನ ಗ್ರಹಗಳು ಯೋಗ ಕಾರಕ ವಿರುತ್ತವೆ. ಈ ಯೋಗಕಾರಕ ಗ್ರಹಗಳು ಬಲಾಢ್ಯವಿದ್ದರೆ ಸರಕಾರಿ ನೌಕರಿ ಯೋಗವೆಂದು ತಿಳಿಯಬೇಕು. ಉದಾಹರಣೆಗಾಗಿ : ವೃಷಭ ಲಗ್ನ ವನ್ನೇ ತೆಗೆದುಕೊಳ್ಳಿರಿ. ಈ ಲಗ್ನಕ್ಕೆ ಶನಿ, ಶುಕ್ರ, ರವಿ, ಬುಧ ಈ ನಾಲ್ಕು

ಗ್ರಹಗಳು ಯೋಗಕಾರಕ ಗ್ರಹಗಳಿದ್ದಾಗ್ಯೂ ಕೂಡ ಸರಕಾರಿ ನೌಕರಿ ಕಾರಕ ಗ್ರಹವಾದ ರವಿಯು ಬಲಾಢ್ಯನಿರದೆ ಸರಕಾರಿ ನೌಕರಿ ದೊರೆಯಲಾರದು. ಬುಧ, ಶುಕ್ರರು ಯೋಗಕಾರಕ ಗ್ರಹಗಳು. ಶನಿಯೂ ರಾಜಯೋಗ ಕಾರಕ ಗ್ರಹವು. ಆದರೆ ಈ ಗ್ರಹಗಳು ಎಷ್ಟೇ ಬಲಾಢ್ಯವಿದ್ದು ರವಿಯು ದುರ್ಬಲ ನಿದ್ದರೆ ಸರಕಾರಿ ನೌಕರಿ ದೊರೆಯುವುದು ಕಠಿಣವಾಗುತ್ತದೆ. ಈ ಯೋಗ ಕಾರಕ ಗ್ರಹಗಳು ಬಲಾಢ್ಯರಿದ್ದು ರವಿಯೊಂದಿಗೆ ಶುಭ ಸಂಬಂಧವಿದ್ದರೆ ಸರಕಾರಿ ನೌಕರಿ ದೊರೆಯಲು ಸುಲಭವಾಗುತ್ತದೆ.

(೨) ಸರಕಾರಿ ನೌಕರಿಯಲ್ಲಿ ಹೆಚ್ಚಾಗಿ ಮೇಷ, ಸಿಂಹ, ಧನು, ವೃಶ್ಚಿಕ ಈ ಲಗ್ನದವರೂ ತದನಂತರ ಮಿಥುನ. ಕರ್ಕ, ಮೀನ ಈ ಲಗ್ನದ ವರೂ ಸರಕಾರಿ ನೌಕರದಾರರಿರುವುದು ಕಂಡುಬರುತ್ತದೆ.

(೩) ಸರಕಾರಿ ನೌಕರದಾರರಲ್ಲಿ ಜಲರಾಶಿಯವರು ಇಲ್ಲವೆ ಅಗ್ನಿ ರಾಶಿಯವರು ಇವರೇ ಹೆಚ್ಚಾಗಿರುವುದು ಕಂಡುಬರುತ್ತದೆ.

(೪) ಸರಕಾರಿ ನೌಕರದಾರರಲ್ಲಿ ಪಂಚಮ, ಲಗ್ನ, ಭಾಗ್ಯ ಈ ಸ್ಥಾನ ಗಳೂ ಹಾಗೂ ಈ ಸ್ಥಾನಾಧೀಶರೂ ಬಲಾಢ್ಯರಿರುವುದು ಕಂಡುಬರುತ್ತದೆ.

(೫) ಸರಕಾರಿ ನೌಕರದಾರರಲ್ಲಿ ದಶಮ ಸ್ಥಾನಕ್ಕಿಂತ ಭಾಗ್ಯಸ್ಥಾನವೇ ಹೆಚ್ಚು ಬಲಾಢ್ಯವಿರುತ್ತದೆ.

**೩) ಕಾರ್ಪೊರೇಶನ್, ಬೋರ್ಡ್, ಕಮೀಶನ್ಸ ನೌಕರಿ ಕಾರಕ ಗ್ರಹಗಳು :**

ನೌಕರಿ ಕಾರಕ ಗ್ರಹವೆಂದರೆ ಬುಧ. ಈ ತರಹದ ಬುಧನು ಬಲಾಢ್ಯ ನಿರದೆ ಕಾರ್ಪೊರೇಶನ, ಬೋರ್ಡ್, ಕಮೀಶನ್ಸ ಈ ಪ್ರಕಾರದ ನೌಕರಿ ದೊರೆಯುವುದು ಕಠಿಣ.

(೧) ಬುಧನ ತರುವಾಯ ಶುಕ್ರ, ಚಂದ್ರರು ಈ ಖಾತೆಗಳ ನೌಕರಿ ಕಾರಕ ಗ್ರಹಗಳಿರುತ್ತಾರೆ. ಉದಾಹರಣೆಗೆ : ಮಕರ ಲಗ್ನವನ್ನೇ ತೆಗೆದು

ಕೊಳ್ಳಿರಿ. ಈ ಲಗ್ನಕ್ಕೆ ಶನಿ, ಬುಧ, ಶುಕ್ರ, ಮಂಗಳ ಈ ಗ್ರಹಗಳೇನೋ ಯೋಗಕಾರಕ ಗ್ರಹಗಳಿದ್ದರೂ ಕೂಡ ಬುಧನೇ ಈ ಖಾತೆಗಳ ನೌಕರಿ ಕಾರಕ ಗ್ರಹವೂ ಶುಕ್ರನು ರಾಜಯೋಗ ಕಾರಕ ಗ್ರಹವೂ ಶನಿ ಮಂಗಳರು ಕೇವಲ ಯೋಗಕಾರಕ ಗ್ರಹಗಳಿದ್ದು ಬುಧನು ಬಲಾಢ್ಯನಿದ್ದು ಈ ಗ್ರಹಗಳ ಶುಭಸಂಬಧವಿದ್ದ ಜಾತಕನಿಗೆ ಕಾರ್ಪೊರೇಶನ್, ಬೋರ್ಡ ಕಮೀಶನ್ಸ ಮೊದಲಾದ ನೌಕರಿಗಳಲ್ಲಿ ಬಡತಿ ದೊರೆಯುವುದು.

(೧) ಕಾರ್ಪೋರೇಶನ್ ನೌಕರರಲ್ಲಿ ಧನು, ಕನ್ಯಾ, ವೃಷಭ, ಮಕರ, ಮಿಥುನ, ಮೀನ, ಕುಂಭ ಈ ಲಗ್ನದವರೇ ಹೆಚ್ಚಾಗಿ ಕಂಡುಬರುತ್ತಾರೆ.

(೩) ತೃತೀಯ ಹಾಗೂ ದಶಮ ಸ್ಥಾನಗಳು ಮತ್ತು ಈ ಸ್ಥಾನಾಧೀಶರು ಬಲಾಢ್ಯರಿರುವುದು ಕಂಡುಬರುತ್ತದೆ.

(೪) ವೃಷಭ, ಕನ್ಯಾ, ಮಕರ, ತುಲಾ, ಕುಂಭ ಈ ರಾಶಿಯವರೇ ಹೆಚ್ಚಾಗಿರುವುದು ಕಂಡುಬರುತ್ತದೆ.

೪) ಕಾರಖಾನೆ ಹಾಗೂ ಗಿರಣಿ ಕೆಲಸಗಾರರು :

ಕೇಂದ್ರ ಸರಕಾರದ ಸಹಾಯದಿಂದಿರಲಿ, ಪ್ರಾಂತೀಯ ಸರಕಾರದ ಸಹಾಯದಿಂದಿರಲಿ, ವಿದೇಶೀಯರ ನೆರವಿನಿಂದಿರಲಿ, ನಿಯಮಿತ (limited) ಹಾಗೂ ಖಾಸಗಿ ಕಾರಖಾನೆ, ಗಿರಣಿಗಳೇ ಇರಲಿ ಯಾವುದೇ ಕಾರಖಾನೆ, ಗಿರಣಿ ಕಾರಕ ಗ್ರಹವೆಂದರೆ ಶನಿಯು. ಶನಿಯು ಬಲಾಢ್ಯನಿರದೆ ಯಾರೂ ಈ ನೌಕರಿಯಲ್ಲಿ ಉತ್ಕರ್ಷಹೊಂದಲಾರರು.

(೧) ಶನಿಯ ತರುವಾಯ ಮಂಗಳ, ರಾಹು, ಬುಧರು ಕೂಡ ಈ ತರಹದ ನೌಕರಿ ಕಾರಕರಿರುತ್ತಾರೆ. ಉದಾಹರಣೆಗಾಗಿ: ಕುಂಭ ಲಗ್ನವನ್ನೇ ತೆಗೆದುಕೊಳ್ಳಿರಿ. ಈ ಲಗ್ನಕ್ಕೆ ಶನಿಯು ರಾಜಯೋಗ ಕಾರಕನೂ ಕಾರಖಾನೆ, ಗಿರಣಿ ಕಾರಕನೂ ಇದ್ದು ಮಂಗಳ, ಚಂದ್ರ, ಶುಕ್ರರು ಯೋಗಕಾರಕರಿರು

ತ್ತಾರೆ. ಈ ಯೋಗಕಾರಕ ಗ್ರಹಗಳೊಂದಿಗೆ ಕಾರಖಾನೆ ಕಾರಕ ಗ್ರಹಗಳ ಶುಭ ಸಂಬಂಧವಿದ್ದರೆ ಅಥವಾ ಬಲಿಷ್ಠರಿದ್ದರೆ ಜಾತಕನು ಉತ್ಕರ್ಷ ಹೊಂದುವನು.

(೨) ವೃಷಭ, ತುಲಾ, ಮಕರ, ಕುಂಭ, ವೃಶ್ಚಿಕ, ಕನ್ಯಾ, ಮೇಷ ಈ ಲಗ್ನದವರೇ ಈ ಉದ್ಯೋಗದಲ್ಲಿರುವುದು ಕಂಡುಬರುತ್ತದೆ.

(೩) ಇವರ ಜಾತಕದಲ್ಲಿ ಷಷ್ಠ, ಚತುರ್ಥ, ದಶಮ ಈ ಸ್ಥಾನಗಳೂ ಈ ಸ್ಥಾನಾಧೀಶರೂ ಹೆಚ್ಚಾಗಿ ಬಲಾಢ್ಯರಿರುವುದು ಕಂಡುಬರುತ್ತದೆ.

ಖಾಸಗಿ ನೌಕರಿ ಕಾರಕಯೋಗಗಳು :

(೧) ಖಾಸಗಿ ನೌಕರರಿಗೆ ಇಂತಹದೇ ಗ್ರಹ ಕಾರಕವಿರುತ್ತದೆ ಎಂಬ ನಿಯಮವಿರುವುದಿಲ್ಲ. ಇವರ ಜಾತಕಗಳಲ್ಲಿ ರಾಜಯೋಗಗಳು, ರಾಜಯೋಗ ಕಾರಕಗ್ರಹಗಳು ಯೋಗಕಾರಕ ಗ್ರಹಗಳು ದುರ್ಬಲವಿರುತ್ತವೆ. ಅನೇಕ ಗ್ರಹಗಳು ವಿಶೇಷವಾಗಿ ಚಂದ್ರನು ಹೆಚ್ಚಾಗಿ ಸ್ತ್ರೀರಾಶಿಯಲ್ಲಿರುತ್ತಾನೆ.

(೨) ಬುಧ-ಶನಿಯರು ರಾಶಿಬಲದವರಿದ್ದು ಸ್ಥಾನಬಲದವರಿರುವುದಿಲ್ಲ.

(೩ ರವಿ, ಮಂಗಳ, ಗುರುಗಳು ದುರ್ಬಲರಿರುತ್ತಾರೆ.

(೪) ಅನೇಕ ಗ್ರಹಗಳು ಅಸ್ತ, ವಕ್ರ, ಶತ್ರುಕ್ಷೇತ್ರ, ಶತ್ರುಮಧ್ಯ, ನೀಚ, ವೃದ್ಧಾಪ್ಯದಲ್ಲಿ, ಬಾಲಾವಸ್ಥೆಯಲ್ಲಿ ಇರುವವು.

(೫) ಹೆಚ್ಚಾಗಿ ವೃಷಭ, ಕನ್ಯಾ, ತುಲಾ, ಮಕರ, ಕುಂಭ ಈ ಲಗ್ನದವರೇ ಇರುತ್ತಾರೆ.

(೬) ಗ್ರಹಗಳು ರಾಶಿಬಲದವರಿದ್ದು ಸ್ಥಾನಬಲದವರಿರುವುದಿಲ್ಲ. ಅಥವಾ ಯೋಗಕಾರಕ ಗ್ರಹಗಳು ದುರ್ಬಲವಿರುತ್ತವೆ. ಅಥವಾ ಯೋಗ

ಕಾರಕ ಗ್ರಹಗಳು ರಾಶಿಬಲದವಿದ್ದು ಷಷ್ಠ, ಅಷ್ಟಮ, ದ್ವಾದಶ, ತೃತೀಯ ಈ ಸ್ಥಾನಗಳಲ್ಲಿರುತ್ತವೆ. ಇದಕ್ಕಾಗಿ ಈ ಉದಾಹರಣೆಗಳನ್ನು ನೋಡಿರಿ.

ವೃಭಷ ಲಗ್ನದ ಜಾತಕವಿದ್ದು ವ್ಯಯಸ್ಥಾನದಲ್ಲಿ ರವಿ, ಶನಿ ಗ್ರಹಗಳೂ ತೃತೀಯದಲ್ಲಿ ಕರ್ಕ ರಾಶಿಯ ಗುರುವೂ, ಲಾಭದಲ್ಲಿ ಮೀನದ ಶುಕ್ರನೂ ಇದ್ದಾರೆಂದು ತಿಳಿಯಿರಿ. ಇಲ್ಲಿ ರವಿ, ಗುರು, ಶುಕ್ರರು ಉಚ್ಚರಿದ್ದಾಗ್ಯೂ ಕೂಡ ಯೋಗಕಾರಕ ಗ್ರಹವಾದ ಶನಿಯು ವ್ಯಯದಲ್ಲಿಯೂ ಶತ್ರು ಕ್ಷೇತ್ರ ದಲ್ಲಿಯೂ ನೀಚನಾಗಿ ಬಲಾಢ್ಯ ಶತ್ರುವಿನೊಂದಿಗೂ ಇರುವುದರಿಂದ ಜಾತಕನು ನಿರ್ಧನನಾಗುವನು.

## ೧. ಆಕಾಶವಾಣಿ ಖಾತೆ

ಎ. ಆಯ್. ಆರ್. ಈ ಖಾತೆ ಇತ್ತೀಚಿನದು. ಅಂತೆಯೇ ನಮ್ಮ ಪೂರ್ವಜರು ೯ ಖಾತೆಯ ಮೇಲೆ ಬರೆದುದು ಕಂಡುಬರುವದಿಲ್ಲ.

ಸಂಗೀತಗಾರರು ಹಾಗೂ ಸಾಹಿತಿಗಳು ಮೊದಲಾದ ಕಲಾಕಾರರಿಗೆ ಆಶ್ರಯವನ್ನು ಕೊಡುವ ಸಂಸ್ಥೆಯೆಂದರೆ ಈ ಖಾತೆ ಎಂದು ಹೇಳಬಹು ದಾಗಿದೆ. ಹಿಂದೆ ರಾಜಮಹಾರಾಜರನ್ನೂ ಸಂಸ್ಥಾನಿಕರನ್ನೂ ಮೊರೆ ಹೊಗುತ್ತಿದ್ದ, ಇಲ್ಲವೆ ಆಶ್ರಯವನ್ನು ಪಡೆಯುತ್ತಿದ್ದ ಕಲಾಕಾರರಿಗೆ ಇಂದು ಈ ಖಾತೆ ಆಶ್ರಯವನ್ನು ನೀಡುತ್ತಿದೆ.

ಉದಯ : ೧೯೨೭ ರಲ್ಲಿ "ಬ್ರಿಟಿಶ ಬ್ರಾಡಕಾಸ್ಟಿಂಗ ಕಂಪನಿ" ಎಂಬ ಹೆಸರಿನಿಂದ ಬಿ. ಬಿ. ಸಿ. ಕಾರ್ಪೋರೇಶನ್‌ದ ಪ್ರತಿಷ್ಠಿತ ವ್ಯಕ್ತಿಯ ಖಾಸಗಿ ಕಂಪನಿಯ ಆಡಳಿತೆಯಲ್ಲಿತ್ತು. ೧೯೩೦ ರಲ್ಲಿ ಕಂಪನಿ ದಿವಾಳಿ ತೆಗೆಯಲಾಗಿ ರೇಡಿಯೋ ಮಾಲಕರ, ಹಾಗೂ ರೇಡಿಯೋ ವ್ಯಾಪಾರಸ್ಥರ ಒತ್ತಾಯದಿಂದ ಬ್ರಿಟಿಶ್ ಸರಕಾರವು ಪ್ರಯೋಗಾತ್ಮಕವಾಗಿ ನಡೆಸಹತ್ತಿತು. ಮುಂದೆ ೧೯೩೨ ರಲ್ಲಿ ಕೂಲಿಕಾರ ಹಾಗೂ ಔದ್ಯೋಗಿಕ ಮಂತ್ರಿ ಶಾಖೆಯು ಕಕ್ಷೆಯಲ್ಲಿ ಬಂದಿತು. ಮುಂದೆ ೧೯೩೫ ರಲ್ಲಿ ಸ್ವತಂತ್ರವಾದ ಖಾತೆ ಯಾಯಿತು.

ಎ. ಆಯ್. ಆರ್. ಹೆಸರು : ೩-೬-೧೯೩೬ ರಿಂದ 'ಆಲ್ ಇಂಡಿಯಾ ರೇಡಿಯೊ' ಎಂಬ ಈಗ ಪ್ರಚಲಿತವಿರುವ ಹೆಸರಿನಿಂದ ಪ್ರತ್ಯೇಕವಾದ ಖಾತೆಯಾಗಿದೆ. ಮುಂದೆ ೧೯೪೬ ರಲ್ಲಿ ಒಂಬತ್ತು (೯) ಕೇಂದ್ರಗಳಾದವು. ೧೯೪೭ ರ ವಿಭಜನೆಯಲ್ಲಿ ೬ ಕೇಂದ್ರಗಳು ಉಳಿದವು. ಇಂದು ೨೯ ರೇಡಿಯೋ ಕೇಂದ್ರಗಳ ೧೭೯ ಟ್ರಾನ್ಸ್‌ಮಿಟರುಗಳೂ ೩೨ ಸ್ಟುಡಿಯೋ ಕೇಂದ್ರಗಳೂ ೨೮ ರಿಸೀವ್ಹಿಂಗ ಕೇಂದ್ರಗಳೂ ಇವೆ. ೧೫-೯-೫೯ ರಿಂದ ಟೆಲಿವ್ಹಿಜನ್ ಕೇಂದ್ರವನ್ನು ಪ್ರಾರಂಭಿಸಿದ್ದಾರೆ. (೧೯೬೪ ರ ಅಂಕಿಸಂಖ್ಯೆ ಮೇರೆಗೆ).

ಇದು ಏನೇ ಇರಲಿ, ಫಲಜ್ಯೋತಿಷ್ಯದಲ್ಲಿ ಈ ಖಾತೆಯಲ್ಲಿ ಕಾರ್ಯ ಮಾಡಲು ಇಲ್ಲವೆ ಶಿಕ್ಷಣ ಪಡೆಯಲು ಕಾರಕ ಗ್ರಹಗಳಾವವು, ಜಾತಕ ಹೇಗಿರಬೇಕು ಎಂಬುದನ್ನು ವಿವೇಚಿಸೋಣ.

ಕಾರಕ ಗ್ರಹ : ಲಲಿತ ಕಲೆಗೆ ಕಾರಕನಾದ ಶುಕ್ರನೇ ಈ ಉದ್ಯೋಗಕ್ಕೂ ಹಾಗೂ ಈ ಖಾತೆಗೂ ಕಾರಕನು. ಶುಕ್ರನ ತರುವಾಯ ಬುಧನು ಕೆಲಮಟ್ಟಿಗೆ ಕಾರಕನಾಗುವನು. ಏಕೆಂದರೆ ಬರವಣಿಗೆ (ಲೇಖನ), ಮಾತುಗಾರಿಕೆ ಪ್ರಸರಣ, ಪ್ರಸಾರ, ಸುದ್ದಿ, ಸಾಹಿತ್ಯ ಭಾಷಾಂತರ, ಮೊದಲಾದವುಗಳ ಮೇಲೆ ಬುಧನ ಪ್ರಭುತ್ವವಿರುವದರಿಂದ ಬುಧನೂ ಕಾರಕನೆಂದು ಹೇಳಬಹುದು. ಹುಟ್ಟು ಅಧಿಕಾರಿ ಇಲ್ಲವೆ ನೇರವಾದ ಅಮಲ್ದಾರರಾಗಲು ಸರಕಾರಿ ಉದ್ಯೋಗ ಕಾರಕನಾದ ರವಿಯೂ ಪಾಂಡಿತ್ಯ ಕಾರಕನಾದ ಗುರುವೂ ಕಾರಕರೆಂದು ಹೇಳಬಹುದು.

ಸ್ಥಾನ : ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಈ ಖಾತೆಗೆ ದ್ವಿತೀಯ ಸ್ಥಾನವೇ ಮೂಲ ಹಾಗೂ ಮುಖ್ಯವಿರುತ್ತದೆ. ಏಕೆಂದರೆ ಮಧುರವಾಗಿಯೂ ಪರಿಣಾಮಕಾರಿಯಾಗಿಯೂ ಸ್ವಭಾವಪೂರಿತವಾಗಿಯೂ ಸ್ಪಷ್ಟ ಉಚ್ಚಾರ ಪೂರಿತವಾಗಿಯೂ ಮಾತನಾಡಲು ಜಾತಕದಲ್ಲಿ ವಾಣಿ ಸ್ಥಾನವಾದ ದ್ವಿತೀಯ ಸ್ಥಾನವನ್ನೇ ಪರಿಶೀಲಿಸುತ್ತಾರೆ.

ದ್ವಿತೀಯೇಶನೂ ಬಲಾಢ್ಯನಿರಬೇಕು. ದ್ವಿತೀಯ ಸ್ಥಾನದಲ್ಲಿ ಬಲಾಢ್ಯ ಗ್ರಹಗಳಿರಬೇಕು. ವಾಯು ರಾಶಿಗಳು ಮಾತಿನಲ್ಲಿ ಮಾಧುರ್ಯವನ್ನೂ ಅಗ್ನಿರಾಶಿಗಳು ಸ್ಪಷ್ಟ ಉಚ್ಚಾರವನ್ನೂ ಪೃಥ್ವಿ ರಾಶಿಗಳು ಮಿತಭಾಷೆಯನ್ನೂ ಜಲ ರಾಶಿಗಳು ಮಾತಿನಲ್ಲಿ ಅಸ್ಪಷ್ಟತೆ (ತೊದಲು ನುಡಿ) ಯನ್ನೂ, ತೋರಿಸುತ್ತವೆ.

ಶುಕ್ರ–ಚಂದ್ರರು ಇಂಪು, ಸೀರ, ಮಧುರ ಶೈಲಿಯ ಗುಣಧರ್ಮವುಳ್ಳವರು. ಬುಧನು ಮಾತಿನಲ್ಲಿ ವೈಖರಿ, ಚಾಪಲ್ಯ (ವಕ್ತೃತ್ವ) ದೀರ್ಘಾವಧಿ ಭಾಷಣ ಗುಣಧರ್ಮವುಳ್ಳವನು. ಗುರು ಮಾತಿನಲ್ಲಿ ಪಾಂಡಿತ್ಯವನ್ನೂ, ವಿದ್ವತ್ತನ್ನೂ. ಗಾಂಭೀರ್ಯವನ್ನೂ ಕೊಡುವನು.

ದ್ವಿತೀಯ ಸ್ಥಾನದ ನಂತರ ಪಂಚಮ ಸ್ಥಾನವನ್ನೂ ಪಂಚಮಾಧೀಶನನ್ನೂ ಪರಿಶೀಲಿಸಬೇಕು. ವಿದ್ಯೆ, ಬುದ್ಧಿಯ ಹಾಗೂ ಸ್ಪರ್ಧಾತ್ಮಕ-ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಪಂಚಮಸ್ಥಾನವೇ ಮೂಲ ಹಾಗೂ ಮುಖ್ಯವಿರುತ್ತದೆ.

ಲಗ್ನ : ಆಕಾಶವಾಣಿ ಖಾತೆಯಲ್ಲಿ ಕೆಲಸ ಮಾಡಲು ಇಂಥ ಲಗ್ನವೇ ಇರಬೇಕೆಂಬ ನಿಯಮವಿಲ್ಲ.

ರಾಶಿ : ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಈ ಖಾತೆಯಲ್ಲಿ ಕೆಲಸ ಮಾಡಲು ಇಂಥ ರಾಶಿಯವರೇ ಇರಬೇಕೆಂಬ ನಿಯಮವಿಲ್ಲದಿದ್ದರೂ ಲಲಿತಕಲೆಯ ಕೆಲಸಕ್ಕಾಗಿ ವಾಯು ರಾಶಿಯವರೂ ಕಾರ್ಯಕ್ಷಮತೆ, ಹಾಗೂ ಕಾರಕೂನೀ ಕೆಲಸಕ್ಕಾಗಿ ಭೂ ರಾಶಿಯವರೂ ಆಡಳಿತಕ್ಕಾಗಿ ಅಗ್ನಿ ರಾಶಿಯವರೂ ಯೋಜನೆಗಾಗಿ ಜಲರಾಶಿಯವರೂ ಪೂರಕರಿರುತ್ತಾರೆ.

ವರ್ಗಗಳು : ಆಕಾಶವಾಣಿ ನೌಕರದಾರರನ್ನು ಪ್ರಾಮುಖ್ಯವಾಗಿ ನಾಲ್ಕು ವರ್ಗದವರನ್ನಾಗಿ ಕಲ್ಪಿಸಬಹುದಾಗಿದೆ.

(೧) ಆಡಳಿತಗಾರರು (೨) ಕಾರ್ಯಕ್ರಮ ವಿಭಾಗದವರು (೩) ಇಂಜನಿಯರ್ಸ (೪) ಯೋಜನೆಗಾರರು.

## ಪ್ರೊಡ್ಯೂಸರ, ಅಸಿಸ್ಟಂಟ ಪ್ರೊಡ್ಯೂಸರ, ಸ್ಕ್ರಿಪ್ಟ ರೈಟರ, ಅನೌನ್ಸರ, ಸ್ಟಾಫ್ ಆರ್ಟಿಸ್ಟ

ಆಕಾಶವಾಣಿಯ ಈ ಕಾರ್ಯಕ್ರಮ ವಿಭಾಗದಲ್ಲಿ ಕೆಲಸ ಮಾಡುವ ಈ ಬುದ್ಧಿಜೀವಿ ತಂಡವನ್ನು ಪ್ರೊಡ್ಯೂಸಿಂಗ ವಿಭಾಗದಲ್ಲಿ ಕಾಣಬಹುದು. ರಾಷ್ಟ್ರದಲ್ಲಿಯ ಮೇಲ್ತರಗತಿಯ ಕಲಾಕಾರ, ಸಾಹಿತಿಗಳು ಈ ವಿಭಾಗದಲ್ಲಿ ರುವದು ಕಂಡುಬರುತ್ತದೆ.

ಆಕಾಶವಾಣಿಯ (ಸಂಸ್ಥೆ) ಬೆನ್ನೆಲುಬಿನಂತಿರುವ ಈ ಬುದ್ಧಿಜೀವಿಗಳ ಜೀವನವು ಶೋಚನೀಯವಿರುತ್ತದೆ. ಇವರ ನೌಕರಿಗಳು ಕಾಂಟ್ರ್ಯಾಕ್ಟ ಪದ್ಧತಿಯಂತೆ (ಗುತ್ತಿಗೆ ವ್ಯವಹಾರ) ಇರುತ್ತವೆ. ೬ ತಿಂಗಳ ಕಾಂಟ್ರ್ಯಾಕ್ಟ ದಿಂದ ೪-೫ ವರ್ಷಗಳ ಕಾಂಟ್ರ್ಯಾಕ್ಟ ಪದ್ಧತಿಗಳಿವೆ. ೧೫-೨೦ ವರ್ಷಗಳ ವರೆಗೆ ಕಾಂಟ್ರ್ಯಾಕ್ಟ ಪದ್ಧತಿಯಿಂದ ಕೆಲಸ ಮಾಡುವ ಕೆಲಸಗಾರರನ್ನೂ ಈ ಖಾತೆಯಲ್ಲಿ ಕಾಣಬಹುದು.

ಗೊತ್ತುಮಾಡಿಕೊಂಡ ಅವಧಿ ತೀರಿತೆಂದರೆ ಇವರ ಕೆಲಸವನ್ನು (Renew) ಬೆಳೆಸುವರೇ ತೆಗೆದುಬಿಡುವರೆ ಎಂಬುದು ಅನಿಶ್ಚಿತವಿರುವದು. ಒಂದು ರೀತಿಯಿಂದ ಇವರು ಸುಶಿಕ್ಷಿತ ಬುದ್ಧಿಜೀವಿ ಕೂಲಿಗಳೆಂದರೆ ತಪ್ಪೇನೂ ಆಗಲಿಕ್ಕಿಲ್ಲವಲ್ಲ! ಪೆನ್‌ಶನ್, ಗ್ರ್ಯಾಚ್ಯುಯಿಟಿ, ಪ್ರಾವಿಡೆಂಟ ಫಂಡ ಮೊದಲಾದ ಯೋಜನೆಗಳಂತೂ ದೂರವೇ.

ಸರಕಾರದ ಈ ಮಲತಾಯಿ ಧೋರಣೆಗೆ ಉಪಾಯಗಳಿವೆಯೇ ? ಈ ಅನಿಷ್ಟ ಪದ್ಧತಿಯನ್ನು ಸರಕಾರವು ಅನುಸರಿಸುವುದಾದರೂ ಏಕೆಂದು ವಿಚಾರಿಸಲಾಗಿ ಪ್ರಜಾಪ್ರಭುತ್ವದಲ್ಲಿ (ರುಚಿರ್ಭಿನ್ನ ಲೋಕದಲ್ಲಿ) ಹೀಗೇ ನಡೆಯುವದು ಎಂದು ಹೇಳುವವರೂ ಇದ್ದಾರೆ.

ಈ ಕಾರ್ಯಕ್ರಮ ವಿಭಾಗದಲ್ಲಿ ಕೆಲಸ ಮಾಡುತ್ತಿರುವವರು ಹೆಚ್ಚಾಗಿ ಸಾಹಿತಿಗಳು, ಕಲಾಕಾರರೇ ಇರುವದರಿಂದ ಜನರ ಇಚ್ಛೆ, ಪ್ರೀತಿ, ವಿಶ್ವಾಸ,

ಧೋರಣೆಗಳು ಕಾಲಕ್ರಮದಲ್ಲಿ ಬದಲಾಗುತ್ತ ಹೋದ ಹಾಗೆ ಕಲಾಕಾರರೂ ಬದಲಾಗುತ್ತ ಹೋಗುವದರಲ್ಲಿ ಔಚಿತ್ಯವಿದೆ ಎನ್ನಬಹುದು.

ಸರಕಾರ ಹಾಗೂ ಈ ಖಾತೆಯ ಧೋರಣೆಗಳು ಹೇಗೇ ಇರಲಿ ಸಮಾಜದಲ್ಲಿ ಇವರಿಗೆ ಮಾನಸನ್ಮಾನ ಬಹಳವಿದೆ. ಅಷ್ಟೇ ಏಕೆ, ಪ್ರೊಡ್ಯೂಸರರೊಬ್ಬರು ಪದ್ಮಶ್ರೀಯಂಥ ಪ್ರಶಸ್ತಿಯನ್ನೂ ಪಡೆದಿದ್ದಾರೆ.

ಪ್ರೊಡ್ಯೂಸರ, ಅಸಿಸ್ಟಂಟ ಪ್ರೊಡ್ಯೂಸರ, ಸ್ಟಾಫ ಆರ್ಟಿಸ್ಟ :

ಕಾರಕಗ್ರಹ : ಈ ವರ್ಗದ ಕಲಾಕಾರರಿಗೆ ಲಲಿತಕಲಾಕಾರಕನಾದ ಶುಕ್ರನೂ ಸಾಹಿತ್ಯಕಾರಕನಾದ ಬುಧನೂ ಪಾಂಡಿತ್ಯಕಾರಕನಾದ ಗುರುವೂ ವಾಯು ಇಲ್ಲವೆ ಭೂ ರಾಶಿಗಳಲ್ಲಿ ಇರುತ್ತಾರೆ.

ಇವರ ಜಾತಕದಲ್ಲಿ ರವಿ, ಮಂಗಳ ದುರ್ಬಲರಿರುತ್ತಾರೆ. ಚಂದ್ರನು ವಾಯು ಇಲ್ಲವೆ ಪೃಥ್ವಿ ರಾಶಿಯಲ್ಲಿರುತ್ತಾನೆ.

ಯೋಗಗಳು : ಈ ತರಹದ ಉದ್ಯೋಗಗಳಲ್ಲಿ ಕೆಲಸ ಮಾಡುತ್ತಿರುವವರಲ್ಲಿ ಯೋಗಕಾರಕ ಗ್ರಹಗಳು ದುರ್ಬಲವಿರುತ್ತವೆ. ಉದಾ : ವೃಷಭ ಲಗ್ನವನ್ನೇ ತೆಗೆದುಕೊಳ್ಳಿರಿ. ಈ ಲಗ್ನಕ್ಕೆ ಶನಿಯು ಯೋಗಕಾರಕನಿದ್ದು ಜಾತಕದಲ್ಲಿ ಅವನು ದುರ್ಬಲನಿದ್ದರೆ ಜಾತಕನು ನಿರ್ಧನಿಕನಾಗುವನು.

ವೃಷಭ ಲಗ್ನದಲ್ಲಿ ಜನಿಸಿದ ಯಾರೋರ್ವ ಜಾತಕನಿಗೆ ವೃಷಭ ಇಲ್ಲವೆ ತುಲಾದಲ್ಲಿ ಶುಕ್ರನೂ ಮಿಥುನ ಇಲ್ಲವೆ ಕನ್ಯಾದಲ್ಲಿ ಬುಧನೂ ಇದ್ದು ಶನಿಯು ಮೇಷದಲ್ಲಿ ಇರುವನೆಂದು ತಿಳಿಯಿರಿ. ಇಲ್ಲಿ ಬುಧ-ಶುಕ್ರರ ಪ್ರಭಾವದಿಂದ ಜಾತಕನು ಉತ್ತಮ ಕಲಾಕಾರನೂ ಶ್ರೇಷ್ಠ ಸಾಹಿತಿಯೂ ಆಗಬಲ್ಲನು. ಆದರೆ ರಾಜಯೋಗಕಾರಕನಾದ ಶನಿಯು ವ್ಯಯದಲ್ಲಿ ನೀಚನಾಗಿಯೂ ದುರ್ಬಲನಾಗಿಯೂ ಇರುವದರಿಂದ ಜಾತಕನಿಗೆ ವಿದ್ವತ್ತು, ಪಾಂಡಿತ್ಯ ಇದ್ದಾಗ್ಯೂ ನಿರ್ಧನನಾಗಿ ಉಳಿಯುವನು. ನೌಕರಿಯಲ್ಲಿಯೂ ಸ್ಥೈರ್ಯ

ಉಳಿಯಲಾರದು. ಇದರಂತೆ ಈ ಪ್ರೊಡ್ಯೂಸರ, ಅಸಿಸ್ಟಂಟ ಪ್ರೊಡ್ಯೂಸರ, ಸಾಫ್ಟ ಆರ್ಟಿಸ್ಟರುಗಳ ಜಾತಕಗಳು ಹೀಗೆಯೇ ಇರುತ್ತವೆ.

ಅನೌನ್ಸರ ಹಾಗೂ ಸ್ಕ್ರಿಪ್ಟ ರೈಟರ : ಇವರ ಜಾತಕಗಳ ಯೋಗಗಳೂ ಕೂಡ ಸಾಮಾನ್ಯವಾಗಿ ಅಸಿಸ್ಟಂಟ ಪ್ರೊಡ್ಯೂಸರ, ಪ್ರೊಡ್ಯೂಸರರ ಯೋಗಗಳಂತೆಯೇ ಇದ್ದು ದ್ವಿತೀಯ ಸ್ಥಾನ ಹಾಗೂ ದ್ವಿತೀಯೇಶರು ಬಲಾಢ್ಯರಿರುತ್ತಾರೆ. ಇವರ ಕೆಲಸ ಯಾವಾಗಲೂ ಮಾತನಾಡುವದಿರುವದರಿಂದ ವಾಗೀಶನಾದ ಬುಧನೂ, ವಾಕ್ ಘೋಷಕ ಗ್ರಹಗಳಾದ ಶುಕ್ರ, ಗುರು, ಚಂದ್ರರು ಬಲಾಢ್ಯರಾಗಿ ದ್ವಿತೀಯ ಸ್ಥಾನದಲ್ಲಿ ಇಲ್ಲವೆ ದ್ವಿತಿಯೇಶರಾಗಿರುತ್ತಾರೆ.

ಸ್ಕ್ರಿಪ್ಟ ರೈಟರ : ತೃತೀಯ ಸ್ಥಾನದಿಂದ ಹಸ್ತಾಕ್ಷರಗಳನ್ನು ಹೇಳಬಹುದಾಗಿದೆ. ವಾಯು ಹಾಗೂ ಪೃಥ್ವಿ ರಾಶಿಗಳು ಹಸ್ತಾಕ್ಷರದ ಕಲಾ ಕೌಶಲ್ಯತೆಯನ್ನು ತೋರಿಸುತ್ತವೆ. ಅಗ್ನಿರಾಶಿಗಳು ಮಧ್ಯಮ ಮತ್ತು ಜಲರಾಸಿಗಳು ಕನಿಷ್ಟವಾಗಿರುತ್ತವೆ. ಶುಕ್ರ, ಚಂದ್ರ, ಬುಧರು ಹಸ್ತಾಕ್ಷರಗಳಲ್ಲಿ ಕೌಶಲವನ್ನು ತೋರಿಸುತ್ತಾರೆ.

ತೃತೀಯ ಸ್ಥಾನದಿಂದ ಕೇವಲ ಹಸ್ತಾಕ್ಷರಗಳು ದುಂಡಗೆ ಆಗಬಹುದು. ಆದರೆ ಬರಹದಲ್ಲಿ ವೈಶಿಷ್ಟ್ಯ ಹಾಗೂ ಭಾಷಾತಜ್ಞನಾಗಲು, ಬಹುಭಾಷಾ ಪ್ರವೀಣನಾಗಲು, ಉತ್ತಮ ಭಾಷಾಂತರಕಾರನಾಗಲು ಪಂಚಮ ಸ್ಥಾನವನ್ನೂ ಪರಿಶೀಲಿಸಬೇಕಾಗುತ್ತದೆ. ತೃತೀಯ ಹಾಗೂ ಪಂಚಮಾಧೀಶರು ಬಲಾಢ್ಯರಿರುವ ಜಾತಕರು ಈ ಖಾತೆಯಲ್ಲಿ ಬಹುದಿನಗಳ ವರೆಗೆ ಇರಬಲ್ಲರು.

ವಿಭಾಗಗಳು : ಈ ಪ್ರೊಡ್ಯೂಸರ, ಅಸಿಸ್ಟಂಟ ಪ್ರೊಡ್ಯೂಸರ ವಿಭಾಗಗಳಲ್ಲಿ ಅನೇಕ ಉಪ ವಿಭಾಗಗಳಿವೆ. ಪ್ರಾಮುಖ್ಯವಾಗಿ (೧) ನಾಟಕ, (೨) ಭಾಷಣ, (೩) ಮಹಿಳಾ ವಿಭಾಗ, (೪) ಸಂಗೀತ ವಿಭಾಗ, (೫) ಚಿಕ್ಕ ಮಕ್ಕಳು ಹಾಗೂ ಶಾಲೆಯ ಹುಡುಗರು, (೬) ಹಳ್ಳಿಯ ಸಾಂಸ್ಕೃತಿಕ (Rural Culture) ವಿಭಾಗ.

ಈ ಭಿನ್ನ ಭಿನ್ನ ಅಸಿಸ್ಟಂಟ ಪ್ರೊಡ್ಯೂಸರ ವಿಭಾಗಗಳಿಗೆ ಕೆಲ ವಿಶಿಷ್ಟ ಗ್ರಹಗಳು ಬಲಾಢ್ಯವಿರುತ್ತವೆ. (೧) ಜನಪದ ಹಳ್ಳಿಯ ಸಂಸ್ಕೃತಿಗೆ ಶನಿಯು ಕಾರಕನಿದ್ದು ಬುಧ-ಶುಕ್ರರ ಸಂಗಡ ಶನಿಯು ಶುಭಯೋಗದವ ನಿರಬೇಕು. (೨) ಮಹಿಳಾ ಹಾಗೂ ಚಿಕ್ಕಮಕ್ಕಳ ಕಾರ್ಯಕ್ರಮದ ಕೆಲಸ ಗಳಿಗೆ ಶುಕ್ರ-ಚಂದ್ರರು ಬಲಾಢ್ಯರಿರಬೇಕು. ಮಾತಿನ (Spoken) ಕಾರ್ಯ ಕ್ಕಾಗಿ ಬುಧನೂ ದ್ವಿತೀಯ ಸ್ಥಾನವೂ ದ್ವಿತೀಯೇಶನೂ ಬಲಾಢ್ಯರಿರಬೇಕು. (೩) ಸಂಗೀತ, ನಾಟಕ, ಕಾವ್ಯ ಈ ವಿಭಾಗದಲ್ಲಿ ಕೆಲಸ ಮಾಡುವವರಿಗೂ ಸ್ಟಾಫ ಆರ್ಟಿಸ್ಟರಿಗೂ ಶುಕ್ರ, ಬುಧ, ಗುರು ಗ್ರಹಗಳು ಬಲಾಢ್ಯವಿರುತ್ತವೆ.

**ಪ್ರೊಗ್ರ್ಯಾಮ್ ಎಕ್ಸಿಕ್ಯೂಟಿವ್ಹ :** (Programme Executive) ಆಡಳಿತೆಯ ವರ್ಗದ ಪ್ರಾರಂಭಿಕ ಅಧಿಕಾರಿಗಳೆಂದರೆ ಈ ಪ್ರೊಗ್ರ್ಯಾಮ್ ಎಕ್ಸಿಕ್ಯೂಟಿವ್ಹಗಳು. ಇವರು ಕಲಾಕಾರರೂ ಆಡಳಿತೆಗಾರರೂ ಇರುವರು ಎನ್ನುವದಕ್ಕಿಂತ ಕಲಾಪ್ರೇಮಿಗಳು ಆಡಳಿತೆಗಾರರೂ ಇರುತ್ತಾರೆ.

**ಯೋಗಗಳು :** ಇವರ ಜಾತಕದಲ್ಲಿ ಕಲಾಕಾರಕರಾದ ಬುಧ-ಶುಕ್ರರೂ ಆಡಳಿತೆಕಾರಕರಾದ ರವಿ-ಮಂಗಳರೂ ಬಲಾಢ್ಯರಿರುತ್ತಾರೆ. ಅನೇಕ ಗ್ರಹ ಗಳು ಪುರುಷ ರಾಶಿಯಲ್ಲಿರುತ್ತವೆ. ಚಂದ್ರನು ಹೆಚ್ಚಾಗಿ ಪುರುಷರಾಶಿ ಯಲ್ಲಿಯೇ ಇರುವನು.

**ಲಗ್ನ :** ಮೇಷ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನ ದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

**ಯಶಸ್ವೀ ಅಧಿಕಾರಿ :** ಬುದ್ಧಿಜೀವಿಗಳೂ ವಿಚಿತ್ರ ಸ್ವಭಾವದವರೂ ಆದ ಕಲಾಕಾರರಿಂದ ಕೆಲಸ ತೆಗೆದುಕೊಳ್ಳುವದು ಸುಲಭವೇನಲ್ಲ. ಇವರ ಸಹಿಯಿಂದಲೇ ಯಾವತ್ತು ಕಾಗದಪತ್ರಗಳು ಮೇಲೆ ಹೋಗುತ್ತಿದ್ದರೂ ವಿಚಿತ್ರ ಸ್ವಭಾವದ ಈ ಕಲಾಕಾರರೊಂದಿಗೆ ಹೊಂದಿಕೊಂಡು, ಹೆದರಿಸಿ ಬೆದರಿಸಿ, ಪಾಂಡಿತ್ಯ, ಚಾಪಲ್ಯ ತೋರಿಸಿ, ಕಲಾಕೌಶಲ್ಯವನ್ನು ಪ್ರದರ್ಶಿಸಿ, ಸಾಮ-ದಾನ-ಭೇದ-ದಂಡ ಎಂಬ ಚತುರೋಪಾಯಗಳನ್ನು ಉಪಯೋಗಿಸಿ

ಕಲೆಯ ಗಂಧ ಗೊತ್ತಿಲ್ಲದಿದ್ದರೂ ಗೊತ್ತಿದ್ದಂತೆ ತೋರಿಸುವ ಪ್ರವೃತ್ತಿ ಯವರು ಇರಬೇಕಾಗುತ್ತದೆ. ಆದ್ದರಿಂದ ಇವರ ಜಾತಕದಲ್ಲಿ ರವಿ–ಮಂಗಳರು ಸ್ಥಾನಬಲ ಹಾಗೂ ರಾಶಿ ಬಲದವರಿರುತ್ತಾರೆ. ಬುಧ-ಶುಕ್ರರು ಕೇವಲ ರಾಶಿ ಬಲವವರಿದ್ದು ಸ್ಥಾನಬಲದವರಿರುವದಿಲ್ಲ.

ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಜಾತಕದ ಪಂಚಮ ಸ್ಥಾನವೂ ಪಂಚಮಾಧೀಶನೂ ಬಲಾಢ್ಯರಿರುತ್ತಾರೆ.

ಚಿಕ್ಕ ವಯಸ್ಸಿನಲ್ಲಿ ಅಧಿಕಾರಿಗಳಾಗುವ ಕಾರಣ ಅನೇಕ ಗ್ರಹಗಳು ಉದಿತ ಗೋಲಾರ್ಧದಲ್ಲಿರುತ್ತವೆ.

ಸಾಹಿತಿಗಳೊಂದಿಗೆ ಹಾಗೂ ಕಲಾಕಾರರೊಂದಿಗೆ ಇವರ ಸಂಬಂಧ ಪ್ರತಿನಿತ್ಯ ಬರುವದರಿಂದ ಸಾಹಿತಿಕಾರಕನಾದ ಬುಧನೂ ಕಲಾಕಾರನಾದ ಶುಕ್ರನೂ ಇವರ ಜಾತಕದಲ್ಲಿ ಸ್ಥಾನಬಲದವರಿಲ್ಲದೆ ರಾಶಿಬಲದವರಿರುತ್ತಾರೆ.

### ಡೆಪ್ಯೂಟಿ ಡೈರೆಕ್ಟರ, ಅಸಿಸ್ಟಂಟ ಸ್ಟೇಶನ್ ಡೈರೆಕ್ಟರ

ಇವರು ಅಧಿಕಾರಿಗಳೇನೋ ನಿಜ, ಆದರೆ ಸ್ವತಂತ್ರ ಅಧಿಕಾರಿಗಳಲ್ಲ ಇವರ ಮುಖಾಂತರವೆ ಕಾಗದಪತ್ರಗಳು ಮೇಲೆ ರವಾನೆಯಾಗುತ್ತಿದ್ದರೂ ಅಧಿಕಾರ ಚಲಾಯಿಸುವ ಮುದ್ರಾಧಾರಿ ಬೇರೆ ಇರುವರು.

ವಿಚಿತ್ರ ಯೋಗದ ಜಾತಕಗಳು : ರವಿ–ಮಂಗಳರು ಬಲಾಢ್ಯರಿದ್ದರೆ ಆಡಳಿತಗಾರರು ಹಾಗೂ ಅಧಿಕಾರಿಗಳಾಗುವರು. ಬುಧ–ಶುಕ್ರರು ಬಲಾಢ್ಯ ರಿದ್ದರೆ ಸಾಹಿತಿ ಇಲ್ಲವೆ ಕಲಾಕಾರರಾಗುವರು. ಇವರು ಅಧಿಕಾರವಿದ್ದರೂ ಅಧಿಕಾರವನ್ನು ಚಲಾಯಿಸಲಾರರು. ಕಲೆಯ ಜ್ಞಾನ ಗೊತ್ತಿದ್ದರೂ ಕಲಾಕಾರರಲ್ಲ. ಇವರ ಜಾತಕದಲ್ಲಿ ಯೋಗಗಳು ಹೀಗಿರುತ್ತವೆ.

(೧) ರವಿ-ಮಂಗಳರು ರಾಶಿಬಲದವರಿದ್ದು, ಸ್ಥಾನಬಲದವರಾಗಲಿ ಯೋಗಕಾರಕರಾಗಲಿ ಇರುವದಿಲ್ಲ.

(೨) ಬುಧ-ಶುಕ್ರರು ರಾಶಿಬಲದವರೂ ಸ್ಥಾನಬಲದವರೂ ಯೋಗ ಕಾರಕರೂ ಇದ್ದರೂ ಅಸ್ತ, ವಕ್ರ, ಪಾಪಗ್ರಹಮಧ್ಯ, ಪಾಪಗ್ರಹದೃಷ್ಟ ಇರುತ್ತಾರೆ.

(೩) ಚಂದ್ರನು ಹಾಗೂ ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿ ಇರುತ್ತವೆ.

### ಸ್ಟೇಷನ್ ಡಾಯರೆಕ್ಟರ, ಡಾಯರೆಕ್ಟರ ಜನರಲ್

ಈ ಆಡಳಿತ ವಿಭಾಗದ ಅಧಿಕಾರಿಗಳ ಜಾತಕದಲ್ಲಿ ಕಲಾಕಾರಕ ಗ್ರಹ ಗಳಿಗಿಂತ ಆಡಳಿತಕಾರಕ ಗ್ರಹಗಳೇ ಬಲಾಢ್ಯವಿರುತ್ತವೆ. ವಿಶೇಷವಾಗಿ ಅಗ್ನಿ ರಾಶಿಯಲ್ಲಿ ರವಿ, ಮಂಗಳ, ಗುರು ಇವರು ಸ್ಥಾನ ಬಲದವರಿರುತ್ತಾರೆ.

ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಜಾತಕದ ಪಂಚಮ ಸ್ಥಾನವೂ ಪಂಚಮಾಧೀಶನೂ ಬಲಾಢ್ಯರಿರಬೇಕು.

ಚಿಕ್ಕ ವಯಸ್ಸಿನಲ್ಲಿ ಅಧಿಕಾರಿಗಳಾಗುವ ಕಾರಣ ಅನೇಕ ಗ್ರಹಗಳು ಉದಿತ ಗೋಲಾರ್ಧದಲ್ಲಿರುತ್ತವೆ.

ಸಾಹಿತಿಗಳೊಂದಿಗೆ ಹಾಗೂ ಕಲಾಕಾರರೊಂದಿಗೆ ಇವರ ಸಂಬಂಧ ಪ್ರತಿನಿತ್ಯ ಬರುವದರಿಂದ ಸಾಹಿತಿಕಾರಕನಾದ ಬುಧನೂ ಕಲಾಕಾರಕನಾದ ಶುಕ್ರನು ಇವರ ಜಾತಕದಲ್ಲಿ ಸ್ಥಾನಬಲದವರಿಲ್ಲದೆ ರಾಶಿ ಬಲದವರಿರುತ್ತಾರೆ. ರಾಶಿದೃಷ್ಟಿಯಿಂದ ನೋಡಿದರೆ ಪ್ರೊಗ್ರಾಮ ಎಕ್ಸಿಕ್ಯೂಟರರಂತೆ ಇವರೂ ಜಲ ಹಾಗೂ ಅಗ್ನಿ ರಾಶಿಯವರಿರುತ್ತಾರೆ.

### ಯೋಜನೆಯ ವಿಭಾಗ

ಪ್ರೊಗ್ರ್ಯಾಮ ಎಕ್ಸಿಕ್ಯೂಟರರು, ಅಸಿಸ್ಟಂಟ ಸ್ಟೇಷನ್ ಡೈರೆಕ್ಟರರು, ಡೆಪ್ಯೂಟಿಡೈರೆಕ್ಟರರು ಈ ಎಲ್ಲ ಹುದ್ದೆಯ ಜನರು ಈ ವಿಭಾಗದಲ್ಲಿರುವರು.

ಇವರು ಆಡಳಿತೆಗಾರರೂ ಅಲ್ಲ, ಸಾಹಿತಿ–ಕಾಲಾಕಾರರೂ ಅಲ್ಲ, ಮಶಿನರಿ ತಜ್ಞರೂ ಅಲ್ಲ, ಜನತೆಯ ಬೇಕು-ಬೇಡಗಳಿಗೆ ಅನುಸಾರವಾಗಿ ಯೋಜನೆಗಳನ್ನು ಮಂಡಿಸುವವರೂ ಧೋರಣೆಗಳನ್ನು ರೂಪಿಸುವವರೂ ಆಗಿರುತ್ತಾರೆ. ಇವರ ಜಾತಕದಲ್ಲಿ ಚಂದ್ರನು ವಾಯು ರಾಶಿಗಳಾದ ಮಿಥುನ, ತುಲಾ, ಕುಂಭ ರಾಶಿಯಲ್ಲಿಯೂ ಮತ್ತು ರವಿ, ಮಂಗಳ, ಶುಕ್ರ ಇವರಿಗಿಂತ ಬುಧ, ಗುರು, ಚಂದ್ರರುಗಳು ಬಲಾಢ್ಯರಿರುತ್ತಾರೆ.

## ಮಶಿನರಿ ವಿಭಾಗ

ಪ್ರಕರಣ ೩ರಲ್ಲಿ ಬರೆದಿರುವಂತೆ ಇಂಜನೀಯರ್ಸ ಹಾಗೂ ತಾಂತ್ರಿಕ ಕೆಲಸಗಾರರ ಕಾರಕ ಗ್ರಹ, ಸ್ಥಾನ, ಲಗ್ನ, ರಾಶ್ಯಾದಿಗಳು ಸಮವಾಗಿಯೇ ಇದ್ದು, ವಿಶೇಷ ಯೋಗವೆಂದರೆ ಖಾತೆಯ ಕಾರಕ ಗ್ರಹವಾದ ಶುಕ್ರನು ಕೇವಲ ರಾಶಿಬಲದವನಿರಬೇಕು.

## ೨. ರ್ರೈಲೆ ಖಾತೆ (Railways) :

ಇಂದು ಕೇಂದ್ರ ಸರಕಾರದಲ್ಲಿ ಅತ್ಯಧಿಕ ನವಕರರು ಇರುವ ಖಾತೆ ಎಂದರೆ "ರೇಲ್ವೆ ಖಾತೆ" ಎಂದೇ ಹೇಳಬೇಕಾಗಿದೆ. ೧೯೬೧ ರ ಜನಗಣತಿಯ ಪ್ರಕಾರ ೧೦ ಲಕ್ಷ ಕೆಲಸಗಾರರಿರುವ ಈ ಖಾತೆಯಲ್ಲಿ ನವಕರರ ಪೇತನದ ಮೇಲೆಯೇ ಆಗುತ್ತಿರುವ ವಾರ್ಷಿಕ ಖರ್ಚು ೧೨೩ ಕೋಟಿ ರೂಪಾಯಿ ಇತ್ತೆಂದ ಮೇಲೆ ರೇಲ್ವೆ ಖಾತೆಯು ಗಾತ್ರದ ಕಲ್ಪನೆ ಬರುವದು. ೧೮೫೩ ರಲ್ಲಿ ಸ್ಥಾಪಿಸಲ್ಪಟ್ಟ ಈ ರೇಲ್ವೆ ಖಾತೆಯು ಮುಂದೆ ೧೦೦ ವರ್ಷ ಮೇಲ್ಪಟ್ಟು ಭಾರತದಲ್ಲಿ ವಿವಿಧ ಮೂಲೆಗಳಲ್ಲಿ ಸಹ ತನ್ನ ಸೌಕರ್ಯಗಳನ್ನು ಬೆಳೆಸಿಕೊಂಡು ಪ್ರವಾಸ ಸಾಧನದಲ್ಲಿ ಹೆಚ್ಚೆಚ್ಚಿಗೂ ಪ್ರಗತಿಯನ್ನು ಸಾಧಿಸುತ್ತ ನಡೆದುದನ್ನು ಕಾಣಬಹುದು.

ಪ್ರಥಮವಾಗಿ ರೇಲ್ವೆ ಭಾರತದಲ್ಲಿ ಬಳಕೆಗೆ ಬಂದುದು ೧೮೫೩ ಎಪ್ರಿಲ್ ೧೬ ರಂದು. ಮುಂಬೈಯಿಂದ ಕಲ್ಯಾಣದ ವರೆಗೆ ೨೨ ಮೈಲು ರೇಲ್ವೆ ಮಾರ್ಗ ಆರಂಭವಾದುದೂ ಅಂದೆ. ರೈಲು ಸಂಚಾರ ಮುಂಬೈ–ಠಾಣಾ ಮಧ್ಯ

ಪ್ರಾರಂಭಿಸಲ್ಪಟ್ಟಿದ್ದೂ ಅಂದೇ. ಇದರ ನಂತರ ದಿನೇ ದಿನೇ ರೈಲು ಸಂಚಾರ, ರೈಲು ಮಾರ್ಗ ಪ್ರಗತಿ ಸಾಧಿಸುತ್ತಾ ಕಲಕತ್ತಾ-ಪಾಂಡುರಂಗ ರೇಲ್ವೆ ೧೮೫೪ನೇ ಅಗಸ್ಟ ತಿಂಗಳಲ್ಲಿಯೂ, ದಕ್ಷಿಣ ಭಾರತದಲ್ಲಿಯ ಮದ್ರಾಸ-ಅರ್ಕೋಟ ೧ನಾ ೧೮೫೬ ನೇ ಜುಲೈ ತಿಂಗಳಲ್ಲಿ ಮಹತ್ವದ ರೈಲುಮಾರ್ಗಗಳಾಗಿ ಪ್ರಾರಂಭಿಸಲ್ಪಟ್ಟ ಉಲ್ಲೇಖಗಳಿವೆ.

ರೇಲ್ವೆ ಖಾತೆಯ ಸಮಗ್ರ ಆಡಳಿತೆಯ ಹೊಣೆ ಹೊತ್ತಿರುವ ಸಂಸ್ಥೆಯಾದ "ರೇಲ್ವೆ ಬೋರ್ಡ" ೧೯೦೫ ಮಾಚ ದಲ್ಲಿ ಉದಯಿಸಿತೆಂದು ಹೇಳಲಾಗಿದೆ. ಯಂತ್ರಚಲನೆಗೆ ಕಲ್ಲಿದ್ದಲು ಮುಂತಾದ ಸಾಧನಗಳ ಬದಲು ವಿದ್ಯುತ್‌ಶಕ್ತಿಯ ಬಳಕೆ ೧೯೨೫ ರಲ್ಲಿ ಆರಂಭವಾಯಿತು. ಆ ವರುಷ ಭಾರತದ ಪ್ರಥಮ ವಿದ್ಯುತ್ತ ರೇಲ್ವೆ ಮುಂಬೈಯಿಯಿಂದ (V.T. ಯಿಂದ) ಕುರ್ಲಾದ ವರೆಗೆ ಓಡಲಾರಂಭಿಸಿತು. ೧೯೩೬ ರಲ್ಲಿ ಭಾರತದಲ್ಲಿಯೇ ಪ್ರಥಮವಾಗಿ ಮೊದಲನೆಯ ತರಗತಿಯ ಏ ಕಂಡಿಶಂಡ ಕೋಚ ಮುಂಬೈ-ದಿಲ್ಲಿ ಮಧ್ಯೆ ಓಡಾಡಿತು. ೧೯೫೦ರ ವರೆಗೂ ರೇಲ್ವೆ ಇಂಜಿನುಗಳನ್ನು ವಿದೇಶಗಳಿಂದ ಆಮದು ಮಾಡಲಾಗುತ್ತಿತ್ತು. ಅದೇ ವರ್ಷ ಜನೇವರಿ ೨೬ ರಂದು ಕಲಕತ್ತಾ ಚಿತ್ತರಂಜನ ರೇಲ್ವೆ ಇಂಜನ ತಯಾರಿಕೆ ಕಾರಖಾನೆಯಲ್ಲಿ ಸ್ವದೇಶಿ ರೇಲ್ವೆ ಇಂಜನ ತಯಾರಿಕೆ ಆರಂಭವಾಯಿತು.

ಭಾರತೀಯ ರೇಲ್ವೆಯು ಸಮಗ್ರ ಏಶಿಯಾದಲ್ಲಿಯೇ ದೊಡ್ಡದಿದ್ದು ಜಗತ್ತಿನಲ್ಲಿ ೪ನೆಯ ಸ್ಥಾನ ಗಳಿಸಿದ್ದು ಗಮನಾರ್ಹವಾಗಿದೆ ರೇಲ್ವೆ ರಾಷ್ಟ್ರೀಕರಣ ಮಾಡಿದ ರಾಷ್ಟ್ರಗಳಲ್ಲಿ ರಶಿಯಾವು ಪ್ರಥಮವಾಗಿದ್ದು ಭಾರತವು ದ್ವಿತೀಯ ಸ್ಥಾನ ಗಳಿಸಿದ್ದು ಎಲ್ಲರಿಗೂ ವಿದಿತವಿದೆ.

ತಮ್ಮ ಸೈನ್ಯವನ್ನು ಸಾಗಿಸುವ ಉದ್ದೇಶದಿಂದ ಬ್ರಿಟಿಶರು ಸ್ಥಾಪಿಸಿದ ರೇಲ್ವೆಯು ಕ್ರಮೇಣ ಸಾಮಾನುಗಳನ್ನು ಸಾಗಿಸಲು, ಬಳಸಲು ಆರಂಭಿಸಿದರು. ಮೊದಮೊದಲು ಜನರು ಅದರಲ್ಲಿ ಪ್ರಯಾಣ ಮಾಡಲು ಹಿಂಜರಿಯುತ್ತಿದ್ದರಂತೆ. ಅದೇ ಈಗ ವೈಜ್ಞಾನಿಕ ಪ್ರಗತಿಯ ಪ್ರತೀಕವಾಗಿ ಹಲವಾರು

ಸೌಕರ್ಯಗಳನ್ನು ಹೊಂದಿ ಪ್ರವಾಸದ ಆಕರ್ಷಕ ಸಾಧನವಾಗಿ ಸುಮಾರು ಪ್ರತಿಶತ ೭೦ ರಷ್ಟು ಜನರು ಅದರಲ್ಲಿ ಪ್ರವಾಸ ಮಾಡುತ್ತಿರುವರೆಂದ ಮೇಲೆ ರೇಲ್ವೆ ಖಾತೆಯ ಬಳಕೆಯ ಕಲ್ಪನೆ ಬರದೆ ಇರಲಾರದು! ಅಷ್ಟೇ ಏಕೆ, ಇಂದು ಭಾರತದಲ್ಲಿ ೬,೪೬೦ ರೈಲು ನಿಲ್ದಾಣಗಳು ಇವೆಯಲ್ಲದೆ ಪ್ರತಿನಿತ್ಯ ಸುಮಾರು ೪೦ ಲಕ್ಷ ಜನರು ರೈಲುಗಳಲ್ಲಿ ಪ್ರಮಾಣ ಮಾಡುತ್ತಿರುವಂತೆ! (೧೯೬೦ ಅಂಕಿ ಸಂಖ್ಯೆ ಮೇರೆಗೆ)

ಈ ರೀತಿ ಅತ್ಯಂತ ಭಾರಿ ಪ್ರಮಾಣದಲ್ಲಿ ಅಭಿವೃದ್ಧಿ ಹೊಂದಿದ ಹಾಗೂ ಹೊಂದುತ್ತಲಿರುವ ರೇಲ್ವೆ ಖಾತೆಯ ನವಕರರಿಗೆ ಅನೇಕಾನೇಕ ಸೌಲಭ್ಯಗಳೂ ಸಹ ದೊರೆಯುತ್ತಿರುವದನ್ನು ಕಾಣಬಹುದು. ಉದಾಹರಣೆಗಾಗಿ: ನಿವೃತ್ತಿ ವೇತನ, ಗ್ರ್ಯಾಚೂಟಿ, ಪ್ರಾವ್ಹಿಡೆಂಟ ಫಂಡು, ಉಚಿತ ವೈದ್ಯಕೀಯ ನೆರವು, ಕ್ರೀಡಾ ಸೌಕರ್ಯ, ಶಿಕ್ಷಣ ಸೌಕರ್ಯ, ವಸತಿ ಸೌಕರ್ಯಗಳಲ್ಲದೆ ಪ್ರಯಾಣ ಮಾಡುವದಕ್ಕೋಸ್ಕರ ತಮಗೂ ಹಾಗೂ ತಮ್ಮ ಮೇಲೆ ಅವಲಂಬಿಸಿರುವವರಿಗೂ ಪುಕ್ಕಟೆ ರೈಲು ಪ್ರಮಾಣದ ಸೌಕರ್ಯದ ಅನುಕೂಲತೆ ಇದೆಯಲ್ಲದೆ ನವಕರಿಯ ಭದ್ರತೆಯಂತೂ ಇದ್ದೇ ಇದೆ. ಹೀಗಾಗಿ ಇಂದಿನ ಯುವಕರು ರೇಲ್ವೆ ಖಾತೆಯಲ್ಲಿ ನವಕರಿ ದೊರಕಿಸಲು ಪ್ರಯತ್ನಿಸುವದು ಆಶ್ಚರ್ಯವೇನಲ್ಲ!

ರೇಲ್ವೆ ಖಾತೆಯ ಇಷ್ಟೊಂದು ಓನ್ನಲೆಯಲ್ಲಿ, ರೇಲ್ವೆ ಖಾತೆಯ ವಿಷಯವಾಗಿ ಜ್ಯೋತಿಷ್ಯದ ಕೂಲಂಕಷ ವಿಚಾರವೇನು, ಇದರ ವ್ಯಾಪ್ತಿ ಬಗ್ಗೆ, ಜ್ಯೋತಿಷ್ಯ ಏನು ಹೇಳಬಯಸುತ್ತದೆ, ರೇಲ್ವೆಖಾತೆಯಲ್ಲಿ ನವಕರಿ ದೊರಕಿಸಲು ಯಾವ ಗ್ರಹಗಳು ಜ್ಯೋತಿಷ್ಯದ ಆಧಾರದ ಮೇಲೆ ಕಾರಕ ಗ್ರಹಗಳಾಗಿ ಪ್ರಭಾವಬೀರಬಲ್ಲವು ಇತ್ಯಾದಿ ವಿಚಾರಿಸೋಣ.

**ಕಾರಕ ಗ್ರಹ:** ರೇಲ್ವೆಖಾತೆಯಲ್ಲಿ ವಿವಿಧ ವಿಭಾಗಗಳು ಇರುವದರಿಂದಲೂ ಅನೇಕ ಪ್ರಕಾರದ ಕೆಲಸಗಳು ಇರುವವರಿಂದಲೂ ಅನೇಕ ಗ್ರಹಗಳು ಕಾರಕ ಗ್ರಹಗಳಾಗುವವರಿಂದ ಸಂಕ್ಷಿಪ್ತವಾಗಿ ವಿವೇಚಿಸಲು ಬಾರದೇ ಇದೊಂದೇ ಖಾತೆಯ ವಿಷಯವಾಗಿ ಪ್ರತ್ಯೇಕವಾಗಿ ಸ್ವತಂತ್ರ

ಪುಸ್ತಕವೊಂದನ್ನು ಬರೆಯುವಷ್ಟು ಈ ಖಾತೆದ ವ್ಯಾಪ್ತಿಯಿರುವದರಿಂದ ಸ್ಥೂಲವಾಗಿಯೇ ನಾವು ಪರಿಶೀಲಿಸೋಣ.

ಲಗ್ನ, ಸ್ಥಾನ, ರಾಶಿ : ಇಲ್ಲಿ ಕೂಡಾ ರೇಲ್ವೆ ಖಾತೆಯಲ್ಲಿ ಕೆಲಸ ಮಾಡಲು ನಿರ್ದಿಷ್ಟವಾದ ಲಗ್ನ, ರಾಶಿ ಹಾಗೂ ಸ್ಥಾನಗಳಿರಬೇಕು ಎಂದು ಹೇಳುವದು ಕಷ್ಟಕರವಾಗಿದೆ. ಆದರೂ ಕೂಡಾ ಜ್ಯೋತಿಷ್ಯದ ಅಭ್ಯಾಸದ ವ್ಯಾಪ್ತಿಗಾಗಿ ಕೂಲಂಕಷವಾಗಿ ವಿಚಾರಿಸಬೇಕಲ್ಲವೇ ?

ರೇಲ್ವೆ ಖಾತೆಯಲ್ಲಿಯ ವಿವಿಧ ಭಾಗಗಳಲ್ಲಿ ಕೆಲಸ ಮಾಡಲು ಗ್ರಹಗಳು ಹೇಗಿರಬೇಕು ಎಂಬುದನ್ನು ತಿಳಿಯಲು ಈ ಖಾತೆಯ ವಿವಿಧ ಭಾಗ ಗಳಾವವು, ಅವುಗಳ ನಿರ್ದಿಷ್ಟವಾದ ಕೆಲಸ ಕಾರ್ಯವೇನು ಎಂಬುದನ್ನು ವಿಚಾರಿಸಿದಾಗ ಜ್ಯೋತಿಷ್ಯದ ನಿರ್ದಿಷ್ಟವಾದ ವ್ಯಾಖ್ಯೆ ಕೊಡಲು ಅನುಕೂಲ ವಾಗುವದು.

ಈ ಖಾತೆಯಲ್ಲಿ ಪ್ರಾಮುಖ್ಯವಾಗಿ ಈ ಕೆಳಗಿನಂತೆ ವಿಭಾಗಗಳಿವೆ :

೧. ಆಪರೇಟಿಂಗ ಟ್ರಾನ್ಸಪೋರ್ಟ ವಿಭಾಗ
೨. ಕಮರ್ಶಿಯಲ್ ವಿಭಾಗ
೩. ಮೆಕ್ಯಾನಿಕಲ್ ಇಂಜನೀಯರಿಂಗ ವಿಭಾಗ
೪. ರೇಲ್ವೆ ಪಿ. ಡಬ್ಲ್ಯು. ಡಿ.
೫. ಸ್ಟೋರ್ಸ್ ವಿಭಾಗ
೬. ಅಕೌಂಟ್ಸ ವಿಭಾಗ
೭. ಮೆಡಿಕಲ್ ವಿಭಾಗ
೮. ಸಿಗ್ನಲ್ ಮತ್ತು ಟೆಲಿಕಮ್ಯುನಿಕೇಶನ್ ವಿಭಾಗ
೯. ಸೆಕ್ಯುರಿಟಿ ವಿಭಾಗ
೧೦. ಪರ್ಸನೆಲ್ ವಿಭಾಗ (E. S. T.)
೧೧. ಇಲೆಕ್ಟ್ರಿಕ್ ಇಂಜನಿಯರಿಂಗ ವಿಭಾಗ

ಈ ಪ್ರಕಾರ ಇದರಲ್ಲಿ ವಿಭಾಗ ಮಾಡಿದುದನ್ನು ಕಾಣಬಹುದು.

೧) ಆಪರೇಟಿಂಗ ಟ್ರಾನ್ಸಪೋರ್ಟ ವಿಭಾಗದಲ್ಲಿ ಪ್ರಮುಖರಾದ ಸ್ಟೇಶನ್ ಮಾಸ್ತರ, ಅಸಿಸ್ಟಂಟ ಸ್ಟೇಶನ್ ಮಾಸ್ತರ, ಸುಪರಿಂಟೆಂಡೆಂಟ, ಟ್ರೇನ್ ಕ್ಲಾರ್ಕ ಇತ್ಯಾದಿ.

ಸಾರ್ವಜನಿಕರೊಂದಿಗೆ ನಿಕಟವಾದ ಸಂಬಂಧ ಬರುವ ಹಾಗೂ ಅತಿ ಪರಿಚಿತವಿರುವ ರೇಲ್ವೆ ಖಾತೆಯಲ್ಲಿ ಕೆಲಸಮಾಡುವವರೆಂದರೆ ಇವರೇ ಎಂದು ಹೇಳಬಹುದು! ಇವರಿ ಕಮರ್ಶಿಯಲ್ ವಿಭಾಗದ ಸಂಬಂಧವೂ ಟ್ರಾಫಿಕ್ ಆಪರೇಟಿಂಗ ಸಂಬಂಧವೂ ಬರುವದಲ್ಲದೆ ಸಣ್ಣ ರೇಲ್ವೆ ನಿಲ್ದಾಣ ಗಳಲ್ಲಿ ಇವರು ಬುಕಿಂಗ ಕ್ಲಾರ್ಕ ಮತ್ತು ಟಿಕೆಟ ಕಲೆಕ್ಟರ ಮೊದಲಾಗಿ ಕೆಲಸ ಮಾಡಬೇಕಾಗುವದಲ್ಲದೆ ಸಿಗ್ನಲ್ ಟೆಲಿಕಮ್ಯುನಿಕೇಶನ್ ಕೆಲಸವನ್ನೂ ಮಾಡುವದನ್ನೂ ಪ್ರಸಂಗಬಂದಲ್ಲಿ ರೈಲು ಸಾಗಿಸುವದಕ್ಕಾಗಿ ಗಂಟೆಗಳನ್ನು ಬಾರಿಸುತ್ತಿರುವದನ್ನೂ ಎಲ್ಲರೂ ಕಾಣಬಹುದು. ಇಷ್ಟೇ ಅಲ್ಲದೆ ಇವರ ಮೇಲ್ವಿಚಾರಣೆಗಾಗಿ ಅಧಿಕಾರವನ್ನು ಚಲಾಯಿಸುವವರು ಆಪರೇಟಿಂಗ ವಿಭಾಗದ ಅಧಿಕಾರಿಗಳೂ ಕಮರ್ಶಿಯಲ್ ವಿಭಾಗದ ಅಧಿಕಾರಿಗಳೂ ಲೆಕ್ಕ-ಪತ್ರದ ಅಕೌಂಟ್ಸ ವಿಭಾಗದ ಅಧಿಕಾರಿಗಳೂ ಪರ್ಸನೆಲ್ ವಿಭಾಗದ ಅಧಿಕಾರಿ ಗಳೂ ಇರುವರಲ್ಲದೆ ಇವರು ತಮ್ಮ ಕೆಲಸ ಸುಗಮವಾಗಿ ಸಾಗಿಸುವದಕ್ಕಾಗಿ ಸಾರ್ವಜನಿಕರ ಸಹಕಾರದ ಯಾಚನೆಯನ್ನೂ ಮಾಡಬೇಕಾಗುತ್ತದೆ.

ಇಂದು ಅನೇಕ ಸ್ಟೇಶನ್ ಮಾಸ್ತರರು ನಮಗೆ ವಿಚಾರಿಸುತ್ತಿರುವ ಪ್ರಶ್ನೆ ಎಂದರೆ "ಸದ್ಯದ ವರ್ಷದಲ್ಲಿ ಮುಂಬಡತಿ (Promction) ಸಿಗ ದಿದ್ದರೂ ಚಿಂತೆಯಿಲ್ಲ, ಹಿಂಬಡತಿ ( Peversion ) ಹಾಗೂ ದಂಡ (Punishment) ಮೊದಲಾದ ಅನಿಷ್ಟ ಯೋಗಗಳು ಇಲ್ಲವಲ್ಲವೆ ಎಂಬುದು. ಈ ರೀತಿಯಾಗಿ ವ್ಯಾಕುಲಚಿತ್ತದಿಂದ ವಿಚಾರಿಸುತ್ತಿರುವವರನ್ನು ಮತ್ತು ಪೆನಶನ್ ವರೆಗೆ ಯಾವ ಅನಾನುಕೂಲತೆ ಬರದೆ ಸರ್ವಿಸಿನಲ್ಲಿ ರಿಟಾಯರ ಆಗ ಬಹುದಲ್ಲವೆ? ಎಂಬುದಾಗಿ ಇನ್ನೂ ಅನೇಕ ಸ್ಟೇಶನ್ ಮಾಸ್ತರರು ಪ್ರಶ್ನೆ ಕೇಳುತ್ತಿದ್ದುದನ್ನು ನೋಡಿದಾಗ ಇವರ ಜವಾಬ್ದಾರಿ, ಹೊಣೆಗಾರಿಕೆ, ಕೆಲಸದ ಗಾತ್ರ ಮೊದಲಾದವುಗಳ ಕಲ್ಪನೆ ಬರದಿರಲಾರದು.

## ವಿಶಿಷ್ಟ ಯೋಗಗಳು

ಅಧಿಕಾರ ಚಲಾಯಿಸುವ ರವಿ, ಮಂಗಳರಂತೂ ಇವರ ಜಾತಕದಲ್ಲಿ ದುರ್ಬಲರಿರುವದನ್ನು ಕಾಣಬಹುದು. ಸೇವಾಕಾರಕ ಗ್ರಹವೂ ರೇಲ್ವೆ ಖಾತೆಯ ಕಾರಕ ಗ್ರಹವೂ ಆದ ಶನಿಯಂತೂ ಬಲಾಢ್ಯನಿರಲೇಬೇಕು. ನಿದಿಷ್ಟವಾದ ಆದೇಶದಂತೆ ಕೆಲಸ ನಿರ್ವಹಿಸುವ ಪ್ರವೃತ್ತಿಯ ಗುಣಧರ್ಮವುಳ್ಳ ಬುಧನೂ ಬಲಾಢ್ಯನಿರಬೇಕಲ್ಲದೆ ಸ್ತ್ರೀ ರಾಶಿಯ ಚಂದ್ರನೂ ಅಷ್ಟೇ ಕಾರಕ ಗ್ರಹನಾಗುವನು.

ಲಗ್ನ : ಲಗ್ನದ ದೃಷ್ಟಿಯಲ್ಲಿ ಪರಿಶೀಲಿಸಲಾಗಿ ಸ್ಥಿರ ಹಾಗೂ ಪೃಥ್ವಿಯ ರಾಶಿಯ ಲಗ್ನಗಳೇ ಹೆಚ್ಚಾಗಿರುವದು ಕಂಡುಬರುತ್ತದೆ.

ರಾಶಿ : ಸ್ತ್ರೀ ರಾಶಿಯೇ ಹೆಚ್ಚಾಗಿರುವದು ಕಂಡುಬರುತ್ತದೆ.

ಸ್ಥಾನ : ಖಾತೆಯ ಸ್ಥಾನವಾದ ದಶಮ ಸ್ಥಾನವೇ ಕಾರಕಸ್ಥಾನವಾಗಿರುವದರಿಂದ ದಶಮ ಸ್ಥಾನದಲ್ಲಿಯ ಗ್ರಹಗಳೂ ಹಾಗೂ ದಶಮೇಶನೂ ಬಲಾಢ್ಯನಿರಬೇಕಾಗುತ್ತದೆ. ಇವರ ಜಾತಕದಲ್ಲಿರುವ ವೈಶಿಷ್ಟ್ಯವೆಂದರೆ ಅನೇಕ ಗ್ರಹಗಳು ಅನುದಿತ ಗೋಲಾರ್ಧದಲ್ಲಿರುವವಲ್ಲದೆ ಲಗ್ನೇಶನೂ ದುರ್ಬಲನಿರುವನು.

### ಸೆಕ್ಷನ್ ಕಂಟ್ರೋಲರ, ಡೆಪ್ಯುಟಿ ಕಂಟ್ರೋಲರ, ಚೀಫಕಂಟ್ರೋಲರ

ಇವರ ಜಾತಕದಲ್ಲಿಯೂ ಸ್ಟೇಶನ್ ಮಾಸ್ತರರ ಜಾತಕದಲ್ಲಿರುವ ಯೋಗಗಳಿದ್ದು ಕಿಂಚಿತ್ ಅಧಿಕ ಯೋಗಗಳಿರುತ್ತವೆ.

ಇವರದು ಕೇವಲ ಸಾರಿಗೆ ಸಂಬಂಧ, ಗಾಡಿಗಳ ಚಲನವಲನ ಮತ್ತು ವೇಳಾಪತ್ರಿಕೆ ವಿಷಯವೇ ಮುಖ್ಯವಾದ್ದರಿಂದ ಪುರುಷ ರಾಶಿಯ ಚಂದ್ರನೂ ಇದ್ದು ರವಿ-ಮಂಗಳರು ಸ್ಥಾನಬಲದವರಿಲ್ಲದೆ ರಾಶಿಬಲದವರಿರುತ್ತಾರೆ. ಇವರ ಜಾತಕದಲ್ಲಿರುವ ವೈಶಿಷ್ಟ್ಯವೆಂದರೆ ಲಾಭೇಶ, ಪಂಚಮೇಶ, ಅಷ್ಟಮೇಶರು ಹೆಚ್ಚು ಬಲಾಢ್ಯರಿರುತ್ತಾರೆ.

ಬ್ರೇಕ್‌ಮನ್, ಅಂಡರಗಾರ್ಡ, ಗಾರ್ಡ, ಟಿ.ಟಿ.ಐ., ಟಿ.ಟಿ.ಇ.

ಇವರ ಜಾತಕದಲ್ಲಿಯೂ ಕೂಡ ಸ್ಟೇಶನ್‌ಮಾಸ್ತರರ ಜಾತಕದಂತೆಯೇ ಯೋಗಗಳಿದ್ದು ಕೆಲವು ಯೋಗಗಳು ಈ ಕೆಳಗಿನಂತಿರುತ್ತವೆ.

(೧) ಚರರಾಶಿಯ ಲಗ್ನವು ಇಲ್ಲವೆ ದ್ವಿಸ್ವಭಾವ ರಾಶಿಯ ಲಗ್ನ ಇರುತ್ತದೆ.

(೨) ಅನೇಕ ಗ್ರಹಗಳು ಲಗ್ನ, ತೃತೀಯ, ಭಾಗ್ಯ, ಸಪ್ತಮ, ವ್ಯಯ ಈ ಸ್ಥಾನಗಳಲ್ಲಿರುವವು.

(೩) ಅನೇಕ ಗ್ರಹಗಳು ವಿಶೇಷವಾಗಿ ರವಿ-ಚಂದ್ರರು ಚರರಾಶಿಯಲ್ಲಿರುವವು.

ಇಂಜಿನ ಕ್ಲೀನರ, ಫಾಯರಮನ್, ಸೆಂಟರ ಡ್ರಾಯವ್ಹರ

ಮೆಕ್ಯಾನಿಕಲ್ ಇಂಜನಿಯರಿಂಗ ವಿಭಾಗದಲ್ಲಿ ಬರುವದರಿಂದ ಇವರ ಜಾತಕದಲ್ಲಿ ಗಾರ್ಡ, ಅಂಡರ ಗಾರ್ಡರಂತೆಯೇ ಯೋಗಗಳಿದ್ದು, ಕೆಲ ಭಿನ್ನ ಯೋಗಗಳು ಈ ಕೆಳಗಿನಂತೆ ಇರುತ್ತವೆ.

ಶನಿ-ಮಂಗಳರು ಹೆಚ್ಚು ಬಲಾಢ್ಯರಿದ್ದು ರವಿ, ಗುರು, ಬುಧರು ದುರ್ಬಲರಿರುತ್ತಾರೆ. ಚಂದ್ರನು ಹಾಗು ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುತ್ತವೆ.

೨) ಕಮರ್ಷಿಯಲ್ ವಿಭಾಗ :

ಬುಕಿಂಗ ಕ್ಲಾರ್ಕ, ಗೂಡ್ಸ ಕ್ಲಾರ್ಕ, ಟಿಕೆಟ ಕಲೆಕ್ಟರ : ಈ ಮೊದಲಾದ ಜನರು ಹೆಚ್ಚಾಗಿ ಕಾರಕೂನರೇ ಇರುವದರಿಂದ ಕಾರಕೂನಿಕೆಯ ಯೋಗಗಳೇ ಇವರ ಜಾತಕದಲ್ಲಿರುವವು. ಇದಕ್ಕಾಗಿ ೩ನೆಯ ಪ್ರಕರಣ ನೋಡಿರಿ.

ಇಂಜನಿಯರಿಂಗ ವಿಭಾಗ : ಇದರಲ್ಲಿ ಮೂರು ವಿಭಾಗಗಳಿವೆ. ;

(೧) ರೇಲ್ವೆ ಪಿ. ಡಬ್ಲೂ. ಡಿ.
(೨) ಮೆಕ್ಯಾನಿಕಲ್ ವಿಭಾಗ
(೩) ಇಲೆಕ್ಟ್ರಿಕಲ್ ಇಂಜನೀಯರಿಂಗ ವಿಭಾಗ

೧) ರೇಲ್ವೆ ಪಿ. ಡಬ್ಲ್ಯು. ಡಿ. : ರೇಲ್ವೆ P. W. D. ಯಲ್ಲಿಯ ಗ್ಯಾಂಗಮನ್, ಕೀಮನ್, ಎ. ಪಿ. ಡಬ್ಲ್ಯು. ಐ., ಪಿ. ಡಬ್ಲ್ಯು. ಡಿ. ಐ. ಈ ಮೊದಲಾದ ಕೆಲಸಗಾರರಿಗೆ ಯೋಗಗಳು ಸಾರ್ವಜನಿಕ ಖಾತೆಯ ಮೇಸ್ತ್ರಿ, ಮುಕಾದಮರ ಯೋಗಗಳಂತೆಯೇ ಇರುವವು.

Assistant Engineers, Executive, Engineers
Chief Engineer.

ಇವರ ಜಾತಕದಲ್ಲಿಯೂ ಕೂಡ ಸಾರ್ವಜನಿಕ ಖಾತೆಯಲ್ಲಿಯ ಈ ಹುದ್ದೆಗಳ ಯೋಗಗಳಿದ್ದು ಕೆಲವು ಭಿನ್ನ ಯೋಗಗಳು ಈ ಕೆಳಗಿನಂತೆ ಇರುತ್ತವೆ :

(೧) ಮಂಗಳನಿಗಿಂತ ಶನಿಯೇ ಬಲಾಢ್ಯನಿರುತ್ತಾನೆ.
(೨) ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುತ್ತವೆ.
(೩) ರೇಲ್ವೆ ಖಾತೆಯ ಕಾರಕರಾದ ಬುಧ-ಶನಿಯರು ಇತರ ಎಲ್ಲ ಗ್ರಹಗಳಿಗಿಂತ ಬಲಾಢ್ಯರಿರುತ್ತಾರೆ.

೨) ಮೆಕ್ಯಾನಿಕಲ್ ವಿಭಾಗ :

Chief Mechanical Engineer, Deputy Mechanical Engineer, Divisional Mechenical Engineer.

ಇವರ ಜಾತಕದಲ್ಲಿಯೂ ಕೂಡ ಅಧಿಕಾರಕಾರಕ ಯೋಗ ಹಾಗೂ ಗ್ರಹಗಳೇ ಹೆಚ್ಚಾಗಿರುವವು. (ಇದಕ್ಕಾಗಿ ೩ನೆಯ ಪ್ರಕರಣ ನೋಡಿರಿ).

ಲೊಕೊ ಫಾಯರಮನ್, ಫೋರಮನ್, ಮ್ಯೆಕಾನಿಕ್ ಮೊದಲಾದ ಇತರ ತಾಂತ್ರಿಕ ಸಿಬ್ಬಂದಿಗಳು (ಇವುಗಳಿಗಾಗಿ ೩ನೆಯ ಪ್ರಕರಣದಲ್ಲಿಯ ವಿವರಣೆಯನ್ನು ನೋಡಿರಿ).

ಸಿಗ್ನಲ್ ಮತ್ತು ಟೆಲಿಕಮ್ಯುನಿಕೇಶನ್ ವಿಭಾಗ :

ಸಿಗ್ನಲ್ ಈ ಉಪವಿಭಾಗದ ನೌಕರದಾರರಿಗೆ ಮಂಗಳನೂ, ಟೆಲಿಕಮ್ಯುನಿಕೇಶನ್ ವಿಭಾಗದ ನೌಕರದಾರರಿಗೆ ಬುಧನೂ ಕಾರಕರಾಗುವರು.

ಸಿಗ್ನಲ್ ವಿಭಾಗದ ನೌಕರದಾರರಿಗೆ ತೃತೀಯ ಸ್ಥಾನವೂ, ಟೆಲಿಕಮ್ಯುನಿಕೇಶನ್ ವಿಭಾಗದ ನೌಕರದಾರರಿಗೆ ದ್ವಿತೀಯ, ಪಂಚಮ ಸ್ಥಾನಗಳೂ ಕಾರಕವಾಗಿರುತ್ತವೆ.

ಸಿಗ್ನಲ್ ವಿಭಾಗದ ನೌಕರದಾರರಿಗೆ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನಗಳು ಪೂರಕವಿದ್ದರೆ ಟೆಲಿಕಮ್ಯುನಿಕೇಶನ್ ವಿಭಾಗದ ನೌಕರದಾರರಿಗೆ ವೃಷಭ, ಮಿಥುನ, ಕನ್ಯಾ, ತುಲಾ, ಧನು, ಮಕರ— ಈ ಲಗ್ನಗಳು ಪೂರಕವಾಗುತ್ತವೆ.

ಸಿಗ್ನಲ್ ವಿಭಾಗದ ನೌಕರದಾರರು ಅಗ್ನಿ ಹಾಗೂ ಜಲರಾಶಿಯವರೇ ಹೆಚ್ಚಾಗಿದ್ದರೆ, ಟೆಲಿಕಮ್ಯುನಿಕೇಶನ್ ವಿಭಾಗದ ನೌಕರದಾರರು ಭೂ ಹಾಗು ವಾಯು ರಾಶಿಯವರೇ ಇರುತ್ತಾರೆ.

ಚೀಫ್ ಟೆಲಿಕಮ್ಯುನಿಕೇಶನ್ ಆಫೀಸರ, ಡಿವ್ಹಿಜನಲ್ ಸಿಗ್ನಲ್
ಹಾಗೂ ಟೆಲಿಕಮ್ಯುನಿಕೇಶನ್ ಆಫೀಸರ

ಈ ಮೊದಲಾದ ಆಫೀಸರರಿಗೆ ಬುಧ-ಮಂಗಳರು ಬಲಾಢ್ಯರೂ ಯೋಗಕಾರಕರೂ ಇದ್ದು ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುತ್ತವೆ.

ಪರ್ಸನೆಲ್ ವಿಭಾಗ : ಡಿವ್ಹಿಜನಲ್ ಸುಪರಿಂಟೆಂಡೆಂಟ
ಈ ಮೊದಲಾದ ನೌಕರದಾರರು

ಇವರ ಜಾತಕದಲ್ಲಿ ಈ ಕೆಳಗೆ ಕಾಣಿಸಿದ ಯೋಗಗಳಿರುತ್ತವೆ :

(೧) ಮೇಷ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನಗಳೇ ಹೆಚ್ಚಾಗಿರುವವು.

(೨) ಆಡಳಿತ ಕಾರಕ ಗ್ರಹಗಳಾದ ರವಿ, ಮಂಗಳ, ಗುರು ಇವರು ಸ್ಥಾನಬಲದವರೂ ರಾಶಿಬಲದವರೂ ಇರುತ್ತಾರೆ.

(೩) ನವಮ ಹಾಗೂ ಪಂಚಮ ಸ್ಥಾನಗಳೂ, ಸ್ಥಾನಾಧೀಶರೂ ಬಲಾಢ್ಯರಿರುತ್ತಾರೆ.

**ಸ್ಟೋರ್ಸ ವಿಭಾಗ :** ಈ ವಿಭಾಗದ ನೌಕರದಾರರಿಗಾಗಿ ಮೂರನೆಯ ಪ್ರಕರಣದಲ್ಲಿಯ ವಿವರಣೆ ನೋಡಿರಿ.

**ಸೆಕ್ಯುರಿಟಿ ವಿಭಾಗ :** ಇವರ ಕೆಲಸಗಳು ಪೋಲೀಸ ಖಾತೆಯ ನೌಕರದಾರರಂತಿರುವದರಿಂದ ಪೋಲೀಸ ಖಾತೆಯಲ್ಲಿ ಇದರ ವಿವರಣೆ ಕೊಡಲಾಗಿದೆ.

**ಮೆಡಿಕಲ್ ವಿಭಾಗ :** ವೈದ್ಯಕೀಯ ಹಾಗೂ ಸಾರ್ವಜನಿಕ ಆರೋಗ್ಯ ಖಾತೆಯ ವಿಭಾಗದ ನೌಕರದಾರರಂತೆ ಇವರ ಕಾರ್ಯವಿರುವದರಿಂದ ಆ ವಿಭಾಗದಲ್ಲಿ ವಿವರಣೆ ಕೊಡಲಾಗಿದೆ.

**ಇಲೆಕ್ಟ್ರಿಕಲ್ ಇಂಜಿನಿಯರಿಂಗ ಖಾತೆ :** ಇದರ ವಿವರಣೆಯನ್ನು ಪ್ರತ್ಯೇಕ ವಿಭಾಗವಾದ ಇಲೆಕ್ಟ್ರಿಕಲ್ ಇಂಜಿನಿಯರಿಂಗ ಖಾತೆಯಲ್ಲಿ ಕೊಡಲಾಗಿದೆ.

## ೩. ಅಂಚೆ-ತಂತಿ ಖಾತೆ

### (Post & Telegraph Department)

ಅತ್ಯಧಿಕ ಸಂಖ್ಯೆಯ ನೌಕರರು ಇರುವ ಕೇಂದ್ರ ಸರಕಾರದ ಖಾತೆಗಳಲ್ಲಿ ರೇಲ್ವೆ ಖಾತೆ ಮೊದಲನೆಯದು; ಅಂಚೆ-ತಂತಿ ಖಾತೆ ಎರಡನೆಯದು. ೧೯೬೧ ಮಾರ್ಚ ೩೧ರ ಜನಗಣತಿಯ ಪ್ರಕಾರ ಈ ಖಾತೆಯಲ್ಲಿ ೩,೪೨,೦೩೨ ಮಂದಿ ನೌಕರರಿದ್ದರು. ಈಗಂತೂ ಅಸಂಖ್ಯ ವಿಪರೀತ ಬೆಳೆದಿದೆ.

ಅಂಚೆ ಪದ್ಧತಿ ಭಾರತದಲ್ಲಿ ಶೇರಶಹಾನ ಕಾಲದಿಂದಲೂ ಬಂದಿದೆ. ಪುರಾಣದಲ್ಲಿ ಪಕ್ಷಿಗಳೇ ಅಂಚೆಯ ಸಾಧನಗಳಾಗಿದ್ದ ಬಗ್ಗೆ ಉಲ್ಲೇಖಗಳಿವೆ.

ನಳದಮಯಂತಿಯರ ಪ್ರೇಮಪತ್ರ ವ್ಯವಹಾರವು ಹಂಸ ಪಕ್ಷಿಯ ಮೂಲಕ ನಡೆಯಿತೆಂದು ವರ್ಣಿಸಲಾಗಿದೆ.

ಅಂಚೆ ಪದ್ಧತಿಯನ್ನು ಲಾರ್ಡ ಕ್ಲೈವನು ಭಾರತದಲ್ಲಿ ೧೭೬೬ ರಲ್ಲಿ ಜಾರಿಗೆ ತಂದನು. ಆನಂತರ ವಾರನ್ ಹೇಸ್ಟಿಂಗ್ಸನು ಮತ್ತು ೧೭೭೪ ರಲ್ಲಿ ಲಾರ್ಡ ಡಾಲಹೌಸಿಯು ಈ ಪದ್ಧತಿಯಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದರು.

೧೮೫೨ ರಲ್ಲಿ ಅಂಚೆ ತಿಕೀಟುಗಳು ಕರಾಚಿಯಲ್ಲಿ ಪ್ರಾರಂಭಿಸಲ್ಪಟ್ಟವು. ೧೮೩೦ ರಲ್ಲಿ ಇಂಗ್ಲಂಡ ಮತ್ತು ಭಾರತಗಳ ನಡುವೆ ಅಂಚೆಯ ಕಾರ್ಯವು ಹಡಗಿನ ಮೂಲಕ ಆರಂಭವಾಯಿತು. ೧೮೫೪ ನೇ ಅಕ್ಟೋಬರ ೧ ನೆಯ ತಾರೀಖಿನಂದು ದೇಶದ ಎಲ್ಲ ಕಡೆಗಳಲ್ಲಿ ಅಂಚೆಯ ಕಚೇರಿಗಳು ಆರಂಭಿಸಲ್ಪಟ್ಟವು. ೧೮೬೫ ನೆಯ ಜನೇವರಿ ೨೭ ರಂದು ಇಂಗ್ಲಂಡ ಮತ್ತು ಭಾರತಗಳ ನಡುವೆ ತಂತಿಯ ಸಂಪರ್ಕ ಪ್ರಾರಂಭವಾಯಿತು.

೧೮೭೦ ರಲ್ಲಿ **ಕಲಕತ್ತೆಯಲ್ಲಿ** ಜಿ. ಪಿ. ಓ. ಕಚೇರಿಯು ಸ್ಥಾಪಿಸಲ್ಪಟ್ಟಿತು. ತದನಂತರ ಅಂಚೆ ಶಾಖೆಯಲ್ಲಿ ಅನೇಕ ಅಭಿವೃದ್ಧಿಗಳಾದವು. ೧೮೭೧ ರಲ್ಲಿ ವ್ಹಿ. ಪಿ. ಪದ್ಧತಿಯು ರೂಪುಗೊಂಡು ೧೮೭೭ ರಲ್ಲಿ ಜಾರಿಗೆ ಬಂದಿತು. ೧೮೮೦ರಲ್ಲಿ ರೂಪ ತಾಳಿದ 'ಮನಿ ಆರ್ಡರ' ಪದ್ಧತಿಯು ೧೮೮೮ರಲ್ಲಿ ಜಾರಿಗೆ ಬಂದಿತು. ೧೮೮೫ರಲ್ಲಿ 'ಸೇವ್ಹಿಂಗ್ಸ ಬ್ಯಾಂಕ' ಪದ್ಧತಿಯು ಜಾರಿಯಲ್ಲಿ ತರಲ್ಪಟ್ಟಿತು. ವಿಮಾನದಲ್ಲಿ ಅಂಚೆಯನ್ನು ಸಾಗಿಸುವ ಪದ್ಧತಿ (Air mail Service) ೧೯೧೧ ನೆಯ ಫೆಬ್ರುವರಿ ೧೮ ರಂದು ಜಾರಿಗೆ ಬಂದಿತು.

**ಟೆಲಿಫೋನ :** ಅಂಚೆ ಮತ್ತು ತಂತಿ ಸಾಧನಗಳಿಗಿಂತ ಇಂದು ತೀವ್ರವಾಗಿ ನಾವು ದೇಶದ ಹಾಗೂ ವಿಶ್ವದ ಒಂದು ಮೂಲೆಯಿಂದ ಇನ್ನೊಂದು ಮೂಲೆಯ ವರೆಗೆ ಕೇವಲ ಕೆಲವೇ ನಿಮಿಷಗಳಲ್ಲಿ ವ್ಯೆಯಕ್ತಿಕ ಸಂಪರ್ಕ ಬೆಳೆಸಬಹುದಾಗಿದೆ. ಈ ರೀತಿ ನಾವು ಟೆಲಿಫೋನ ಮೂಲಕ

ಮಾತಾಡಬಹುದಾಗಿದೆ. ೧೮೭೬ರಲ್ಲಿ ಕಂಡುಹಿಡಿಯಲ್ಪಟ್ಟ ಟೆಲಿಫೋನ ವ್ಯವಸ್ಥೆ ಇಂದು ಅಂದರೆ ೧೦೦ ವರ್ಷಗಳಲ್ಲಿ ಕಲ್ಪನಾತೀತವಾಗಿ ಬೆಳೆದು ಇದರ ಉಪಯೋಗವು ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿ ಆಗುತ್ತಿದೆ. ವಿಶ್ವದಲ್ಲಿ ಸಾಧಾರಣವಾಗಿ ಮಧ್ಯಮ ದರ್ಜೆಗಿಂತ ಸ್ವಲ್ಪ ಮೇಲಿರುವ ಪ್ರತಿಯೊಂದು ಕುಟುಂಬದಲ್ಲಿಯೂ, ಪ್ರತಿಯೊಂದು ಸರಕಾರಿ ಮತ್ತು ಖಾಸಗಿ ಕಚೇರಿಗಳಲ್ಲಿಯೂ ವಾಣಿಜ್ಯ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಸಂಘ-ಸಂಸ್ಥೆಗಳಲ್ಲಿಯೂ ಸಹ ಟೆಲಿಫೋನನ್ನು ಕಾಣಬಹುದಾಗಿದೆ.

ಶೋಧವಾದ ಕೇವಲ ೫ ವರ್ಷಗಳಲ್ಲಿ ಅದನ್ನು ಪ್ರಪ್ರಥಮವಾಗಿ ಬಳಕೆಗೆ ತಂದ ರಾಷ್ಟ್ರಗಳಲ್ಲಿ ಭಾರತವೂ ಒಂದು. ೫೧ ಲೈನುಗಳುಳ್ಳ ಭಾರತದ ಟೆಲಿಫೋನ ಕಚೇರಿಯು ಕಲಕತ್ತೆಯಲ್ಲಿ ೧೮೮೧ ರಲ್ಲಿ ಆರಂಭವಾಯಿತು. ೧೯೧೩ ರಲ್ಲಿ ಸಿಮ್ಲಾದಲ್ಲಿ ೭೦೦ ಲೈನುಗಳ ಟೆಲಿಫೋನ ಕಚೇರಿಯು ಸ್ಥಾಪಿಸಲ್ಪಟ್ಟಿತು. ೧೯೪೦ ರ ನಂತರ ಇದೊಂದು ಬೃಹತ್ ಉದ್ಯಮವಾಗಿ ಅಭಿವೃದ್ಧಿ ಹೊಂದಿ ಟೆಲಿಕಮ್ಯುನಿಕೇಶನ್ ವಿಭಾಗದಲ್ಲಿ ದಿನೇ ದಿನೇ ನೂತನ ಸಂಶೋಧನೆಗಳು ಆಗತೊಡಗಿವೆ.

ಫಲಜ್ಯೋತಿಷ್ಯದಲ್ಲಿ ಈ ಖಾತೆಯಲ್ಲಿ ನೌಕರಿಯನ್ನು ಪಡೆಯಲು ಜಾತಕ ಹೇಗಿರಬೇಕು, ಯೋಗಕಾರಕ ಗ್ರಹಗಳಾವವು ಎಂಬುದನ್ನು ಪರಿಶೀಲಿಸುವಾ.

ಕಾರಕ ಗ್ರಹ : ಸುದ್ದಿ, ಪ್ರಸಾರ, ಪ್ರಸರಣ ಇತ್ಯಾದಿ ಸಂಗತಿಗಳಿಗೂ, ಹಣದ ವ್ಯವಹಾರ, ಲೆಕ್ಕಪತ್ರ, ಮಾರಾಟ ಈ ಮೊದಲಾದ ವಿಷಯಗಳಿಗೂ ಬುಧನೇ ಕಾರಕನಿರುವದರಿಂದ ಈ ಖಾತೆಗೂ ಬುಧನೇ ಕಾರಕನಿರುವನು. ಬುಧನು ಬಲಾಢ್ಯನಿರದೆ ಯಾರೂ ಈ ಖಾತೆಯಲ್ಲಿ ಸೇರಲಾರರು.

ಲಗ್ನ : ಲಗ್ನ ದೃಷ್ಟಿಯಿಂದ ನೋಡಿದರೆ ವೃಷಭ, ಮಿಥುನ, ಕನ್ಯಾ, ತುಲಾ, ಮಕರ, ಮೀನ ಈ ಲಗ್ನಗಳು ಪೂರಕವಿರುತ್ತವೆ. ರೆವ್ಹಿನ್ಯೂ ಖಾತೆಯಲ್ಲಿ ತಾಲೂಕಿಗೆ ಒಬ್ಬಿಬ್ಬರು ಅಮಲ್ದಾರರಿದ್ದರೆ ಇಲ್ಲಿ ಜಿಲ್ಹೆಗೆ ಒಬ್ಬಿಬ್ಬ

ಅಮಲ್ದಾರನನ್ನು ಮಾತ್ರ ಕಾಣಬಹುದಾಗಿದೆ. ಈ ದೃಷಿಯಿಂದ ಈ ಖಾತೆಯು ಕಾರಕೂನರದೇ ಎಂದರೂ ತಪ್ಪಾಗಲಿಕ್ಕಿಲ್ಲ. ಆದ್ದರಿಂದ ಈ ಕಾರಕೂನಿಕೆ ಕಾರಕ ಗ್ರಹಗಳಾದ ಬುಧ, ಶುಕ್ರ, ಚಂದ್ರ ಶನಿ ಈ ಗ್ರಹಗಳು ಕಾರಕರಿದ್ದು ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿರುವವು.

ಸ್ಥಾನ : ಸ್ಥಾನದ ದೃಷ್ಟಿಯಿಂದ ನೋಡಿದರೆ ದಶಮ ಸ್ಥಾನವೇ ಕಾರಕಸ್ಥಾನವಿರುವದರಿಂದ ದಶಮೇಶನೂ ಬಲಾಢ್ಯನಿರಬೇಕು.

ಕ್ಲಾರ್ಕ, ಸುಪರವಾಯಜರ, ಹೆಡ್‌ಕ್ಲಾರ್ಕ, A.P.M., U.D.C.

ಈ ಹುದ್ದೆಗಳಲ್ಲಿ ಕೆಲಸವನ್ನು ಮಾಡಲು ಸ್ತ್ರೀ ರಾಶಿಯ ಚಂದ್ರನೂ, ಬಲಾಢ್ಯ ಬುಧನೂ, ಸೇವಾ, ವೃತ್ತಿಕಾರಕನಾದ ಶನಿಯೂ ಯೋಗಕಾರಕರೂ ಬಲಾಢ್ಯರೂ ಇದ್ದು ಮೇಲೆ ಬರೆದ ಲಗ್ನಗಳು ಇರುತ್ತವೆ.

ಪೋಸ್ಟ ಇನಸ್ಪೆಕ್ಟರ : ಜನಸಾಮಾನ್ಯರ ಹಾಗೂ ಸರಕಾರದ ನಡುವೆ ಶುಭ ಸಂಬಂಧವನ್ನು ತರುವ ವ್ಯಕ್ತಿಗಳೆಂದರೆ ಈ ಪೋಸ್ಟ ಇನಸ್ಪೆಕ್ಟರರು. ಒಂದು ರೀತಿಯಿಂದ ನೋಡಿದರೆ ಇವರು ರಾಯಭಾರಿಗಳಿದ್ದಂತೆ. ಪ್ರತಿನಿತ್ಯ ಪ್ರವಾಸ ಮಾಡುತ್ತಿರುವ ಇಂತಹರ ಜಾತಕದಲ್ಲಿ (Out-door executive) ಬುಧನೂ ಜನರ ಸಂಪರ್ಕಕ್ಕಾಗಿ ರವಿಯೂ ಕಾಯದೆ ಕಾರಕನಾದ ಶನಿಯೂ ಬಲಾಢ್ಯರಿರುತ್ತಾರೆ.

ಸ್ಥಾನ ದೃಷ್ಟಿಯಿಂದ ಪ್ರವಾಸ ಸ್ಥಾನಗಳಾದ ತೃತೀಯ, ಸಪ್ತಮ, ಭಾಗ್ಯ, ಲಗ್ನ, ವ್ಯಯ ಈ ಸ್ಥಾನಗಳಲ್ಲಿ ಅನೇಕ ಗ್ರಹಗಳಿದ್ದು ಚರರಾಶಿಯ ಚಂದ್ರನಿರುವನು.

ಪೋಸ್ಟ ಮಾಸ್ತರ : ಬ್ರ್ಯಾಂಚ ಪೋಸ್ಟ ಇರಲಿ, ಸಬ್‌ಪೋಸ್ಟ ಇರಲಿ, ಇಲ್ಲವೆ ಹೆಡ್ ಪೋಸ್ಟೇ ಇರಲಿ, ಎಲ್. ಎಸ್. ಜಿ. ಗ್ರೇಡಿನವರೇ ಇರಲಿ, ಎಚ್.ಎಸ್.ಜಿ. ಗ್ರೇಡಿನವರೇ ಇರಲಿ ಮಾಡುವ ಕಾರ್ಯ ಒಂದೇ ಇರುತ್ತದೆ ಇವರು ಒಂದು ರೀತಿಯಿಂದ ಆಡಳಿತಗಾರರೂ ಲೆಕ್ಕಪತ್ರದ ತಪಾಸಿಗರೂ

ಇತರ ಕೆಲಸಗಾರರ ಮೇಲ್ವಿಚಾರಕರೂ ಇರುವದರಿಂದ ಇವರ ಜಾತಕದಲ್ಲಿ ಆಡಳಿತಕಾರಕನಾದ ರವಿ, ಮಂಗಳರೂ ಲೆಕ್ಕಪತ್ರ ಕಾರಕನಾದ ಬುಧನೂ ಬಲಾಢ್ಯರಿದ್ದು ಮೇಲ್ವಿಚಾರ ಕಾರಕನಾದ ಪುರುಷ ರಾಶಿಯ ಚಂದ್ರನೂ ಬಲಾಢ್ಯರಿರುತ್ತಾರೆ.

ಟೆಲಿಫೋನ ಆಪರೇಟರ, ಫೋನ ಇನಸ್ಪೆಕ್ಟರ : ಇವರ ಜಾತಕದಲ್ಲಿ ಲಗ್ನವು ಸ್ಥಿರರಾಶಿಯದಿದ್ದು ಅನೇಕ ಗ್ರಹಗಳು ಸ್ಥಿರ ರಾಶಿಯಲ್ಲಿಯೂ ಇರುತ್ತವೆ.

ಕಾರಕ ಗ್ರಹಗಳು : ಖಾತೆಯ ಕಾರಕನಾದ ಬುಧನಂತೂ ಬಲಾಢ್ಯನಿದ್ದು, ವಿಜ್ಞಾನಕಾರಕನಾದ ಮಂಗಳನೂ ಸ್ತ್ರೀ ರಾಶಿಯ ಚಂದ್ರನೂ ಕಾರಕರಿರುತ್ತಾರೆ.

ಸ್ಥಾನ : ಸ್ಥಾನ ದೃಷ್ಟಿಯಿಂದ ನೋಡಿದರೆ ದ್ವಿತೀಯ ಸ್ಥಾನವೇ ಮೂಲ ಹಾಗೂ ಮುಖ್ಯವಿರುವದರಿಂದ ದ್ವಿತೀಯ ಸ್ಥಾನದಲ್ಲಿರುವ ಗ್ರಹಗಳು ಬಲಾಢ್ಯರಿರಬೇಕು.

ದ್ವಿತೀಯ ಸ್ಥಾನದಲ್ಲಿ ರಾಹು ಮಂಗಳರಿದ್ದವರು ಈ ಉದ್ಯೋಗಕ್ಕೆ ಕೈಹಾಕದಿರುವದೇ ಒಳಿತು. ದ್ವಿತೀಯ ಸ್ಥಾನದಲ್ಲಿ ಬಲಾಢ್ಯ ಶುಕ್ರ,ಚಂದ್ರ, ಗುರು ಇದ್ದವರು ಜನಪ್ರಿಯರಾಗುವರು.

S.D.O.P., D.E..P, D.E.T , : ಈ ವರ್ಗದ ಜನರಲ್ಲಿ ಖಾತೆಯ ಕಾರಕನಾದ ಬುಧನಂತೂ ಬಲಾಢ್ಯನಿರಲೇಬೇಕು. ಜೊತೆಗೆ ಆಡಳಿತೆಯ ಕಾರಕರಾದ ರವಿ, ಗುರು, ಮಂಗಳರು ಬಲಾಢ್ಯರಿರಬೇಕು.

ಲಗ್ನ : ಈ ಜನರ ಲಗ್ನದೃಷ್ಟಿಯಿಂದ ನೋಡಿದರೆ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

ರಾಶಿ : ಆಡಳಿತಕ್ಕೆ ಪೂರಕಗಳಾದ ಪುರುಷ ರಾಶಿಗಳೇ ಬಲಾಢ್ಯವಿರಬೇಕು.

## R. M. S.

ಮೇಲ್‌ಗಾರ್ಡ್, ಸಾರ್ಟ್ರರ, S.R.C., H.R C., I.R.M. :

ಈ ಮೊದಲಾದ ನವಕರಿ ವರ್ಗದವರಿಗೆ ಪ್ರವಾಸ ಬಹಳವಿರುವದರಿಂದ (Touring) ಇವರ ಜಾತಕದಲ್ಲಿ ಚರರಾಶಿ ಲಗ್ನವಿದ್ದು ಅನೇಕ ಗ್ರಹಗಳು ಲಗ್ನ, ತೃತೀಯ ಸಪ್ತಮ, ಭಾಗ್ಯ, ವ್ಯಯ ಈ ಸ್ಥಾನದಲ್ಲಿರುವವು.

ಕಾರಕ ಗ್ರಹ : ಸುದ್ದಿ ಪತ್ರಗಳ ಕಾರಕನಾದ ಬುಧನೂ, ಸೇವಾ ವೃತ್ತಿಕಾರಕನಾದ ಶನಿಯೂ ಸ್ತ್ರೀ ರಾಶಿಯ ಚಂದ್ರನೂ ಬಲಾಢ್ಯರಿರುತ್ತಾರೆ.

S.P., D.E T., .S.R.M., P.M.G., D.G. : ಈ ಮೊದಲಾದ ಅಧಿಕಾರಿಗಳು I. P. S , ಹುದ್ದೆಯವರಿರುವದರಿಂದ ಇವರ ಜಾತಕದಲ್ಲಿ I.P.S ದ ಯೋಗಗಳಿರಬೇಕು. ಇವುಗಳಿಗಾಗಿ ಇದೇ ಪುಸ್ತಕದಲ್ಲಿ ೩ನೆಯ ಪ್ರಕರಣವನ್ನು ನೋಡಬಹುದು.

ಕೇಂದ್ರ ರೆವಿನ್ಯೂ ಖಾತೆಗಳು :

[Central Board of Revenue]

( i ) ಸುಂಕದ ಖಾತೆ [Customs Department]

( ii ) ಕೇಂದ್ರ ಅಬಕಾರಿ ಖಾತೆ [Central Excise]

(iii ) ವರಮಾನ ತೆರಿಗೆ ಖಾತೆ [Income-Tax Dept]

## ೪. ಸುಂಕದ ಖಾತೆ

ಕಾರಕ ಗ್ರಹ : ಈ ಖಾತೆಯ ನೌಕರಿವರ್ಗದವರ ಕೆಲಸವು ಪೋಲೀಸ್ ಖಾತೆಯ ನೌಕರ ವರ್ಗದವರಂತೆಯೇ ಇರುವುದರಿಂದ ಪೋಲೀಸ್ ಖಾತೆಯ ಕಾರಕನಾದ ಮಂಗಳನೇ ಈ ಖಾತೆಗೂ ಕಾರಕನಾಗುವನು.

ಮಂಗಳನ ತರುವಾಯ ಚಂದ್ರನು ಈ ಖಾತೆಯ ಕಾರಕನಾಗುವನು. ಏಕೆಂದರೆ ಈ ಖಾತೆಯ ನೌಕರರ ಸಂಬಂಧವು ಸಮುದ್ರದ ಸಾಮೀಪ್ಯ,

(ಹಡಗು-ಡೋಣಿಗಳ) ನೀರಿಗೆ ಸಂಬಂಧಿಸಿದ ಉದ್ಯೋಗದಲ್ಲಿ ಬರುವುದರಿಂದ ಚಂದ್ರನು ಈ ಖಾತೆಯ ಕಾರಕನಾಗುವನು.

**ಕಾರಕ ಲಗ್ನ :** ಲಗ್ನ ದೃಷ್ಟಿಯಿಂದ ನೋಡಿದರೆ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನದವರೇ ಹೆಚ್ಚಾಗಿರುವುದು ಕಂಡು ಬರುತ್ತದೆ.

**ಕಾರಕ ಸ್ಥಾನ :** ಈ ಖಾತೆಯ ಕಾರಕಸ್ಥಾನಗಳೆಂದರೆ ಅಷ್ಟಮ ಹಾಗೂ ಸಪ್ತಮ ಸ್ಥಾನಗಳು. ಸುಂಕವನ್ನು ವಸೂಲು ಮಾಡುವುದೇ ಈ ಖಾತೆಯ ಮುಖ್ಯ ಕಾರ್ಯವಿದ್ದು ಸುಂಕವನ್ನು ಕೊಡದೆ ಕಳ್ಳಪೇಟೆಯಿಂದ ರವಾನಿಸಲು ಪೂರಕ ಸ್ಥಾನವಾದ ಅಷ್ಟಮಸ್ಥಾನವೂ, ಅಷ್ಟಮೇಶನೂ ಈ ಅಧಿಕಾರಿಗಳ ಜಾತಕದಲ್ಲಿ ಬಲಾಢ್ಯರಿರುತ್ತಾರೆ.

ಹಡಗುಗಳಿಂದ ಮಾಲನ್ನು ತರಿಸಿಕೊಳ್ಳುವ ಸ್ಥಾನವೆಂದರೆ ಸಪ್ತಮ ಸ್ಥಾನವಿರುವುದರಿಂದ ಸಪ್ತಮೇಶನೂ ಬಲಾಢ್ಯನಿರಬೇಕು. ಸಪ್ತಮೇಶ, ಅಷ್ಟಮೇಷ, ಚಂದ್ರ, ಮಂಗಳ ಇವರು ಬಲಾಢ್ಯರಿರುವ ಜಾತಕದವನು ಯಶಸ್ವೀ ಅಧಿಕಾರಿಯಾಗಬಲ್ಲನು.

**ರಾಶಿ :** ರಾಶಿ ದೃಷ್ಟಿಯಿಂದ ವಿಚಾರಿಸಿದರೆ, ನಿರ್ದಿಷ್ಟವಾದ ರಾಶಿಯವರೇ ಈ ಖಾತೆಯಲ್ಲಿರಬೇಕೆಂಬ ನಿಯಮವಿದೆ. ಏಕೆಂದರೆ ಕಳ್ಳಪೇಟೆ ಸಾಗಾಣಿಕೆಯನ್ನು ತಡೆಯುವುದು ಚಾಣಾಕ್ಷತನದ್ದೂ ಸೂಕ್ಷ್ಮವೂ ಕೌಶಲ್ಯ ಪೂರಿತವಾದುದು ಇರುವುದಲ್ಲದೆ ಈ ಅಧಿಕಾರಿಗಳು ಸಾಹಸಿಗಳೂ, ಧೈರ್ಯವಂತರೂ, ನಿಷ್ಠುರರು, ಮುತ್ಸದ್ದಿಗಳೂ ಕೂಡ ಇರಬೇಕಾಗುತ್ತದೆ. ಈ ಎಲ್ಲ ಗುಣಗಳು ಈ ಕೆಳಕಂಡ ರಾಶಿಯವರಲ್ಲಿ ಕಂಡುಬರುತ್ತವೆ. ವೃಶ್ಚಿಕ, ಮಕರ, ಮಿಥುನ, ತುಲಾ, ಕುಂಭ, ಸಿಂಹ, ಧನು ಈ ರಾಶಿಯವರೇ ಹೆಚ್ಚಾಗಿರುವುದು ಕಂಡುಬರುವುದು.

### ಪ್ರಿವೆಂಟಿವ್ ಆಫೀಸರ್

ಇವರ ಕೆಲಸದಲ್ಲಿ ಸಾಮಾನ್ಯವಾಗಿ ವೃತ್ತಿಗಿಂತ ಮೇಲ್ವಿಚಾರಣೆ ಹಾಗೂ ಆಡಳಿತಗಳೇ ಹೆಚ್ಚು ಪ್ರಧಾನವಿರುವುದರಿಂದ ಇವರ ಜಾತಕದಲ್ಲಿ ಆಡಳಿತ ಕಾರಕ ಗ್ರಹಗಳಾದ ರವಿ, ಗುರು ಇವರು ಸ್ಥಾನಬಲದವರೂ ಯೋಗ ಕಾರಕರೂ ರಾಶಿಬಲದವರೂ ಇದ್ದು ಖಾತೆಯ ಕಾರಕಗ್ರಹಗಳಾದ ಮಂಗಳ, ಚಂದ್ರರು ಕೇವಲ ರಾಶಿಬಲದವರಿರುತ್ತಾರೆ. ಲಗ್ನದ ದೃಷ್ಟಿಯಿಂದ ನೋಡಿದರೆ ಆಡಳಿತ ಕಾರಕಲಗ್ನಗಳೇ ಇವರ ಜಾತಕದಲ್ಲಿ ಹೆಚ್ಚಾಗಿರುವುದು ಕಂಡು ಬರುತ್ತವೆ.

## ೫. ಕೇಂದ್ರ ಅಬಕಾರಿ ಖಾತೆ

ಕಾರಕ ಗ್ರಹ: ಕೇಂದ್ರ ಸರಕಾರವು ವಿಶೇಷವಾಗಿ ಆರ್ಥಿಕ ಮಂತ್ರಿ ಶಾಖೆಯು ನಿರ್ಧರಿಸಿದ, ನಿರೂಪಿಸಿದ ವಸ್ತುಗಳ ಮೇಲೆ ಅಬಕಾರಿ ತೆರಿಗೆಯನ್ನು ವಸೂಲು ಮಾಡುವುವೇ ಈ ಖಾತೆಯ ಮುಖ್ಯ ಕೆಲಸವಿರುವದರಿಂದ ತೆರಿಗೆ ವಸೂಲಿ ಕಾರಕ ಗ್ರಹವಾದ ಮಂಗಳನೇ ಈ ಖಾತೆಗೆ ಕಾರಕನಾಗುವನು.

ವಸ್ತುಗಳ ಮೇಲಿನ ಕರವು ಹೆಚ್ಚಾಗಿ ಕಾರಖಾನೆಯಲ್ಲಿಯೇ ಹೇರಲ್ಪಡುವದರಿಂದ ಕಾರಖಾನೆ ಕಾರಕನಾದ ಶನಿಯೂ ಕೆಲಮಟ್ಟಿಗೆ ಕಾರಕನಾಗುವನು.

ಕಾರಕ ಸ್ಥಾನ: ಸ್ವಾಭಾವಿಕವಾಗಿ ಉದ್ಯೋಗ ಸ್ಥಾನವಾದ ದಶಮ ಸ್ಥಾನವೇ ಈ ಖಾತೆಯ ಕಾರಕ ಸ್ಥಾನವಾಗುವುದು.

ಲಗ್ನ: ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ, ಮಕರ, ಕುಂಭ ಈ ಲಗ್ನದವರೇ ಹೆಚ್ಚಾಗಿರುವುದು ಕಂಡುಬರುತ್ತದೆ.

ರಾಶಿ: ಇಂತಹ ರಾಶಿಯವರೇ ಈ ಖಾತೆಯಲ್ಲಿರಬೇಕೆಂಬ ನಿಯಮವಿಲ್ಲ.

## ಕಲೆಕ್ಟರ, ಅಸಿಸ್ಟಂಟ ಕಲೆಕ್ಟರ

ಇವರ ಕೆಲಸವು ಮುಖ್ಯವಾಗಿ ವೃತ್ತಿಗಿಂತ ಆಡಳಿತ ಹಾಗೂ ಮೇಲ್ವಿಚಾರಣೆಗಳೇ ಹೆಚ್ಚಾಗಿರುವುದರಿಂದ ಆಡಳಿತ ಕಾರಕನಾದ ರವಿಯು ಮೇಲ್ವಿಚಾರಣೆ ಕಾರಕನಾದ ಗುರುವು ರಾಶಿಬಲ, ಸ್ಥಾನಬಲ, ಯೋಗಕಾರಕರಿದ್ದು, ಖಾತೆಯ ಕಾರಕ ಗ್ರಹಗಳಾದ ಮಂಗಳ-ಶನಿಯರು ಕೇವಲ ರಾಶಿಬಲದವರಿರುತ್ತಾರೆ.

ಇವರ ಜಾತಕದಲ್ಲಿ ದಶಮೇಶನಿಗಿಂತ ಭಾಗ್ಯೇಶನೂ ದಶಮ ಸ್ಥಾನಕ್ಕಿಂತ ಭಾಗ್ಯಸ್ಥಾನವೂ ಬಲಾಢ್ಯವಿದ್ದು ಆಡಳಿತ ಪೋಷಕ ಲಗ್ನಗಳಾದ ಮೇಷ, ಕರ್ಕ, ಸಿಂಹ, ಧನು, ವೃಶ್ಚಿಕ, ಮಿಥುನ, ಮೀನ ಈ ಲಗ್ನಗಳೇ ಹೆಚ್ಚಾಗಿರುತ್ತವೆ.

## ಸುಪರಿಂಟೆಂಡೆಂಟ, ಡೆಪ್ಯೂಟಿ ಸುಪರಿಂಟೆಂಡೆಂಟ

ಇವರು ಆಡಳಿತಗಾರರೂ, ಮೇಲ್ವಿಚಾರಕರೂ ಇರುವರಲ್ಲದೆ ಸ್ವತಃ ಕೆಲಸವನ್ನು ನಿರ್ವಹಿಸಬಲ್ಲ ಅಧಿಕಾರಿಗಳೂ ಇರುತ್ತಾರೆ. ಇವರ ಜಾತಕವನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕಾಗುತ್ತದೆ. ಇವರ ಜಾತಕದಲ್ಲಿ ರವಿ-ಗುರು ಕೇವಲ ರಾಶಿಬಲದವರಿದ್ದು ಶನಿ-ಮಂಗಳರು ರಾಶಿಬಲದವರೂ, ಸ್ಥಾನಬಲದವರೂ ಯೋಗಕಾರಕರೂ ಇದ್ದು ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುತ್ತವೆ.

ಇವರ ಜಾತಕದಲ್ಲಿರುವ ವೈಶಿಷ್ಟ್ಯವೆಂದರೆ ಭಾಗ್ಯೇಶನಿಗಿಂತ ದಶಮೇಶನೇ ಬಲಾಢ್ಯನಿರುತ್ತಾನೆ. ದಶಮೇಶ ಹಾಗೂ ಶನಿ, ದಶಮೇಶ ಹಾಗೂ ಮಂಗಳ ಇವರ ಶುಭಯೋಗವಿರುತ್ತದೆ. ಅಷ್ಟಮಸ್ಥಾನವೂ ಅಷ್ಟಮೇಶನೂ ಬಲಾಢ್ಯರಿರುತ್ತಾರೆ.

## ಇನ್ಸಪೆಕ್ಟರ, ಸಬ್ ಇನ್ಸಪೆಕ್ಟರ

ಒಂದು ದೃಷ್ಟಿಯಿಂದ ನೋಡಿದರೆ ಇವರೇ ಈ ಖಾತೆಯ ಬೆನ್ನೆಲುಬು ಇದ್ದಂತೆ. ಇವರದು ಓಡಾಡುವ ಕೆಲಸವೇ ( Out-door executive

work ) ಜಾಸ್ತಿ ಇರುತ್ತದೆ. ಇವರ ಕಾರ್ಯಗಳು ಪೋಲೀಸ ಖಾತೆಯ ಇನ್ಸಪೆಕ್ಟರ, ಸಬ್-ಇನ್ಸಪೆಕ್ಟರ ಹುದ್ದೆಯಂತಿರುವುದರಿಂದ ಆ ಯೋಗಗಳು ಇವರಲ್ಲಿರುವುದು ಕಂಡುಬರುತ್ತದೆ.

ವಿಮೆನ್ ಸರ್ಚರ ( Women Searcher )

ಈ ಹುದ್ದೆಯನ್ನು ನಿರ್ವಹಿಸುವ ಈ ಹೆಣ್ಣು ಮಕ್ಕಳ ಜಾತಕದಲ್ಲಿ ಈ ಕೆಳಕಂಡ ಯೋಗಗಳು ಇರುತ್ತವೆ.

ರವಿ, ಮಂಗಳ, ಗುರು ಈ ಗ್ರಹಗಳು ಬಲಾಢ್ಯರಿದ್ದು ಶುಕ್ರ-ಚಂದ್ರರು ದುರ್ಬಲರೂ ಬುಧ-ಶನಿಯರು ರಾಶಿಬಲದವರಿದ್ದು ಸ್ಥಾನ ಬಲದವರಿಲ್ಲದೆ ಇರುವುದು ಹಾಗೂ ಅನೇಕ ಗ್ರಹಗಳು ವಿಶೇಷವಾಗಿ ಚಂದ್ರನು ಪುರುಷ ರಾಶಿಯಲ್ಲಿರುವುದೆ ಇವರ ಜಾತಕದಲ್ಲಿರುವ ವೈಶಿಷ್ಟ್ಯ.

## ೬. ವರಮಾನ ತೆರಿಗೆ ಖಾತೆ
(Income Tax Department)

ಕಾರಕ ಗ್ರಹ: ಹಣಕಾಸಿನ ಹಾಗೂ ಲೆಕ್ಕಪತ್ರದ ಸಂಬಂಧವಿರುವ ಕಾರಕ ಬುಧನೇ ಈ ಖಾತೆಯ ಕಾರಕಗ್ರಹವೆಂದು ಹೇಳಬಹುದು. ಬುಧನ ತರುವಾಯ ರವಿಗ್ರಹವೂ ಕೂಡ ಕೆಲವಟ್ಟಿಗೆ ಕಾರಕನಾಗುವನು. ಏಕೆಂದರೆ ಸರಕಾರಿ ನೌಕರಿಯ ಕಾರಕನೂ, ವರಿಷ್ಠ ಅಧಿಕಾರಿ ಹುದ್ದೆಗಳ ಕಾರಕನೂ ಇರುವದರಿಂದ ರವಿಯೂ ಕಾರಕನಾಗುವನು. ಆದರೆ ರವಿಯು ಕೇವಲ ರಾಶಿ ಬಲದವನಿದ್ದು, ಸ್ಥಾನಬಲವಿಲ್ಲದವನಿರುತ್ತಾನೆ. ಬುಧನು ರಾಶಿಬಲದವನೂ ಸ್ಥಾನಬಲದವನೂ ಯೋಗಕಾರಕನೂ ಇರುತ್ತಾನೆ.

ರವಿಯ ತರುವಾಯ ಕೆಲವಟ್ಟಿಗೆ ಶನಿಯೂ ಕಾರಕನಾಗುವನು. ಯಾಕಂದರೆ ರೆವಿನ್ಯೂ ( Revenue ) ಕಾರಕನೆಂದರೆ ಶನಿಯು. ಆದರೆ ಶನಿಯೂ ಕೂಡ ರವಿಯಂತೆ ಕೇವಲ ರಾಶಿಬಲದವನಿದ್ದು ಸ್ಥಾನಬಲದವನೂ ಯೋಗಕಾರಕನೂ ಇರಲಾರನು.

ಲಗ್ನ : ಲಗ್ನದ ದೃಷ್ಟಿಯಿಂದ ನೋಡಿದರೆ ವೃಷಭ, ಕನ್ಯಾ,ಮಕರ, ಧನು ಈ ಲಗ್ನಗಳೂ ತದನಂತರ ಮಿಥುನ, ಸಿಂಹ, ವೃಶ್ಚಿಕ ಈ ಲಗ್ನಗಳೂ ಹೆಚ್ಚಾಗಿರುವದು ಕಂಡುಬರುತ್ತದೆ.

ಸ್ಥಾನ: ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಈ ಖಾತೆಯ ಕಾರಕ ಸ್ಥಾನ ಯಾವುದು ಎಂಬುದು ನಿರ್ಧರಿಸುವುದು ಕಠಿಣವೂ ಕ್ಲಿಷ್ಟಕರವೂ ಆದ ಸಮಸ್ಯೆವಿರುತ್ತದೆ.

ವನಮಾನ ತೆರಿಗೆ ಬೀಳುವದು ಅಂದರೆ ಸರಕಾರವು ನಿಯಮಿಸಿದ ಆಂದರೆ (ಗೊತ್ತುಪಡಿಸಿದ) ನಿರ್ದಿಷ್ಟವಾದ ಉತ್ಪನ್ನಕ್ಕಿಂತ ಹೆಚ್ಚಾಗಿರುವವ ರೆಲ್ಲರೂ ವಿಶೇಷವಾಗಿ ವ್ಯಾಪಾರಸ್ಥರು, ಸ್ವತಂತ್ರ ಉದ್ಯೋಗಸ್ಥರು, ಯಾವ ದೊಂದು ಖಾತೆಯ ಹೆಚ್ಚು ಸಂಬಳ ಪಡೆಯುವ ಅಧಿಕಾರಿಗಳು ( Both Private and Govt. Concerns ) ಇರುವರಲ್ಲದೆ ಕಲಾಕಾರರಿಗೂ (Cinema Stars) ಮೊದಲಾದ ಜನರಿಗೂ ಅನ್ವಯಿಸುತ್ತದೆ.

ಜ್ಯೋತಿಷ್ಯ ಶಾಸ್ತ್ರದಲ್ಲಿ ಭಿನ್ನಭಿನ್ನ ಸ್ಥಾನಗಳು ಬೇರೆಬೇರೆ ಪ್ರಕಾರದ ಧನಯೋಗವನ್ನು ಸೂಚಿಸುತ್ತವೆ. ಉದಾಹರಣೆಗೆ: ಕಾರಖಾನೆ, ಗಿರಣಿ ಒಡೆಯರಿಗೆ ಷಷ್ಠ ಹಾಗೂ ದಶಮ ಸ್ಥಾನಗಳು, ಸುಖಜೀವಿಗಳಿಗೂ ಸ್ಥಾವರ ಇಸ್ಟೇಟ, ಜಮೀನ-ಜುಮಲಾ ಮಾಲಕರಿಗೆ, ಒಡೆಯರಿಗೆ, ಚತುರ್ಥ ಸ್ಥಾನವೂ ಪಿತ್ರಾರ್ಜಿತ ಆಸ್ತಿಗೆ ಧನಸ್ಥಾನವೂ ಹೀಗೆ ಭಿನ್ನಭಿನ್ನ ನವಕರದಾರರಿಗೆ ಭಿನ್ನಭಿನ್ನ ಸ್ಥಾನಗಳು ಕಾರಕವಿರುತ್ತವೆ. ಯಾವ ಯಾವ ಸ್ಥಾನಗಳಿಂದ ಯಾವ ಯಾವ ಪ್ರಕಾರದ ಧನಲಾಭವಾಗುತ್ತದೆ ಎಂಬುದನ್ನು ನಮ್ಮ "ಆಕಸ್ಮಿಕ ಧನಯೋಗ" ಎಂಬ ಗ್ರಂಥದಲ್ಲ ವಿವರವಾಗಿ ವಿವೇಚಿಸಲಾಗಿದೆ.

ಯಾರು ಯಾವದೇ ಉದ್ಯೋಗದಿಂದ ದ್ರವ್ಯಾರ್ಜನ ಮಾಡಲಿ. ಅವರ ಸ್ವದ್ರವ್ಯ ಸಂಗ್ರಹ ( ಉಳಿತಾಯಿ ) ಯೋಗವಾಗಲಿ ಸಂಪಾದನೆಯು ಮಟ್ಟಿವು ಆಕರ್ಷಕವುಳ್ಳದ್ದಾಗಲಿ ಇರುವ ಸ್ಥಾನವೆಂದರೆ ಪಂಚಮ ಸ್ಥಾನವು.

ಲಾಭಸ್ಥಾನದಿಂದ ವ್ಯಕ್ತಿಯ ಉಳಿತಾಯ ಹಾಗೂ ಲಾಭದ ಬಗೆಗೆ ಮಾತ್ರ ಹೇಳಲಾಗುವದು. ಆದರೆ ಪಂಚಮ ಸ್ಥಾನದಿಂದ ವ್ಯಕ್ತಿಯ ಸಂಪಾದನೆಯ ಮಟ್ಟವನ್ನು ಹೇಳಲಾಗುವದು. ಉದಾಹರಣೆಗೆ: ಪ್ರತಿ ತಿಂಗಳು ೨೦೦ ರೂಪಾಯಿ ಹಾಗೂ ೫೦೦ ರೂಪಾಯಿ ವರಮಾನವಿರುವ ಕೆಲ ನೌಕರದಾರರು ಮುಂದೆ ೧೦ ವರ್ಷದ ನಂತರ ಈರ್ವರೂ ೧೦,೦೦೦ ರೂ. ಉಳಿತಾಯ ಮಾಡುವರೆಂದು ತಿಳಿಯಿರಿ. ಇಲ್ಲಿ ೨೦೦ ರೂಪಾಯಿ ಗಳಿಸುವ ವ್ಯಕ್ತಿಗೆ ವರಮಾನ ತೆರಿಗೆ ಬೀಳದೆ ೫೦೦ ರೂಪಾಯಿ ಗಳಿಸುವ ವ್ಯಕ್ತಿಗೆ ವರಮಾನ ತೆರಿಗೆ ಬೀಳುವದು. ಮುಂದೆ ೦೦ ವರ್ಷದಲ್ಲಿ ೧೦ ಸಾವಿರ ರೂಪಾಯಿ ಉಳಿತಾಯ ಮಾಡಲು ಜಾತಕದ ಲಾಭಸ್ಥಾನವು ಹಾಗೂ ಲಾಭೇಶನು ಪೂರಕವಿರುತ್ತಾರೆ. ಸಂಪಾದನೆಯ ಮಟ್ಟವು ಮಿಗಿಲಾಗಿರಲು ಲಾಭಸ್ಥಾನವು ಎಷ್ಟೇ ಅನುಕೂಲವಿದ್ದರೂ ಪೂರಕವಾಗದೆ, ಪಂಚಮ ಸ್ಥಾನವು ಹಾಗೂ ಪಂಚಮಾಧೀಶನು ಬಲಾಢ್ಯವಿದ್ದಷ್ಟು ಸಂಪಾದನೆಯ ಮಟ್ಟವು ಮಿಗಿಲಾಗಿರಲು ಸಹಾಯವಾಗುತ್ತವೆ.

ಸಂಪಾದನಾಮಟ್ಟವು ಮಿಗಿಲಾಗಿರದೆ ಯಾರೂ ವರಮಾನ ತೆರಿಗೆ ಕೊಡಲಾರರು. ಯಾರೊಬ್ಬ ವ್ಯಕ್ತಿಯ ಸಂಪಾದನಾ ಮಟ್ಟವು ಹೇಗಿದೆ ಎಂಬುದನ್ನು ಅಳೆಯುವ ಕಾರ್ಯವನ್ನು ಕೈಕೊಂಡಂಥ ಅಥವಾ ಸಂಪಾದನಾ ಮಟ್ಟದ ಮೇಲೆಯೇ ತೆರಿಗೆಯನ್ನು ರೂಪಿಸುವದು ಈ ಖಾತೆಯ ಪ್ರಮುಖ ಉದ್ಯೋಗವಿರುವದರಿಂದ ಈ ಖಾತೆಯ ನಪಕರಿ ವರ್ಗದವರಿಗೆ ಪಂಚಮ ಸ್ಥಾನ ಬಲಾಢ್ಯವಿರದೆ ಈ ಖಾತೆಯಲ್ಲಿ ಸೇರಲಾರರು. ಆದುದರಿಂದ ಖಾತೆಯ ಕಾರಕ ಸ್ಥಾನವೆಂದರೆ ಪಂಚಮಸ್ಥಾನ ಹಾಗೂ ಪಂಚಮಾಧೀಶ ಮತ್ತು ಬುಧನು.

**ರಾಶಿ :** ರಾಶಿದೃಷ್ಟಿಯಿಂದ ವಿಚಾರಿಸಿದರೆ ಇಂಥ ರಾಶಿಯವರೇ ಈ ಖಾತೆಯಲ್ಲಿ ಇರಬೇಕು ಎಂಬ ನಿಯಮವಿರುವದಿಲ್ಲ. ಏಕೆಂದರೆ ಲೆಕ್ಕಪತ್ರದ ಸಂಬಂಧಕ್ಕಾಗಿ ವಾಯು ರಾಶಿಯ ಜನರೂ ಆಡಳಿತಕ್ಕಾಗಿ ಅಗ್ನಿ ರಾಶಿಯವರೂ ತಪಾಸಣೆ ಕೆಲಸಕ್ಕಾಗಿ ಜಲರಾಶಿಯವರೂ ಕಾರಕೂನಿ ಕೆಲಸಕ್ಕಾಗಿ ಪೃಥ್ವಿ ರಾಶಿಯವರೂ ಇರುತ್ತಾರೆ,

ಕಮೀಶನರ, ಡೆ. ಕಮೀಶನರ, ಅಸಿಸ್ಟಂಟ ಕಮೀಶನರ

ಇವರ ಕೆಲಸವು ಪ್ರಾಮುಖ್ಯವಾಗಿ ವೃತ್ತಿಗಿಂತ ಮೇಲ್ವಿಚಾರಣೆ ಹಾಗೂ ಆಡಳಿತಗಳೇ ಹೆಚ್ಚು ಪ್ರಾಧಾನ್ಯವಿರುವದರಿಂದ ಆಡಳಿತಕಾರಕ ಗ್ರಹವಾದ ರವಿಯೂ ಮೇಲ್ವಿಚಾರಣಾಕಾರಕ ಗುರುವೂ ಸ್ಥಾನ ಹಾಗೂ ರಾಶಿ ಬಲದವರಿದ್ದು ಖಾತೆಯ ಕಾರಕಗ್ರಹವಾದ ಬುಧನು ಹಾಗೂ ಪಂಚಮೇಶನು ಕೇವಲ ರಾಶಿಬಲದವರಿದ್ದು ಸ್ಥಾನಬಲದವರಿರುವದಿಲ್ಲ.

ಲಗ್ನದ ದೃಷ್ಟಿಯಿಂದ ನೋಡಿದರೆ ಆಡಳಿತ ಕಾರ್ಯಕ್ಕೆ ಪೋಷಕ ಲಗ್ನಗಳಾದ ಮೇಷ, ಮಿಥುನ, ಕರ್ಕ, ಸಿಂಹ, ಧನು, ವೃಶ್ಚಿಕ, ಮೀನ ಈ ಲಗ್ನಗಳೇ ಹೆಚ್ಚಾಗಿರುತ್ತವೆ.

ಸ್ಥಾನದೃಷ್ಟಿಯಿಂದ ನೋಡಿದರೆ ಕಮೀಶನರ, ಡೆ. / ಅಸಿ ಕಮೀಶನರ ಹುದ್ದೆಗಳು ಅತಿವಿರಳವಿರುವದರಿಂದ ಈ ಹುದ್ದೆಗಳನ್ನು ಪಡೆಯಲು, ಸುದೈವಿಗಳೇ ಇರಬೇಕೆಂದು ಬೇರೆಹೇಳಬೇಕಾಗಿಲ್ಲ. ಆದುದರಿಂದ ಇವರ ಜಾತಕದಲ್ಲಿ ಸುದೈವೀಸ್ಥಾನವಾದ ಭಾಗ್ಯಸ್ಥಾನವೂ ಮತ್ತು ಭಾಗ್ಯೇಶನೂ ಹಾಗೂ ಲಗ್ನೇಶನೂ ಬಲಾಢ್ಯರಿರುತ್ತಾರೆ. ಈ ಹುದ್ದೆಯನ್ನು ಪಡೆಯಲು ಅಗ್ನಿರಾಶಿಯವರು ಇಲ್ಲವೆ ಜಲರಾಶಿಯವರು ಹೆಚ್ಚಾಗಿರುತ್ತಾರೆ.

ಈ ಅಸಿಸ್ಟಂಟ ಕಮಿಶನರರಲ್ಲಿ ಮತ್ತೆ ಎರಡು ವರ್ಗದವರಿರುತ್ತಾರೆ.

(೧) ನ್ಯಾಯದಾನಕ್ಕೆ ಸಂಬಂಧಿಸಿದ ಇಲ್ಲವೆ ಅಪೀಲ ಕಾರ್ಯಕ್ಷೇತ್ರ (Appellate .

(೧) ಆಡಳಿತೆಯ ಕಾರ್ಯಕ್ಷೇತ್ರ (Inspection). ನ್ಯಾಯದಾನದ ಸಂಬಂಧ ಇರುವ ಅಧಿಕಾರಿಗಳಿಗೆ ನ್ಯಾಯದಾನಕಾರಕನಾದ ಗುರುವೂ ಕೇವಲ ಆಡಳಿತೆ ನಿರ್ವಹಿಸುವ ಅಧಿಕಾರಿಗಳಿಗೆ ರವಿಯೂ ಬಲಾಢ್ಯರಿರುತ್ತಾರೆ.

ವರಮಾನ ತೆರಿಗೆಯ ಅಧಿಕಾರಿ (Income-tax Officer)

ಇವರು ಆಡಳಿತೆಗಾರರೂ ಮೇಲ್ವಿಚಾರಕರೂ ಇರುವರಲ್ಲದೆ, ಸ್ವತಃ ಕೆಲಸವನ್ನು ನಿರ್ವಹಿಸಬಲ್ಲ ಅಧಿಕಾರಿಗಳೂ ಇರುತ್ತಾರೆ. (Both official and out-door exceutive work). ಆದುದರಿಂದ ಇಂತಹ ಹುದ್ದೆಗಳಲ್ಲಿ ಕೆಲಸಮಾಡುವವರ ಜಾತಕದಲ್ಲಿ ಗ್ರಹಗಳ ಸ್ಥಾನಗಳನ್ನು ಬಹು ಸೂಕ್ಷ್ಮವಾಗಿ ಪರಿಶೀಲಿಸಬೇಕಾಗುತ್ತದೆ. ಇವರ ವೃತ್ತಿ ಆಡಳಿತ-ಮೇಲ್ವಿಚಾರಣೆ ಇರುವದಲ್ಲದೆ ಇವರು I. R. S. ಅಧಿಕಾರಿಗಳು ಇರುವ ಕಾರಣ. I. R. S. ದ ಯೋಗಗಳು ಇವರ ಜಾತಕದಲ್ಲಿ ಇರುವದಲ್ಲದೆ ಆಡಳಿತೆ ಹಾಗು ಮಾನಮರ್ಯಾದೆ ಕಾರಕ ಗ್ರಹಗಳಾದ ರವಿ–ಗುರು ಇವರು ಬಲಾಢ್ಯರಿರುವರಲ್ಲದೆ ಖಾತೆಯ ಕಾರಕನಾದ ಬುಧನೂ ವೃತ್ತಿ ಕಾರಕನಾದ ಪಂಚಮೇಶನೂ ಬಲಾಢ್ಯರಿದ್ದು ಭಾಗ್ಯೇಶ ಹಾಗೂ ಲಾಭೇಶರೂ ಕೂಡ ಬಲಾಢ್ಯರಿರಬೇಕು.

ರಾಶಿದೃಷ್ಟಿಯಿಂದ ನೋಡಲಾಗಿ ಅನೇಕ ಗ್ರಹಗಳು ವಿಶೇಷವಾಗಿ ಚಂದ್ರನು ಪುರುಷ ರಾಶಿಯಲ್ಲಿರುತ್ತಾನೆ ಮತ್ತು ಅನೇಕ ಗ್ರಹಗಳು ಹೆಚ್ಚಾಗಿ ಲಗ್ನ, ತೃತೀಯ, ಭಾಗ್ಯ, ಸಪ್ತಮ ಈ ಸ್ಥಾನಗಳಲ್ಲಿ ಇರುತ್ತವೆ.

ಇನ್ಸಪೆಕ್ಟರ (Inspector) : ಒಂದು ದೃಷ್ಟಿಯಿಂದ ನೋಡಿದರೆ ಖಾತೆಯ ಬೆನ್ನೆಲುಬು ಎಂದರೆ ಈ ಹುದ್ದೆಗಳ ನೌಕರರೇ ಇರುವರೆಂದರೆ ತಪ್ಪಾಗಲಿಕ್ಕಿಲ್ಲ. ಆದುದರಿಂದ ಇವರ ಜಾತಕದಲ್ಲಿ (Inspector) ಹುದ್ದೆಯ ( ವೃತ್ತಿಯ ) ಕಾರಕಗ್ರಹವಾದ ಮಂಗಳನೂ (Inspector) ವ್ಯಕ್ತಿಯ ಕಾರಕ ರಾಶಿಗಳಾದ ಪುರುಷ ರಾಶಿಗಳ ಚಂದ್ರನೂ ಬಲಾಢ್ಯ ಇರುವರಲ್ಲದೆ ಖಾತೆಯ ಕಾರಕನಾದ ಬುಧನೂ ವೃತ್ತಿ ಕಾರಕನಾದ ಪಂಚಮೇಶನೂ ಬಲಾಢ್ಯರಿರುತ್ತಾರೆ. ಅನೇಕ ಗ್ರಹಗಳು ಪುರುಷ ರಾಶಿಯಲ್ಲಿ ಇರುತ್ತವೆ.

ಈ ಹುದ್ದೆಯ ನೌಕರ ವರ್ಗದವರಿಗೆ ಆಡಳಿತ ಹುದ್ದೆಗಳ ವರಿಷ್ಠ ಅಧಿಕಾರಿಗಳಾಗಲು ಸೌಲಭ್ಯವಿರುವದರಿಂದ ( Promotions through

Departmental Examinations) ಖಾತೆಯ ಕಾರಕಗ್ರಹವಾದ ಬುಧನೂ ಹಾಗು ಪಂಚಮಾಧೀಶರೂ ಹೆಚ್ಚು ಬಲಾಢ್ಯರೂ ಯೋಗಕಾರಕರೂ ಇದ್ದುದು ಕಂಡುಬರುತ್ತದೆ.

ಅನೇಕ ಗ್ರಹಗಳು ಅನುದಿತ ಗೋಲಾರ್ಧದಲ್ಲಿಯೂ ಲಗ್ನ, ತೃತೀಯ, ಸಪ್ತಮ, ಭಾಗ್ಯ ಈ ಸ್ಥಾನಗಳಲ್ಲಿಯೂ ಹೆಚ್ಚಾಗಿರುತ್ತವೆ.

ಖಾತೆಯ ಇತರ ಕಾರಕೂನ ವರ್ಗ (Ministerial) : ರವಿ, ನ್ಯಾ ಖಾತೆಯ ನೌಕರದಾರರಂತೆ ಈ ಖಾತೆಯ ಕಾರಕೂನರಿಗೆ ಮೇಲಾಧಿಕಾರಿಗಳಾಗುವ ಸೌಲಭ್ಯವಿರುವುದರಿಂದ ಇವರ ಜಾತಕದಲ್ಲಿ ದಶಮೇಶನೂ ಪಂಚಮೇಶನೂ ಹಾಗೂ ಖಾತೆಯ ಕಾರಕಗ್ರಹವಾದ ಬುಧನೂ ಬಲಾಢ್ಯರಿರುತ್ತಾರೆ.

ಕಾರಕೂನಿಕೆಯಿಂದ ಮೇಲಾಧಿಕಾರಿಗಳಾಗುವ ಎಲ್ಲ ಯೋಗಗಳೂ ಇವರ ಜಾತಕಗಳಲ್ಲಿರುತ್ತವೆ. ಇದನ್ನು ಹಿನೆಯ ಪ್ರಕರಣದಲ್ಲಿ ವಿವರವಾಗಿ ವಿವೇಚಿಸಲಾಗಿದೆ.

## ೭ ವಾಯುಮಾರ್ನೋಡ್ಡಾಣ ಖಾತೆ

(Civil Aviation Department)

ಈ ಖಾತೆಯು ಭಾರತದಲ್ಲಿ ಇತ್ತೀಚೆಗೆ ಬೆಳೆದುಬಂದಿದೆ. ಅದರಲ್ಲಿಯೂ ಭಾರತವು ಸ್ವಾತಂತ್ರ್ಯ ಪಡೆದ ನಂತರ ಈ ಖಾತೆಗೆ ಮತ್ತಿಷ್ಟು ಮಹತ್ವ ಪ್ರಾಪ್ತವಾಗಿದೆ ಎನ್ನಲು ಅಡ್ಡಿಯಿಲ್ಲ. ವೈಮಾನಿಕ ಯುಗದ ಇಂದಿನ ಕಾಲದಲ್ಲಿ ಸದಾ ಬೆಳವಣಿಗೆಗಾಗಿ ಅವಶ್ಯವಾದ ಸಿಬ್ಬಂದಿ, ವಿಮಾನ ನಿಲ್ದಾಣ ರಚನೆ, ವಿಮಾನಗಳಿಗೆ ಅವಶ್ಯವಾದ ಲೈಸೆನ್ಸ ನೀಡುವುದು, ವೈಮಾನಿಕನಿಗೆ ಲೈಸನ್ಸ ನೀಡುವುದು, ಅಪಘಾತ ವಿಚಾರಣೆ ಮೊದಲಾದ ಹೊಣೆಗಾರಿಕೆಗಳಿಗೆ ಈ ಖಾತೆ ಮೀಸಲಾಗಿರಿಸಲ್ಪಟ್ಟಿದೆಯೆಂದು ಹೇಳಲಾಗಿದೆ.

ಇಡೀ ಖಾತೆಯು ಡೈರೆಕ್ಟರ್ ಜನರಲ್ ಆಫ ಸಿವ್ಹಿಲ್ ಎವಿಯೇಷನ್ ಎಂಬ ಉಚ್ಚ ಅಧಿಕಾರಿಯ ಮೇಲ್ವಿಚಾರಣೆಯಲ್ಲಿ ತನ್ನ ಕಾರ್ಯವನ್ನು ನಿರ್ವಹಿಸುತ್ತದೆ. ಈ ಅಧಿಕಾರಿಯ ಸಹಾಯಕ್ಕೆಂದು ಡೆಪ್ಯುಟಿ ಡೈರೆಕ್ಟರ್ಸ, ಜನರಲ್ ಡೈರೆಕ್ಟರ್ಸ, ಆಸಿಸ್ಟಂಟ ಡೈರೆಕ್ಟರ್ಸ ಮೊದಲಾದ ಅಧಿಕಾರಿಗಳು ಕೆಲಸ ನಿರ್ವಹಿಸಲು ನಿಯಮಿಸಲ್ಪಟ್ಟಿರುತ್ತಾರೆ.

೧೯೫೨ರ ಅಂಕಿ-ಅಂಶಗಳ ಪ್ರಕಾರ ಈ ಖಾತೆಯಲ್ಲಿ ೬,೦೫೬ ಜನರು ಕೆಲಸದಲ್ಲಿದ್ದರೆಂದು ತಿಳಿದುಬಂದಿದೆ. ಈಗಂತೂ ಆ ಸಂಖ್ಯೆ ಬಹಳ ಬೆಳೆದಿದೆ. ಈ ಖಾತೆ ಬಹಳ ಮಟ್ಟಿಗೆ ತಾಂತ್ರಿಕವಾಗಿರುವುದರಿಂದಲೂ ವಾಯುಮಾನಕ್ಕೆ ಹೆಚ್ಚು ಸಂಬಂಧಿಸಿದ್ದಾಗಿಯೂ ಇರುವುದರಿಂದ ಈ ಖಾತೆಯ ಕಾರಕಗ್ರಹಗಳನ್ನು ವಿಚಾರಿಸುವಾಗ ಜ್ಯೋತಿಷ್ಯದ ಹಿನ್ನೆಲೆಯಲ್ಲಿ ಈ ಕೆಲಸದ ಕಲ್ಪನೆಯನ್ನು ಅವಶ್ಯ ತೆಗೆದುಕೊಳ್ಳಬೇಕಾಗುತ್ತದೆ.

**ಕಾರಕಗ್ರಹ :** ಈ ವಾಯುಮಾನೋಡ್ಡಾಣಕ ಖಾತೆಗೆ ಮಂಗಳನೇ ಕಾರಕನಾಗುವನು. ಆದುದರಿಂದ ಮಂಗಳನು ಯೋಗಕಾರಕನೂ ಬಲಾಢ್ಯನೂ ಆಗಿರಬೇಕು.

**ಸ್ಥಾನ :** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ನವಮ ಸ್ಥಾನವೇ ಈ ಖಾತೆಯ ಕಾರಕಸ್ಥಾನವಾಗುವದರಿಂದ ನವಮೇಶನೂ ಬಲಾಢ್ಯನಿರಬೇಕು.

**ಲಗ್ನ :** ವಾಯುರಾಶಿಗಳೇ ನವಮ ಸ್ಥಾನದಲ್ಲಿರಬೇಕಾಗಿರುವುದರಿಂದ ಮಿಥುನ, ತುಲಾ, ಕುಂಭ ಈ ಲಗ್ನಗಳೂ ತದನಂತರ ಮೇಷ, ಕರ್ಕ, ಸಿಂಹ, ಧನು ಈ ಲಗ್ನಗಳೂ ಪೂರಕಗಳಾಗುತ್ತವೆ.

**ರಾಶಿ :** ಈ ಖಾತೆಯಲ್ಲಿ ಕೆಲಸ ಮಾಡಲು ಇಂತಹ ರಾಶಿಯವರೇ ಕೆಲಸ ಮಾಡಬೇಕೆಂಬ ನಿಯಮವಿಲ್ಲದಿದ್ದರೂ ಹೆಚ್ಚಾಗಿ ಪುರುಷರಾಶಿಯವರೇ ಇರುವುದು ಕಂಡುಬರುತ್ತದೆ.

## ಡೈರೆಕ್ಟರ ಜನರಲ್, ಡೆಪ್ಯುಟಿ ಡಾಯರೆಕ್ಟರ ಜನರಲ್, ಡೈರೆಕ್ಟರ್ಸ್

ಇವರು ಈ ಖಾತೆಗಳ ಅತಿ ಉಚ್ಚ ಅಧಿಕಾರಿಗಳಿದ್ದು (Both executive and administrative) ವಿಮಾನ ನಿಲ್ದಾಣಗಳ ಮೇಲ್ವಿಚಾರಣೆ, ವೈಮಾನಿಕ ಸಾರಿಗೆ ಮೇಲ್ವಿಚಾರಣೆ (Air routes) ಮೊದಲಾದವುಗಳ ಹೊಣೆ ಇವರ ಮೇಲೆ ಇರುತ್ತದೆ.

ಯೋಗಗಳು : ಮೇಲ್ವಿಚಾರಣೆ ಹಾಗೂ ಆಡಳಿತೆಯೇ ಪ್ರಾಮುಖ್ಯವಿರುವುದರಿಂದ ಇವರ ಜಾತಕದಲ್ಲಿ ಆಡಳಿತಕಾರಕ ಯೋಗಗಳೇ ಹೆಚ್ಚಾಗಿರುವವು. ಇದನ್ನು ನಾವು ೩ನೇ ಪ್ರಕರಣದಲ್ಲಿ ವಿವೇಚಿಸಿದ್ದೇವೆ.

ಈ ಖಾತೆಯಲ್ಲಿ ವಿಮಾನ ನಿಲ್ದಾಣದ ಮೇಲ್ವಿಚಾರಣೆ ಎಂದು ಪ್ರತ್ಯೇಕ ಮಾಡಿ ಅದರ ಕಕ್ಷೆಯಲ್ಲಿ ಕಂಟ್ರೋಲರ ಆಫ ಏರೋಡ್ರೋಮ ಅನ್ನುವ ಉಚ್ಚ ಅಧಿಕಾರಿಯ ಮೇಲ್ವಿಚಾರಣೆಯಲ್ಲಿ ಆಡಳಿತ ನಡಿಸಲ್ಪಡುತ್ತದೆ. ಇವರಲ್ಲಿ ಏರೋಡ್ರೋಮ ಆಫೀಸರ್ಸ, ಏರೋಡ್ರೋಮ ಅಪರೇಟರ್ಸ, ಟೆಕ್ನಿಕಲ ಅಸಿಸ್ಟಂಟ ರೇಡಿಯೋ ಟೆಕ್ನಿಷಿಯನ್, ರೆಡಿಯೋ ಆಪರೇಟರ ಎಂತಲೂ ಇನ್ಸಪೆಕ್ಟರ್ ವಿಭಾಗದಲ್ಲಿ ಸೀನಿಯರ ಏರಕ್ರಾಫ್ಟ ಇನ್ಸಪೆಕ್ಟರ್ಸ ಮೊದಲಾದ ಕೆಲಸಗಾರರ ವರ್ಗವಿರುತ್ತದೆ.

ಯೋಗಗಳು : ಈ ಎಲ್ಲ ವಿಭಾಗಗಳ ನವಕರದಾರರಿಗೂ ಹಿಂದೆ ಬರೆದ ಎಲ್ಲ ಸಾಮಾನ್ಯ ನಿಯಮಗಳ ಹೊರತಾಗಿ ಈ ಕೆಳಗೆ ಕಂಡ ವಿಶಿಷ್ಟ ಯೋಗಗಳಿರುತ್ತವೆ.

(೧) ವಿಮಾನ ನಿಲ್ದಾಣ ವಿಭಾಗದ ಮೇಲ್ವಿಚಾರಣೆಯ ಅಧಿಕಾರಿಗಳ ಜಾತಕದಲ್ಲಿ ನವಮಸ್ಥಾನವೂ ನವಮೇಶನೂ ರವಿಯೂ ಬಲಾಢ್ಯರಿದ್ದು ಮಂಗಳನಿಗಿಂತ ಶನಿಯೇ ಹೆಚ್ಚು ಬಲಾಢ್ಯನಿದ್ದು ಅನೇಕ ಗ್ರಹಗಳು ಸ್ಥಿರರಾಶಿಯಲ್ಲಿಯೂ ದ್ವಿತೀಯ, ಚತುರ್ಥ, ಪಂಚಮ, ದಶಮ, ಏಕಾದಶ ಈ ಸ್ಥಾನಗಳಲ್ಲಿಯೂ ಇರುತ್ತವೆ.

(೨) ಸಾರಿಗೆ ವಿಭಾಗದಲ್ಲಿ ಕೆಲಸ ಮಾಡುವವರ ಜಾತಕದಲ್ಲಿ ಶನಿಗಿಂತ ಮಂಗಳನು ಬಲಾಢ್ಯನು, ಭಾಗ್ಯೇಶನಿಗಿಂತ ತೃತೀಯೇಶನು ಬಲಾಢ್ಯನು ಇದ್ದು ಅನೇಕ ಗ್ರಹಗಳು ಚರರಾಶಿಯಲ್ಲಿಯೂ ಲಗ್ನ, ತೃತೀಯ, ಸಪ್ತಮ, ಭಾಗ್ಯ ಈ ಸ್ಥಾನಗಳಲ್ಲಿಯೂ ಇದ್ದು ಚಂದ್ರನು ಚರರಾಶಿಯಲ್ಲಿ ಇಲ್ಲವೆ ವಾಯುರಾಶಿಯಲ್ಲಿ ಇರುತ್ತಾನೆ.

(೩) ಇನ್ಸ್‌ಪೆಕ್ಶನ್ ವಿಭಾಗದ ನೌಕರದಾರರಲ್ಲಿ, ಶನಿ-ಮಂಗಳ ರಿಗಿಂತ ಬುಧನು ಬಲಾಢ್ಯನಿದ್ದು ಭಾಗ್ಯೇಶನಿಗಿಂತ ದಶಮೇಶನು ಬಲಾಢ್ಯ ನಿದ್ದು ಅನೇಕ ಗ್ರಹಗಳು ವಾಯುರಾಶಿಯಲ್ಲಿದ್ದು ಚಂದ್ರನು ಕರ್ಕ, ವೃಶ್ಚಿಕ, ಮೀನ, ಮಿಥುನ, ತುಲಾ, ಕುಂಭ ಈ ರಾಶಿಯಲ್ಲಿ ಇರುತ್ತಾನೆ.

## ೮ ವಿಮಾನ ದಳ (Air Force)

ಪ್ರವಾಸದ ಆಧುನಿಕ ಸಾಧನಗಳಲ್ಲಿ ಪ್ರಾಮುಖ್ಯವಾದ ವಿಮಾನದಳ'ದಲ್ಲಿ ನೌಕರಿಗೆ ಸೇರಬಯಸುವವರ ಸಂಖ್ಯೆ ಇತ್ತೀಚೆಗೆ ಬಹಳಷ್ಟು ಹೆಚ್ಚಾಗಿದೆ. ಅಷ್ಟೇ ಹೆಚ್ಚುಮಂದಿ ವಿಮಾನಯಾನವನ್ನು ಕೈಕೊಳ್ಳುತ್ತಿರುವರು. ಪ್ರಪಂಚದ ಬರಡು ಜೀವನದಲ್ಲಿ ಬೇಸತ್ತು ಮನಸ್ಸು ಸದಾ ಕನಸಿನ ಸುಖ ಸಾಮ್ರಾಜ್ಯದಲ್ಲಿ ಹಾರಾಡಲು ಬಯಸುತ್ತಿದ್ದಾಗ ಆದಕ್ಕೆ ಸಾಮರ್ಥ್ಯವಿಲ್ಲದೆ ಕೊನೆಯ ಪಕ್ಷ ದೇಹವಾದರೂ ಕ್ಷಣಕಾಲ ಪಕ್ಷಿಯಂತೆ ನೀಲಗಗನದಲ್ಲಿ ವಿಹರಿಸುವುದನ್ನು ನೋಡಿ ತೃಪ್ತಿಪಡುವ ಬಯಕೆ ಹೊಂದಿದ್ದರೆ ತಪ್ಪೇನು ? ಆಶೆಯೇನೋ ಇದೆ ನಿಜ, ಆದರೆ ಆಶೆ ಈಡೇರುವುದೇ ? ಈ ಆಶೆಯನ್ನು ಹಿಂಬಾಲಿಸಿ ಇನ್ನೂ ಕೆಲವು ಪ್ರಶ್ನೆಗಳು ಬರುವುದುಂಟು.

ವಿಮಾನದಲ್ಲಿ ನೌಕರಿ ಸಿಗುವುದು ನಾವು ಬಯಸಿದಷ್ಟು ಸುಲಭವಲ್ಲ. ಆಯ್ಕೆಗಾಗಿ ನಡೆಯುವ ಪರೀಕ್ಷೆಯಲ್ಲಿ ಉತ್ತೀರ್ಣರಾಗುವ ಬಗ್ಗೆ ಶಂಕೆ ಒಂದು ಕಡೆ, ಉತ್ತೀರ್ಣಗೊಂಡು ಆಯ್ಕೆಯಾದರೂ ಅಂತಹ ಖಾತೆಗಳಲ್ಲಿ ಸಹಜವಾಗಿ ಬರತಕ್ಕ ಅಪಘಾತ ಹಾಗೂ ಆಯುಷ್ಯದ ಕುರಿತಾದ ಚಿಂತೆ

ಮತ್ತೊಂದು ಕಡೆ. ಈ ಚಿಂತೆ ಉದ್ಯೋಗ ಹಿಡಿಯುವವರಿಗಷ್ಟೇ ಅಲ್ಲ, ಅವರ ಮಾತಾ-ಪಿತೃಗಳಿಗೂ, ಅವರ ಧರ್ಮಪತ್ನಿಯರಿಗೂ ಮತ್ತಿತರ ಸಮೀಪ ಬಂಧುಗಳಿಗೂ ಸಹ ಬಿಟ್ಟಿಲ್ಲ. ಇಷ್ಟಲ್ಲದೆ ವಿಮಾನದಳದಲ್ಲಿ ಕೆಲಸ ಮಾಡುತ್ತಿರುವ ವರಗಳ ಬೇಟೆಯಾಡುತ್ತಾ ಬರುತ್ತಿರುವ ಕನ್ಯಾಪಿತೃಗಳ ಸಂಖ್ಯೆಯು ಕಡಿಮೆಯಿಲ್ಲದಿದ್ದರೂ ಅವರಿಗೂ ಚಿಂತೆಯಿರುತ್ತದೆ.

ವಿಮಾನಯಾನವನ್ನು ಕೈಕೊಳ್ಳುವಾಗ ಅಂತಹ ಜನರು ಸರಿಯಾದ ಮುಹೂರ್ತ ಮತ್ತು ಶುಭಾಶುಭಯೋಗಗಳನ್ನೂ ವಿಚಾರಿಸುವರು. ಇವು ಗಳೆಲ್ಲವೂ ಜ್ಯೋತಿಷಿಯು ಪ್ರತಿದಿನವೂ ಬಗೆಹರಿಸಬೇಕಾಗಿರುವ ಸಮಸ್ಯೆ ಗಳಾಗಿರುವುದರಿಂದ ಆ ಬಗೆಗೆ ಸ್ಥೂಲವಾಗಿ ವಿಚಾರಿಸುವಾ.

ಈ ಖಾತೆಗಳು ಇತ್ತೀಚಿನವು; ಆದುದರಿಂದಲೇ ನಮ್ಮ ಪೂರ್ವಜರೂ ಋಷಿ-ಮುನಿಗಳೂ ಈ ವಿಷಯದ ಮೇಲೆ ಹೆಚ್ಚಾಗಿ ಬರೆದುದು ಕಂಡು ಬಂದಿಲ್ಲ.

ವೈಮಾನಿಕ ಪ್ರವಾಸ ಮಾಡಲು ಜಾತಕದಲ್ಲಿ ನಿರ್ದಿಷ್ಟವಾದ ಯೋಗ ಗಳೇ ಇರಬೇಕೆಂದು ನಮಗೆ ಅನಿಸುವುದಿಲ್ಲ. ಮೊದಲನೆ ವರ್ಗದ ತಿಕೀಟು ಕೊಳ್ಳುವ ಸಾಮರ್ಥ್ಯ ಹಾಗೂ ಇಚ್ಛೆ ಇರುವ ಮಹನೀಯರೆಲ್ಲರೂ ಪ್ರವಾಸ ಮಾಡಬಲ್ಲರು.

ಎತ್ತಿನ ಚಕ್ಕಡಿ, ಸೈಕಲ್, ಸ್ಕೂಟರ್, ಕಾರ್, ಮೋಟರ್, ಬಸ್, ಉಗಿಬಂಡಿ, ಹಡಗು ಇವು ಹೇಗೆ ಪ್ರವಾಸದ ಸಾಧನಗಳೋ ಹಾಗೆಯೇ ವಿಮಾನವೂ ಕೂಡ ಪ್ರವಾಸದ ಸಾಧನವು.

ವಿಮಾನ ಯಾನ ಮಾಡಲು ಜಾತಕದಲ್ಲಿ ನಿರ್ದಿಷ್ಟವಾದ ಯೋಗಗಳೇ ಇರಬೇಕು, ವಿಮಾನ ಪ್ರವಾಸ ಎಂದರೆ ಹವೆಯಲ್ಲಿಯ ಪ್ರವಾಸ ಇರುವುದ ರಿಂದ ಜಾತಕದಲ್ಲಿ ವಾಯುರಾಶಿಗಳೇ ಬಲಾಢ್ಯರಿದ್ದು ವಾಯುರಾಶಿಯಲ್ಲಿಯ ಗ್ರಹಗಳೇ ಬಲಾಢ್ಯವಿರಬೇಕೆಂದು ವಿಚಾರಿಸುವುದು ತರ್ಕಬದ್ಧವೂ ಅಲ್ಲ, ವಿಚಾರಶೀಲವೂ ಅಲ್ಲ.

ಉಗಿಬಂಡಿಯಲ್ಲಿ ಪ್ರವಾಸ ಮಾಡುತ್ತಿರುವ ಎಲ್ಲ ವ್ಯಕ್ತಿಗಳಿಗೂ ಅಗ್ನಿ ರಾಶಿಗಳು ಹಾಗೂ ಅಗ್ನಿರಾಶಿಗಳ ಗ್ರಹಗಳೇ ಬಲಾಢ್ಯವಿರುವವೋ ಹೇಗೆ ನಾವೆ, ಹಡಗುಗಳಲ್ಲಿ ಪ್ರವಾಸ ಮಾಡುವ ಎಲ್ಲ ಪ್ರವಾಸಿಕರೂ ಜಲರಾಶಿಗಳು ಪೂರಕವಾಗಿರುವವೋ ಹೇಗೆ ಎಂದು ಪ್ರಶ್ನಿಸಿದರೆ ಉತ್ತರ ದೊರೆಯಲಾರದು.

ಆದರೆ ಒಂದು ಮಾತು ಮಾತ್ರ ನಿಜ. ಯಾವನೊಬ್ಬ ಜಾತಕನು ಸತತ ಸಂಚಾರಿಯಾಗಿದ್ದರೆ, ಪ್ರವಾಸ ಜೀವಿಯಾಗಿದ್ದರೆ, ಸತತ ಪ್ರವಾಸ ಮಾಡುತ್ತಿದ್ದರೆ, ವಿಮಾನದಲ್ಲಿಯೇ ಆಗಲಿ, ಕಾರ್, ಉಗಿಬಂಡಿಯಲ್ಲಿಯೇ ಆಗಲಿ, ಜಹಜ್‌ದಲ್ಲಿಯೇ ಆಗಲಿ ಪ್ರವಾಸ ಮಾಡುತ್ತಿರುವವನ ಜಾತಕದಲ್ಲಿ ಅನೇಕ ಗ್ರಹಗಳು ಭಾಗ್ಯ, ತೃತೀಯ, ಸಪ್ತಮ, ವ್ಯಯ, ಲಗ್ನ ಈ ಸ್ಥಾನ ಗಳಲ್ಲಿ ಇರುವುದಲ್ಲದೆ ಅನೇಕ ಗ್ರಹಗಳು ಚರ ರಾಶಿಯಲ್ಲಿರುತ್ತವೆ.

## ಪೈಲೆಟ್ ಹಾಗು ವೈಮಾನಿಕ ಕೆಲಸಗಾರರು

ಪೈಲೆಟ್, ವೈಮಾನಿಕ ಅಧಿಕಾರಿ, ಹಾಗೂ ವಿಮಾನದಳದಲ್ಲಿ ಕೆಲಸ ಮಾಡುತ್ತಿರುವ ಮತ್ತು ಪ್ರತಿನಿತ್ಯ ವಿಮಾನದೊಂದಿಗೆ ಸಂಬಂಧಬರುವ ಇದೊಂದು ಉಪಜೀವನದ ಯೋಗಗಳಿದ್ದು, ನಿರ್ದಿಷ್ಟವಾದ ಗ್ರಹಗಳೇ ಬಲಾಢ್ಯರಿದ್ದು, ನಿರ್ದಿಷ್ಟವಾದ ಗ್ರಹಗಳೇ ಕಾರಕರಿರುತ್ತಾರೆ.

ಸ್ಥಾನ : ಸ್ಥಾನದೃಷ್ಟಿಯಿಂದ ವಿಚಾರಿಸಿದರೆ, ವೈಮಾನಿಕ ಕೆಲಸ ಗಾರರಿಗೆ ತೃತೀಯ, ಸಪ್ತಮ, ನವಮ ಈ ಸ್ಥಾನಗಳು ಹಾಗೂ ಈ ಸ್ಥಾನಾ ಧೀಶರನ್ನೂ ಪರಿಶೀಲಿಸಬೇಕಾಗುವುದರಿಂದ ಈ ಸ್ಥಾನಾಧೀಶರೂ ಸ್ಥಾನಗಳು ದೋಷಯುಕ್ತರಿರಕೂಡದು.

ರಾಶಿ : ರಾಶಿದೃಷ್ಟಿಯಿಂದ ವಿಚಾರಿಸಿದರೆ ವಾಯುರಾಶಿಗಳಾದ ಮಿಥುನ ತುಲಾ, ಕುಂಭ, ಈ ರಾಶಿಗಳೇ ಈ ಉದ್ಯೋಗದ ಪೂರಕ ರಾಶಿಗಳು.

ಗ್ರಹಬಲ : ವೈಮಾನಿಕ ವಿದ್ಯೆಯಲ್ಲಿ ಕುಶಲತೆಯನ್ನೂ ಪ್ರವೀಣತೆ ಯನ್ನೂ ಹೊಂದಲು ಜಾತಕದಲ್ಲಿ ಮಂಗಳನು ಬಲಾಢ್ಯನಿರಬೇಕು, ಭಾಗ್ಯೇಶ

ಹಾಗೂ ಮಂಗಳನ ಶುಭ ಸಂಬಂಧವಿರಬೇಕು. ಚಂದ್ರನು ವಾಯುರಾಶಿಗಳಲ್ಲಿರಬೇಕು.

**ಲಗ್ನ :** ಪೈಲೆಟ್ ಎಂದು ಕೆಲಸ ಮಾಡುವವರ ಜಾತಕದಲ್ಲಿ ಹೆಚ್ಚಾಗಿ ಮಿಥುನ, ತುಲಾ, ಕುಂಭ ಈ ಲಗ್ನದವರೂ ತದನಂತರ ಮೇಷ, ಸಿಂಹ, ಧನು, ಕರ್ಕ, ವೃಶ್ಚಿಕ ಲಗ್ನಗಳೂ ಅನುಕ್ರಮವಾಗಿ ಕಾರಕ ಲಗ್ನಗಳಾಗುತ್ತವೆ.

**ರಾಶಿ :** ರಾಶಿದೃಷ್ಟಿಯಿಂದ ವಿಚಾರಿಸಿದರೆ ಪುರುಷರಾಶಿಯ ಜನರೇ ಈ ಹುದ್ದೆಗಳಲ್ಲಿ ಹೆಚ್ಚಿನ ದಕ್ಷತೆಯನ್ನು ಹೊಂದುವರು.

## ಪ್ರತಿಕೂಲ ಗ್ರಹಗಳು ಇಲ್ಲವೆ ಅಶುಭ ಯೋಗಗಳು

ವೈಮಾನಿಕ ಖಾತೆಯಲ್ಲಿ ಸೇರಲು ವಿಶೇಷವಾಗಿ, ಪೈಲೆಟ್ ಎಂಬ ಹುದ್ದೆಯನ್ನು ನಿರ್ವಹಿಸಲು ವಿಶಿಷ್ಟ ಯೋಗವಿದ್ದ ಜಾತಕನೇ ದಕ್ಷತೆಯಿಂದ ನಿರ್ವಹಿಸುವನು. ಅಶುಭ ಯೋಗವಿದ್ದ ಜಾತಕನು ಈ ಖಾತೆಯಲ್ಲಿ ಪೈಲಟ್ ಎಂಬ ಹುದ್ದೆಯಲ್ಲಿ ಸೇರುವುದೆಂದರೆ, ತಿಳಿದೂ ತಿಳಿದೂ ಕಂಡೂಕಂಡು ಜೀವನವನ್ನು ಸಂಕಟದಲ್ಲಿ ಕೆಡವಿದಂತಾಗಿದ್ದು ಒಂದು ಬಗೆಯ ಆತ್ಮಹತ್ಯೆಯನ್ನು ಕೈಕೊಳ್ಳುವರೆಂದೇ ಹೇಳಬೇಕಾಗಿದೆ. ಏಕೆಂದರೆ ವಿಮಾನದಲ್ಲಿ ಯಂತ್ರಗಳನ್ನು ಅಧೀನದಲ್ಲಿ ಇಡುವುದಾಗಲಿ ( under control ) ವಿಮಾನದಲ್ಲಿಯ ಯಂತ್ರವನ್ನು ನಡೆಸುದಾಗಲಿ ವಿದ್ಯುಚ್ಛಕ್ತಿಯ ಚಲಿಸುವಿಕೆ ಅಡಚಣೆಗಳಲ್ಲಿ ತಾತ್ಕಾಲಿಕ ರಿಪೇರಿಮಾಡುವುದಾಗಲಿ ಮುಂಜಾಗ್ರತೆ ಹಾಗೂ ಪ್ರಸಂಗಾವಧಾನವನ್ನು ವಹಿಸುವುದಾಗಲಿ ಅತ್ಯಂತ ಮಹತ್ವದ್ದು ಕೌಶಲ್ಯ ಪೂರ್ಣವುಳ್ಳದ್ದು ಇರುವುದಲ್ಲದೆ ಆ ವಿಮಾನದಲ್ಲಿ ಪ್ರವಾಸ ಮಾಡುತ್ತಿರುವ ಎಲ್ಲ ಪ್ರಯಾಣಿಕರ ಜೀವನವೂ ತಮ್ಮ ಕೈಯಲ್ಲಿಯೇ ಇರುವುದೆಂಬುದನ್ನೂ ಕೂಡ ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ಆದುದರಿಂದ ಈ ಕೆಳಗೆ ಕಾಣಿಸಿದ ಅಶುಭಯೋಗಗಳಿದ್ದ ಜಾತಕನು ಪೈಲಟ್ ಹುದ್ದೆಯನ್ನು ಸರ್ವಥಾ ವಹಿಸಕೂಡದು.

೧. ಶನಿ–ಮಂಗಳ ಇವರ ಸಮಸಪ್ತಕ ಇಲ್ಲವೆ ಯುತಿ, ಯೋಗ ಗಳು ಲಗ್ನ, ಸಪ್ತಮ–ಅಷ್ಟಮದಲ್ಲಿದ್ದರೆ—,

೨. ಶನಿ–ಚಂದ್ರರ ಯುತಿ, ಇಲ್ಲವೆ ಶನಿದೃಷ್ಟಿ ಪೂರ್ಣವಿದ್ದ ಚಂದ್ರನು,

೩. ೧, ೬, ೮, ೧೨ ಈ ಸ್ಥಾನಗಳಲ್ಲಿ ಕ್ಷೀಣ ಚಂದ್ರನಿದ್ದು ಲಗ್ನೇಶ, ಅಷ್ಟಮೇಶ, ಷಷ್ಠೇಶರು ದುರ್ಬಲರಿದ್ದು ಶನಿ–ಮಂಗಳರ ಷಡಾಷ್ಟಕವಿದ್ದ ಜಾತಕನು ,

೪. ಮಂಗಳನು ದುರ್ಬಲನಿದ್ದು ಚಂದ್ರನು ಸ್ತ್ರೀ ರಾಶಿಯಲ್ಲಿದ್ದ ಜಾತಕನು,

೫. ಮಂಗಳನು ಬಲಾಢ್ಯನಿದ್ದು ಚಂದ್ರನು ಸ್ತ್ರೀ ರಾಶಿಯಲ್ಲಿದ್ದ ಜಾತಕನು,

೬. ಪುರುಷ ರಾಶಿಯ ಚಂದ್ರನಿದ್ದು ಮಂಗಳ ಹಾಗೂ ಲಗ್ನೇಶನು ದುರ್ಬಲರಿದ್ದರೆ.

## ೯ ಸೈನ್ಯ ಖಾತೆ ( Military )

ಬ್ರಿಟಿಶರ ಕಾಲದಲ್ಲಿ ಡೆಹರಾಡೂನ ಮಿಲಿಟರಿ ಕಾಲೇಜದಲ್ಲಿ ಕೇವಲ ೫–೧೦ ವಿದ್ಯಾರ್ಥಿಗಳನ್ನು ಮಾತ್ರ ಸೇರಿಸಲಾಗುತ್ತಿತ್ತು. ಆಗ ಕೇವಲ ದೊಡ್ಡ ದೊಡ್ಡ ಸಂಸ್ಥಾನಿಕರೂ ಇನಾಮದಾರರೂ ಜಹಗೀರುದಾರರೂ ಸರದೇಸಾಯಿ, ದೇಶಪಾಂಡೆ, ನಾಡಿಗೇರ ಮೊದಲಾದ ಶ್ರೀಮಂತ ಹಾಗೂ ವಶೀಲಿಬಾಜಿ ವರ್ಗದವರಿಗೆ ಮಾತ್ರ ಈ ಕಾಲೇಜಿನಲ್ಲಿ ಪ್ರವೇಶವಿತ್ತು. ಮತ್ತು ಮಿಲಿಟರಿಯಲ್ಲಿ ಭರ್ತಿ ಮಾಡಿಕೊಳ್ಳಲಾಗುತ್ತಿತ್ತು.

ಭಾರತವು ಸ್ವತಂತ್ರವಾದ ಬಳಿಕ ಈ ತರದ ಭೇದಭಾವಗಳನ್ನು ಮಾಡದೆ ಯಾವದೇ ಭಾರತೀಯ ನಾಗರಿಕನು ಸ್ಪರ್ಧೆಯಾಗುವಂತೆ ಅವಕಾಶ ಒದಗಿಸಿಕೊಡಲಾಗಿದೆ.

ಮಿಲಿಟರಿಯಲ್ಲಿ ಆಯ್ಕೆಯಾಗುವದು ಸುಲಭವಿಲ್ಲ. ಆಯ್ಕೆ ಮಾಡುವ ರೀತಿಗಳೇ ಭಿನ್ನವಿರುತ್ತವೆ. ಈ ಉದ್ಯೋಗದಲ್ಲಿ ಸೇರಲು ನಿರ್ದಿಷ್ಟವಾದ ಲಗ್ನ, ಗ್ರಹ, ಸ್ಥಾನ, ರಾಶಿಗಳು ಕಾರಕವಿರುತ್ತವೆ.

**ಕಾರಕ ಗ್ರಹ :** ಸೈನ್ಯ ಖಾತೆಯಲ್ಲಿ ನೌಕರಿ ಮಾಡಲು ಮಂಗಳನು ಕಾರಕನಾಗುತ್ತಾನೆ. ಮಂಗಳನ ತರುವಾಯ ರವಿಯೂ ಕಾರಕನಾಗುವನು. ಏಕೆಂದರೆ ಸದೃಢ ಹಾಗೂ ಧಷ್ಟ ಮುಷ್ಟ ಪ್ರಕೃತಿ ಇರಲು ರವಿಯು ಬಲಾಢ ನಿರಬೇಕಾಗುತ್ತದೆ. ಕಾರಣ ಮಂಗಳ-ರವಿಗಳು ಬಲಾಢ್ಯರಿದ್ದ ವ್ಯಕ್ತಿಗಳು ಈ ಖಾತೆಯಲ್ಲಿ ಅಭ್ಯುದಯ ಹೊಂದುವರು.

ರವಿ–ಮಂಗಳರ ಹೊರತಾಗಿ ಅನೇಕ ಗ್ರಹಗಳನ್ನೂ ಪರಿಶೀಲಿಸ ಬೇಕಾಗುತ್ತದೆ. ಏಕೆಂದರೆ ಸಿವ್ಹಿಲ್ ಸರ್ವಿಸಿನಲ್ಲಿ ಎಷ್ಟು ಖಾತೆಗಳವೆಯೊ ಅಷ್ಟೇ ಖಾತೆಗಳು ಮಿಲಿಟರಿ ಸರ್ವ್ಹಿಸಿನಲ್ಲಿವೆ. ಉದಾ:— ಪೋಸ್ಟ, ಇಂಜನಿಯರಿಂಗ, ಮೆಡಿಕಲ್, ಸಾರ್ವಜನಿಕ ಖಾತೆ ಮುಂತಾದ ಖಾತೆಗಳೂ ಕೂಡ ಈ ಖಾತೆಯಲ್ಲಿ ಇರುವದರಿಂದ ಆ ಖಾತೆಗಳ ಕಾರಕ ಗ್ರಹಗಳನ್ನು ನೋಡಬೇಕಾಗುತ್ತದೆ. ಉದಾ :— ಸೈನ್ಯ ಖಾತೆಯಲ್ಲಿ ಪೋಸ್ಟ ಖಾತೆ ಇದೆ ಎಂದು ತಿಳಿಯಿರಿ. ಪೋಸ್ಟ ಖಾತೆಯ ಕಾರಕ ಗ್ರಹವಾದ ಬುಧನನ್ನು ಮಿಲಿಟರಿ ಖಾತೆಯ ಗ್ರಹಗಳಾದ ಮಂಗಳ–ರವಿಯೊಂದಿಗೆ ಪರಿಶೀಲಿಸಬೇಕು. ಇಲ್ಲಿ ಬುಧನು ಕೇವಲ ರಾಶಿಬಲದವನಿದ್ದು ಮಂಗಳನು ಸ್ಥಾನಬಲದವನೂ ರಾಶಿ ಬಲದವನೂ ಯೋಗಕಾರಕನೂ ಇರುತ್ತಾನೆ. ಇದರಂತೆಯೇ ಭಿನ್ನ ಭಿನ್ನ ಖಾತೆಗಳ ಕಾರಕ ಗ್ರಹಗಳೊಂದಿಗೆ ಮಂಗಳನನ್ನೂ ಪ್ರಾಮುಖ್ಯವಾಗಿ ಪರಿಶೀಲಿಸಬೇಕು.

**ಕಾರಕ ಸ್ಥಾನ :** ಮಿಲಿಟರಿ ಕಾರಕ ಸ್ಥಾನವೆಂದರೆ ತನು ಸ್ಥಾನವೇ ಮುಖ್ಯ ಸ್ಥಾನವು. ಏಕೆಂದರೆ ಮಿಲಿಟರಿಯಲ್ಲಿ ಆಯ್ಕೆಯಾಗುವಾಗ ಉಮೇದು ವಾರರ ಶಿಕ್ಷಣ, ಪದವಿ ಗಳಗಿಂತ ದೈಹಿಕಸ್ಥಿತಿ, ವಯೋಮಾನ, ವ್ಯಕ್ತಿಮತ್ವ (Personality) ಈ ಎಲ್ಲ ಸಂಗತಿಗಳಿಗೆ ಹೆಚ್ಚು ಪ್ರಾಮುಖ್ಯತೆ ಇರುವ

ದರಿಂದ ಜಾತಕದ ತನುಸ್ಥಾನವೇ ಕಾರಕವಿರುತ್ತದೆ. ಲಗ್ನೇಶನು ಬಲಾಢ್ಯ ನಿದ್ದಷ್ಟು (ತನುಸ್ಥಾನದಲ್ಲಿರುವ ಗ್ರಹ) ವ್ಯಕ್ತಿಯ ವ್ಯಕ್ತಿಮತ್ವವು ಕಂಡುಬರುತ್ತದೆ. ತನುಸ್ಥಾನದ ನಂತರ ದಶಮವೂ ಕಾರಕವಾಗುತ್ತದೆ. ಆದುದರಿಂದ ಲಗ್ನೇಶ, ದಶಮೇಶ, ಮಂಗಳ, ರವಿ ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದ ಜಾತಕನು ಈ ಖಾತೆಯಲ್ಲಿ ಅಭ್ಯುದಯ ಹೊಂದುವನು.

ಲಗ್ನ: ಮಿಲಿಟರಿ ಖಾತೆಯಲ್ಲಿ ಕೆಲಸ ಮಾಡಲು ಎಲ್ಲರಿಗೂ ಸಾಧಿಸದು. ಆದುದರಿಂದ ನಿರ್ದಿಷ್ಟವಾದ ಲಗ್ನಗಳೇ ಇರಬೇಕೆಂಬ ನಿಯಮವಿದೆ. ಮೇಷ, ಸಿಂಹ, ಧನು, ಕರ್ಕ, ವೃಶ್ಚಿಕ, ಮಕರ ಈ ಲಗ್ನಗಳೇ ಹೆಚ್ಚಾಗಿರುವುದು ಕಂಡುಬರುತ್ತದೆ.

ರಾಶಿ : ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟವಾದ ರಾಶಿಯವರೇ ಇರಬೇಕೆಂಬ ನಿಯಮವಿದೆ. ಮೇಷ, ಸಿಂಹ, ತುಲಾ, ಮಿಥುನ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರೇ ಹೆಚ್ಚಾಗಿರುವದು ಕಂಡು ಬರುತ್ತದೆ.

ಮಿಲಿಟರಿಯಲ್ಲಿ ಮತ್ತೆ ಮೂರು ವಿಭಾಗಗಳಿವೆ.

ಆರ್ಮಿ, ನೇವ್ಹಿ, ಏರಫೋರ್ಸ ಹೀಗೆ ಮೂರು ವಿಭಾಗಗಳಿವೆ. ಈ ಮೂರು ವಿಭಾಗಗಳಿಗೂ ಹಿಂದ ಬರೆದ ಸಾಮಾನ್ಯ ನಿಯಮಗಳ ಹೊರತಾಗಿ ಕೆಲ ವಿಶಿಷ್ಟ ಗ್ರಹಯೋಗಗಳೇ ಕಾರಕವಿರುತ್ತವೆ.

(೧) ಆರ್ಮಿ : ಮಂಗಳನ ಹೊರತಾಗಿ ರವಿಯೂ ಮತ್ತು ಪುರುಷ ರಾಶಿಯ ಚಂದ್ರನೂ ಬಲಾಢ್ಯನಿಂಬೇಕಲ್ಲದೆ ಲಗ್ನೇಶನ ಹೊರತಾಗಿ ದಶಮೇಶನೂ ದಶಮಸ್ಥಾನವೂ ಬಲಾಢ್ಯವಿರಬೇಕು.

(೨) ನೇವ್ಹಿ : ನೇವ್ಹಿಯಲ್ಲಿ ಮಂಗಳನಿಗಿಂತ ಚಂದ್ರನೇ ಹೆಚ್ಚು ಬಲಾಢ್ಯನೂ ಯೋಗಕಾರಕನೂ ಇದ್ದು ಮಂಗಳನು ಕೇವಲ ರಾಶಿ ಬಲ ದವನಿರುತ್ತಾನೆ. ರವಿಯು ಬಲಾಢ್ಯನಿರದಿದ್ದರೂ ದುರ್ಬಲನಿರುವದಿಲ್ಲ.

ನೇವ್ಹಿಯಲ್ಲಿ ಕೆಲಸ ಮಾಡುವವರ ಜಾತಕದಲ್ಲಿ ಕರ್ಕ, ವೃಶ್ಚಿಕ, ತುಲಾ, ಮೇಷ, ಮೀನ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ. ಏರಫೋರ್ಸ್‌ದ ವಿಷಯವಾಗಿ ಈ ಹಿಂದೆ ವಿವರವಾಗಿ ಬರೆಯಲಾಗಿದೆ.

ಜನರಲ್, ಲೆಫ್ಟನೆಂಟ ಜನರಲ್, ಮೇಜರ ಜನರಲ್, ಬ್ರಿಗೇಡಿಯರ, ಕರ್ನಲ್, ಲೆ. ಕರ್ನಲ್, ಮೇಜರ, ಕ್ಯಾಪ್ಟನ್, ಲೆಫ್ಟನೆಂಟ, ಕಮೀಶನರ :

ಈ ಮೊದಲಾದ ಉಚ್ಚ ಹುದ್ದೆಗಳನ್ನು ಪಡೆಯಲು ಜಾತಕದಲ್ಲಿ ಈ ಕೆಳಗೆ ಕಾಣಿಸಿದಂತೆ ಯೋಗಗಳು ಇರುತ್ತವೆ.

(೧) ಮಂಗಳ, ರವಿ, ಲಗ್ನೇಶ, ದಶಮೇಶ ಬಲಾಢ್ಯರಿರಬೇಕು.

(೨) ರವಿ-ಮಂಗಳರು ಸ್ಥಾನಬಲದವರೂ ರಾಶಿಬಲದವರೂ ಯೋಗಕಾರಕರೂ ಇರಬೇಕು.

(೩) ಚಂದ್ರನು ಪುರುಷ ರಾಶಿಯಲ್ಲಿರುವನು.

(೪) ಅನೇಕ ಗೃಹಗಳು ಹೆಚ್ಚಾಗಿ ಸ್ವಗ್ರಹದಲ್ಲಿ ಇಲ್ಲವೆ ಉಚ್ಚ ರಾಶಿಯಲ್ಲಿರುವವು.

(೫) ಭಾಗ್ಯೇಶನೂ ಭಾಗ್ಯ ಸ್ಥಾನವೂ ಬಲಾಢ್ಯವಿದ್ದು ಮಂಗಳ, ರವಿ, ಗುರು ಇವರೊಂದಿಗೆ ಇಲ್ಲವೆ ಯಾರರೊಂದಿಗೆ ಶುಭಯೋಗದವರಿರಬೇಕು.

(೬) ಅನೇಕ ಗ್ರಹಗಳು ಉದಿತ ಗೋಲಾರ್ಧದಲ್ಲಿರುವವು.

(೭) ಮೇಷ, ಕರ್ಕ, ಸಿಂಹ, ಧನು, ವೃಶ್ಚಿಕ, ಮಕರ ಈ ಲಗ್ನಗಳೇ ಹೆಚ್ಚಾಗಿರುತ್ತವೆ.

ಎಡ್ಮಿರಲ್, ವೈಸ ಎಡ್ಮಿರಲ್, ರೀಅರ ಎಡ್ಮಿರಲ್, (Rear Admiral) ಕಮಾಂಡರ, ಕ್ಯಾಪ್ಟನ್, ಲೆಫ್ಟನಂಟ, ಮಿಡಶಿಪ್‌ಮನ್, ಪೆಟ್ಟೀ ಆಫೀಸರ

ಈ ಮೊದಲಾದ ಹುದ್ದೆಗಳನ್ನು ಪಡೆಯಲು ಜಾತಕದಲ್ಲಿ ಈ ಕೆಳಗಿನಂತೆ ಯೋಗಗಳಿರುತ್ತವೆ.

(೧) ಚಂದ್ರ, ಲಗ್ನೇಶ, ಮಂಗಳ, ರವಿ ಈ ನಾಲ್ಕೂ ಗ್ರಹಗಳು ಬಲಾಢ್ಯವಿರಬೇಕು.

(೨) ಚಂದ್ರ ಹಾಗೂ ಲಗ್ನೇಶರ ಶುಭ ಸಂಬಂಧ ಯೋಗವಿರಬೇಕು.

(೩) ಚಂದ್ರ ಹಾಗೂ ಭಾಗ್ಯೇಶರ ಶುಭ ಸಂಬಂಧವಿರಬೇಕು.

(೪) ಕರ್ಕ, ತುಲಾ, ವೃಶ್ಚಿಕ, ಮೇಷ, ಮೀನ ಈ ಲಗ್ನದವರೇ ಹೆಚ್ಚಾಗಿರುತ್ತಾರೆ.

(೫) ವೃಷಭ, ಕರ್ಕ, ವೃಶ್ಚಿಕ, ಮಕರ, ಮೀನ, ಧನು, ಸಿಂಹ ಈ ರಾಶಿಯವರೇ ಹೆಚ್ಚಾಗಿರುತ್ತಾರೆ.

(೬) ಅನೇಕ ಗ್ರಹಗಳು ಸ್ವಗೃಹ ಇಲ್ಲವೆ ಉಚ್ಚ ರಾಶಿಯಲ್ಲಿರುವವು.

ಏರ ಮಾರ್ಶಲ್, ಏರ ವೈಸ ಮಾರ್ಶಲ್, ಏರ ಕಮಾಂಡರ, ಕ್ಯಾಪ್ಟನ್, ಗ್ರುಪ ಕ್ಯಾಪ್ಟನ್, ಏಂಗ ಕಮಾಂಡರ, ಸ್ಕ್ವಾಡ್ರನ್ ಲೀಡರ, (Squadron leader) ಫ್ಲ್ಯಾಟ ಲೆಫ್ಟನಂಟ, ಫ್ಲಾಯಿಂಗ ಆಫೀಸರ

ಈ ಮೊದಲಾದ ಉಚ್ಚ ಹುದ್ದೆಗಳನ್ನು ಪಡೆಯಲು ಜಾತಕದಲ್ಲಿ ಈ ಕೆಳಗೆ ಕಾಣಿಸಿದ ಯೋಗಗಳಿರುತ್ತವೆ.

ಈ ವಿಷಯದ ಬಗ್ಗೆ ಸಿವಿಲ್ ಎವ್ಹಿಯೇಶನ್ (ವಿಮಾನೋಡ್ಡಾಣ ಖಾತೆ) ಹಾಗೂ ವಿಮಾನ ದಳ ಈ ಖಾತೆಗಳಲ್ಲಿ ಬರೆಯಲಾಗಿದೆ. ವಿಶಿಷ್ಟ ಯೋಗವೆಂದರೆ ಮಿಲಿಟರಿ ಖಾತೆಯ ಕಾರಕ ಗ್ರಹಗಳಾದ ಮಂಗಳ, ರವಿ, ಲಗ್ನೇಶ ಮತ್ತು ಪುರುಷ ರಾಶಿಯ ಚಂದ್ರರು ಬಲಾಢ್ಯರಿರುವದೇ ಈ ಹುದ್ದೆಯಲ್ಲಿರುವವರ ಜಾತಕಗಳ ವೈಶಿಷ್ಟ್ಯ.

## ೧೦ ಭಾರತ ಸರಕಾರದ ಟಂಕು ಶಾಲೆ

(Indian Government Mints)

ಟಂಕು ಶಾಲೆ ಖಾತೆಯು ಭಾರತದಲ್ಲಿ ಬಹಳ ಪುರಾತನ ಕಾಲದಿಂದಲೂ ಬಂದಿದೆ. ಇಂದು ಭಾರತ ಸರಕಾರದ ಮೂರು ಟಂಕುಶಾಲೆಗಳಲ್ಲಿ ೧೯೬೦ರಲ್ಲಿ ೫,೧೦೮ ಮಂದಿ ಕೆಲಸಗಾರರು ವಿವಿಧ ವರ್ಗದಲ್ಲಿ ಕೆಲಸ ಮಾಡುತ್ತಿದ್ದರು (೧೯೬೦ ರ ಅಂಕಿ-ಸಂಖ್ಯೆ ಮೇರೆಗೆ). ಈಗಂತೂ ಈ ಸಂಖ್ಯೆ ಬಹಳಷ್ಟು ಬೆಳೆದಿರಲಿಕ್ಕೆಬೇಕು..

ಇಲ್ಲಿ ಮುಖ್ಯತಃ ವರ್ಕ್‌ಶಾಪ್ ಕೆಲಸವಿರುತ್ತದೆ. ಅಲ್ಲದೆ ಕುಶಲ ಕೆಲಸಗಾರರ (Skilled worker) ಕೆಲಸವೇ ಹೆಚ್ಚಾಗಿರುತ್ತದೆ. ಇದರಲ್ಲಿ ಎನ್‌ಗ್ರೇವಿಂಗ್ ಎಂಬ ಪ್ರತ್ಯೇಕವಾದ ವಿಭಾಗವಿದ್ದು ಎನ್‌ಗ್ರೇವರ್ (Engraver) ಎಂಬ ಹುದ್ದೆಗಳಲ್ಲಿ ಬಹುಜನರು ಕೆಲಸ ಮಾಡುತ್ತಾರೆ.

ಇಲ್ಲಿ ಮೆಕ್ಯಾನಿಕಲ್ ವಿಭಾಗವಿದ್ದು ಇವರ ಕೆಲಸ ಮಿಷನ್‌ಗಳನ್ನು ನೋಡಿಕೊಳ್ಳುವುದಾಗಿದೆ. ಈ ಖಾತೆಯಲ್ಲಿ ಕೆಳದರ್ಜೆಯ ಹುದ್ದೆಯಲ್ಲಿ ಕೆಲಸಮಾಡುವ ನೌಕರ ವರ್ಗದವರ ಸಂಖ್ಯೆಯೇ ಅಧಿಕವಾಗಿರುತ್ತದೆ. ಅದೂ ಕೂಡ ಕುಶಲ ಕೆಲಸಗಾರರ ಸಂಖ್ಯೆಯೇ ಹೆಚ್ಚಾಗಿರುತ್ತದೆ. ಈ ವಿಧವಾಗಿ ಈ ಖಾತೆಯ ಕೆಲಸವಿರುವುದರಿಂದ ಈ ಖಾತೆಯ ನೌಕರದಾರರ ಗ್ರಹಯೋಗಗಳು ಎಂತಿರಬೇಕು, ಖಾತೆಯ ಕಾರಕಗ್ರಹಗಳಾವುವು ಎಂಬುದನ್ನು ನೋಡುವ.

**ಕಾರಕ ಗ್ರಹ :** ಕುಶಲ ಕೆಲಸವು ಪಡಿಯಚ್ಚಿನ ಕೆಲಸವಿರುವುದರಿಂದ ಕುಶಲ ಕಲಾಕಾರಕಗ್ರಹವಾದ ಶುಕ್ರನೇ ಈ ಖಾತೆಯ ಕಾರಕಗ್ರಹ ನೆನ್ನಬಹುದು.

ಶುಕ್ರನ ತರುವಾಯ ಮಂಗಳನೂ ಕೆಲಮಟ್ಟಿಗೆ ಕಾರಕನಾಗುವನು. ಏಕೆಂದರೆ ಯಂತ್ರ ಮಿಷನ್‌ಗಳ ಮೇಲಿಂದಲೇ ನಾಣ್ಯಗಳ ಉತ್ಪಾದನೆ ಇರುವುದರಿಂದ ಮಂಗಳನು ಕೆಲಮಟ್ಟಿಗೆ ಕಾರಕನಾಗುವನು.

**ಕಾರಕಸ್ಥಾನ :** ಹಣ, ನಾಣ್ಯ, ನೋಟು, ದ್ರವ್ಯ, ಬೆಳ್ಳಿ, ಬಂಗಾರ, ಮೊದಲಾದವುಗಳ ಕಾರಕಸ್ಥಾನವಾದ ದ್ವಿತಿಯ ಸ್ಥಾನವೇ ಈ ಉದ್ಯೋಗದ ಹಾಗೂ ಖಾತೆಯ ಕಾರಕಸ್ಥಾನವಾಗುತ್ತದೆ.

**ಲಗ್ನ :** ಲಗ್ನದ ದೃಷ್ಟಿಯಿಂದ ನೋಡಿದರೆ ಮಕರ, ಕರ್ಕ, ವೃಷಭ, ಕುಂಭ, ಮೇಷ, ತುಲಾ ಮಿಥುನ ಈ ಲಗ್ನದವರೇ ಹೆಚ್ಚಾಗಿರುವುದು ಕಂಡು ಬರುತ್ತದೆ.

ರಾಶಿ : ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಭಿನ್ನ ಭಿನ್ನ ಪ್ರಕಾರದ ಕೆಲಸಗಳಿಗೆ ಭಿನ್ನ ಭಿನ್ನ ರಾಶಿಯವರು ಕಾರಕರಾಗುತ್ತಾರೆ. ಉದಾಹರಣೆಗಾಗಿ: ಕುಶಲ ಹಾಗೂ ಪಡಿಯಚ್ಚಿನ ಕೆಲಸಕ್ಕೋಸ್ಕರ ವೃಷಭ, ಮಿಥುನ, ತುಲಾ, ಕುಂಭ, ಕನ್ಯಾ ಈ ರಾಶಿಗಳೂ, ವರ್ಕ್‌ಶಾಪ್ ಹಾಗು ಯಂತ್ರ ಮಷಿನಂ ಗಳ ಸಂಬಂದ ಬರುವ ಕೆಲಸಗಳಿಗೆ ಮೇಷ, ಕರ್ಕ, ಸಿಂಹ, ವೃಶ್ಚಿಕ ಧನು, ಮಕರ ಈ ರಾಶಿಗಳೂ, ಆಡಳಿತೆಯ ಕೆಲಸಕ್ಕೆ ಮಿಥುನ, ತುಲಾ, ಕುಂಬ, ಮೇಷ, ಸಿಂಹ, ಧನು ಮಕರ ಈ ರಾಶಿಗಳೂ ಕಾರಕವಿರುತ್ತವೆ.

## ೧೧ ಆಡಿಟ್ ಹಾಗೂ ಅಕೌಂಟ್ಸ್ ಖಾತೆ

(Audit & Accounts Dept.)

ಕೇಂದ್ರ ಸರಕಾರದ ಆಡಳಿತೆಯಂಲ್ಲಿ ಮುಖ್ಯವಾಗಿ ಮೂರು ಪ್ರಕಾರದ ಅಕೌಂಟ್ಸ್ ಖಾತೆಗಳಿವೆ.

( i ) ಭಾರತ ಸರಕಾರದ ಆಡಿಟ್ ಹಾಗೂ ಅಕೌಂಟ್ಸ ಖಾತೆ,
( Indian Audit & Accounts Dept. )

( ii ) ಮಿಲಿಟರಿ ಅಕೌಂಟ್ಸ್ ಖಾತೆ,
( Military Accounts Dept. )

( iii ) ರೈಲ್ವೆ ಅಕೌಂಟ್ಸ್ ಖಾತೆ
( Indian Railway Accounts Dept. )

ಕೇಂದ್ರ ಸರಕಾರದ ಹಾಗೂ ರಾಜ್ಯಸರಕಾರಗಳ ವೆಚ್ಚದ ಲೆಕ್ಕದ ಮೇಲ್ವಿಚಾರಣೆಯೇ ಈ ಆಡಿಟ್ ಹಾಗೂ ಅಕೌಂಟ್ಸ್ ಖಾತೆಯ ಮುಖ್ಯ ಹೊಣೆ. ಈ ಖಾತೆಗೆ ಸಂಕ್ಷೇಪವಾಗಿ ಆಡಿಟ್ ಡಿಪಾರ್ಟ್‌ಮೆಂಟ್ ಎಂದೇ ಕರೆಯುವರು. ಇಡೀ ಖಾತೆ ಕಂಟ್ರೋಲರ್ ಮತ್ತು ಆಡಿಟರ್ ಜನರಲ್ ಎಂಬ ಉಚ್ಚ ಅಧಿಕಾರಿಯ ಆಡಳಿತೆಯಲ್ಲಿ ನಡೆಸಲ್ಪಡುವುದರಿಂದ ಎ. ಜಿ.

ಆಫೀಸ್ ಅಥವಾ ಎ.ಜಿ. ಡಿಪಾರ್ಟ್‌ಮೆಂಟ್ ಎಂದೂ ಕರೆಯುವ ರೂಢಿ ಇದೆ. ಈ ಅಧಿಕಾರಿಯು ಕೇಂದ್ರ ಸರಕಾರದ ವೆಚ್ಚದ ವಿಷಯವಾಗಿ ರಾಷ್ಟ್ರಪತಿಗೂ ರಾಜ್ಯ ಸರಕಾರದ ವೆಚ್ಚದ ವಿಚಾರವಾಗಿ ಆಯಾ ರಾಜ್ಯಗಳ ರಾಜ್ಯಪಾಲರಿಗೂ (Governers) ತನ್ನ ವರದಿಯನ್ನು ಸಲ್ಲಿಸಬೇಕಾಗುತ್ತದೆ.

ಕೇಂದ್ರ ಸರಕಾರದ ವೆಚ್ಚದ ಸರಿಯಾದ ಲೆಕ್ಕವನ್ನಿಡುವುದೂ ಹಾಗು ರಾಜ್ಯ ಸರಕಾರಗಳ ವೆಚ್ಚದ ಲೆಕ್ಕವನ್ನು ಇಡುವುದೂ ಈ ಖಾತೆಯ ಮುಖ್ಯ ಹೊಣೆಗಾರಿಕೆಯ ಕೆಲಸವಿರುತ್ತದೆ.

ಮಿಲಿಟರಿ ಅಕೌಂಟ್ಸ್ ಖಾತೆಯು ಮಿಲಿಟರಿ ವೆಚ್ಚದ ಸಲುವಾಗಿಯೇ ನಿರ್ಮಿಸಲ್ಪಟ್ಟಿದ್ದು ಆರ್ಥಿಕ ಖಾತೆಯ ಮೇಲ್ವಿಚಾರಣೆಯಲ್ಲಿ ತನ್ನ ಹೊಣೆಯನ್ನು ನಿರ್ವಹಿಸುತ್ತದೆ. ಇದೇ ರೀತಿ ರೈಲ್ವೆ ಅಕೌಂಟ್ಸ್ ಖಾತೆ ರೈಲ್ವೆ ಖಾತೆಯ ವೆಚ್ಚದ ಲೆಕ್ಕವನ್ನು ನೋಡಿಕೊಳ್ಳುತ್ತದೆ. ಹೀಗಾಗಿ ಈ ಖಾತೆಗೆ ಬಹಳ ಮಹತ್ವವಿದೆ. ಈ ಖಾತೆಯಲ್ಲಿಯ ಅಧಿಕಾರಿಯ ಶಿಕ್ಕಾ ಮುದ್ರೆ ಬೀಳದ ಹೊರತು ಯಾವುದಕ್ಕೂ ಹಣ ದೊರೆಯಲಾರದು. ಅಂದ ಮೇಲೆ ಇಲ್ಲಿ ಕೆಲಸ ಮಾಡುವ ಅಧಿಕಾರಿಗಳ ಹಾಗೂ ಇತರ ನೌಕರ ವರ್ಗದವರಿಗೆ ಇರುವ ಮಹತ್ವದ ಕಲ್ಪನೆ ಬರದೆ ಇರಲಾರದು.

ಕಾರಕ ಗ್ರಹ : ಆರ್ಥಿಕ ಹಾಗೂ ಲೆಕ್ಕಪತ್ರದ ಸಂಬಂಧ ಇರುವದರಿಂದ ಬುಧನೂ ನ್ಯಾಯಖಾತೆಯಂತೆ ಸ್ವತಂತ್ರವಾದ ಖಾತೆ ಇರುವದರಿಂದ ನ್ಯಾಯಖಾತೆಯ ಕಾರಕ ಗ್ರಹವಾದ ಗುರುವೂ ಕಾರಕರಾಗುವರು. ಇದಲ್ಲದೆ ಈ ಖಾತೆಯ ನೌಕರ ವರ್ಗದವರು ಸರಕಾರೀ ಹಾಗೂ ವರ್ಜಸ್ವೀ ಖಾತೆಯ ನೌಕರರಾಗಿರುವ ಕಾರಣ ರವಿಯೂ ಕಾರಕನಾಗುವನು. ಹೀಗೆ ಬುಧ, ಗುರು, ರವಿ, ಈ ಮೂರು ಗ್ರಹಗಳು ಕಾರಕರಾಗುತ್ತಾರೆ. ಇದರಲ್ಲಿಯೂ ಬುಧನು ಯೋಗಕಾರಕ ಗ್ರಹವೂ ಗುರು ಸ್ಥಾನಬಲದವನೂ ರವಿಯು ರಾಶಿಬಲದವನೂ ಇರುತ್ತಾರೆ.

ಸ್ಥಾನ : ಈ ಖಾತೆಯ ಕಾರಕ ಸ್ಥಾನವು ಯಾವದು ಎಂಬುದು ಒಂದು ಸಮಸ್ಯೆಯೇ ಆಗಿರುತ್ತದೆ.

ಹಣಕಾಸಿನ ಸಂಬಂಧ ಇರುವವರಿಂದಲೂ ಅತ್ಯಧಿಕ ಪದವೀಧರರಿರುವ ಖಾತೆ ಇರುವದರಿಂದಲೂ ಪಂಚಮ ಸ್ಥಾನವೇ ಕಾರಕವಾಗುತ್ತಿದ್ದರೆ, ಲೆಕ್ಕಪತ್ರಗಳ ಪರಿಶೀಲನೆ ದಾಖಲೆ ಹಾಗೂ ಲೆಕ್ಕಪತ್ರಗಳ ಸಲಕರಣೆಯನ್ನು ವ್ಯವಸ್ಥಿತ ರೀತಿಯಿಂದ ಇಡುವಿಕೆ ಈ ಎಲ್ಲ ಸಂಗತಿಗಳಿಗಾಗಿ ತೃತೀಯ ಸ್ಥಾನವೇ ದ್ಯೋತಕವಾಗಿರುವದರಿಂದ ತೃತೀಯೇಶ, ಹಾಗೂ ಪಂಚಮೇಶರು ಕೂಡ ಬಲಾಢ್ಯರಿರಬೇಕಾಗುತ್ತದೆ.

ಕಾರಕ ಲಗ್ನಗಳು : ಕರ್ಕ, ಕನ್ಯಾ, ಮಕರ, ಕುಂಭ, ವೃಷಭ, ಮೇಷ, ಮಿಥುನ, ಧನು ಈ ಲಗ್ನಗಳು ಗುಣಾನುಕ್ರಮವಾಗಿ ಕಾರಕ ಲಗ್ನಗಳಿರುತ್ತವೆ.

ರಾಶಿ : ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ, ಲೆಕ್ಕಪತ್ರಗಳನ್ನು ಪರಿಶೀಲಿಸಲು ಮಿಥುನ, ತುಲಾ, ಕುಂಭ, ವೃಷಭ, ಕನ್ಯಾ, ಮಕರ ಈ ರಾಶಿಯವರೂ ಆಡಳಿತಕ್ಕಾಗಿ ಮೇಷ, ಸಿಂಹ, ಧನು, ಕರ್ಕ, ವೃಶ್ಚಿಕ, ಮೀನ ಈ ರಾಶಿಯವರೂ ಇರುತ್ತಾರೆ.

### ಕಂಟ್ರೋಲರ ಹಾಗೂ ಆಡಿಟರ ಜನರಲ್ ಮತ್ತು ಅಕೌಂಟಂಟ ಜನರಲ್

ಇಡೀ ಭಾರತದ ವೆಚ್ಚದ ಲೆಕ್ಕವನ್ನು ನೋಡುವದು, ಸರಿಯಾದ ರೀತಿಯಲ್ಲಿ ಹಣದ ಬಳಕೆ ಆಗಿದೆಯೊ ಇಲ್ಲವೊ ಎಂಬುದನ್ನು ವಿಮರ್ಶಿಸುವದು ರಾಜ್ಯ ಸರಕಾರಗಳು ಯೋಗ್ಯವಾದ ರೀತಿಯಲ್ಲಿ ಹಣವನ್ನು ಉಪಯೋಗಿಸಿರುವವೊ ಹೇಗೆ ಈ ಮುಂತಾದ ಹಣದ ವಿಷಯವಾಗಿ ಮುಖ್ಯ ಹೊಣೆಯನ್ನು ನಿರ್ವಹಿಸುವ, ಅದರ ವಿಷಯವಾಗಿ ಅತಿ ಮಹತ್ವದ ವರದಿಯನ್ನು ರಾಷ್ಟ್ರಪತಿಗೆ ಸಲ್ಲಿಸುವ ಅತಿ ಉಚ್ಚ ಅಧಿಕಾರಿ ಇರುವದರಿಂದ ಇವರ ಜಾತಕದಲ್ಲಿ ಈ ಕೆಳಗೆ ಕಾಣಿಸಿದ ಯೋಗಗಳಿರುವದು ಕಂಡುಬರುತ್ತದೆ.

ಕರ್ಕ, ಸಿಂಹ, ವೃಶ್ಚಿಕ, ಧನು, ಮಿಥುನ, ಮೇಷ ಈ ಲಗ್ನದವರೂ. ಆಡಳಿತಕಾರಕ ಹಾಗೂ ವರ್ಚಸ್ಸಿಕಾರಕ ಗ್ರಹಗಳಾದ ರವಿ–ಗುರು ಯೋಗಕಾರಕರೂ, ರಾಶಿಬಲದವರೂ, ಸ್ಥಾನಬಲದವರೂ ಇದ್ದು ಸಿಂಹ, ಧನು, ಮಿಥುನ, ತುಲಾ, ಕುಂಭ, ಮಕರ, ವೃಶ್ಚಿಕ ಈ ರಾಶಿಯವರಿರುತ್ತಾರೆ. ಇವರ ಜಾತಕದಲ್ಲಿ ಭಾಗ್ಯೇಶನು ದಶಮೇಶನಿಗಿಂತ ಬಲಾಢ್ಯನಿದ್ದು ಅನೇಕ ಗ್ರಹಗಳು ರಾಶಿಬಲದವವಿರುತ್ತವೆ. ಲಗ್ನೇಶ, ಪಂಚಮೇಶ ಹಾಗೂ ಭಾಗ್ಯೇಶ ಇವರು ಬಲಾಢ್ಯರಿರುತ್ತಾರೆ.

### ಅಕೌಂಟಂಟ ಜನರಲ್

ರಾಜ್ಯ ಸರಕಾರದ ಮುಖ್ಯಾಧಿಕಾರಿಯಾಗಿ ಕೆಲಸ ನಿರ್ವಹಿಸುವ ಉಚ್ಚ ಅಧಿಕಾರಿ. ರಾಜ್ಯದಲ್ಲಿಯೇ ಗೌರವಾನ್ವಿತ ವ್ಯಕ್ತಿ. ಈ ಅಧಿಕಾರಿಯ ಹೇಳಿಕೆ ವೇದವಾಕ್ಯವಿದ್ದಂತೆ. ಆದುದರಿಂದ ಇವರ ಜಾತಕಗಳು ಕಂಟ್ರೋಲರ ಹಾಗೂ ಆಡಿಟರ ಜನರಲ್ ಇವರ ಯೋಗಗಳಂತೆಯೇ ಇರುವವು.

### ಅಕೌಂಟ್ಸ ಹಾಗೂ ಆಡಿಟ್ ಆಫೀಸರ

ಇವರು ರಾಜ್ಯದಲ್ಲಿಯ, ಕೇಂದ್ರದಲ್ಲಿಯ ಕೆಳಗಿನ ಕಚೇರಿಯ ಕಕ್ಷೆಯಲ್ಲಿ ಬರುವ ವೆಚ್ಚದ ಲೆಕ್ಕವನ್ನು ನೋಡಿಕೊಳ್ಳುವವರು. ಇವರ ಜಾತಕದಲ್ಲಿ ಖಾತೆಯಲ್ಲಿರುವ ಸಾಮಾನ್ಯ ನಿಯಮಬಿ ಹೊರತಾಗಿ ಪಂಚಮೇಶ, ತೃತೀಯೇಶ ಹಾಗೂ ಬುಧ, ಗುರು ಇವರು ಬಲಾಢ್ಯರಿದ್ದು ಅನೇಕ ಗ್ರಹಗಳು ತೃತೀಯ, ಸಪ್ತಮ, ಭಾಗ್ಯ ಈ ಸ್ಥಾನದಲ್ಲಿ ಇರುತ್ತವೆ.

### ಅಕೌಂಟಂಟ್ಸ, ಡಿವ್ಹಿಜನಲ್ ಅಕೌಂಟಂಟ್ಸ

ಈ ಅಧಿಕಾರಿಗಳು ರಾಜ್ಯಗಳ ವಿವಿಧ ಖಾತೆಗಳ ವೆಚ್ಚದ ಲೆಕ್ಕವನ್ನು ನೋಡಿಕೊಳ್ಳಲು ಆಯಾ ಖಾತೆಗಳ ಮುಖ್ಯಾಧಿಕಾರಿಗಳ ಮೇಲ್ವಿಚಾರಣೆಯಲ್ಲಿಯೇ ಕೆಲಸ ಮಾಡುತ್ತಾರೆ. ಇವರ ಜಾತಕದ ಯೋಗಗಳು ಬಹಳ ವಿಚಿತ್ರವಿರುತ್ತವೆ. ವೃತ್ತಿಯ ಕಾರಕಗ್ರಹಗಳೂ ಖಾತೆಯ ಕಾರಕಗ್ರಹಗಳೂ ಕೂಡಿಯೇ ಬಲಾಢ್ಯವಿರುತ್ತವೆ.

ಉದಾಹರಣೆಗೆ : ಅಕೌಂಟಂಟ ಜನರಲ್ ಖಾತೆಯ ನೌಕರನು ಲೋಕೋಪಯೋಗಿ ಖಾತೆಯಲ್ಲಿ Executive Engineer ರ ಮೇಲ್ವಿಚಾರಣೆಯಲ್ಲಿ ಡಿವ್ಹಿಜನಲ್ ಅಕೌಂಟಂಟ ಎಂದು ಇರುವನೆಂದು ತಿಳಿಯಿರಿ. ಇಲ್ಲಿ ಅಕೌಂಟ್ಸ ವೃತ್ತಿಯ ಕಾರಕಗ್ರಹವಾದ ಬುಧನೂ ಲೋಕೋಪಯೋಗಿ ಖಾತೆಯ ಕಾರಕನಾದ ಶನಿಯೂ ಬಲಾಢ್ಯರಿರಬೇಕಾಗುತ್ತದೆ. ಹೀಗೆಯೇ ಭಿನ್ನ ಭಿನ್ನ ಖಾತೆಗಳಲ್ಲಿ ಕೆಲಸ ಮಾಡುವ ಈ ನೌಕರದಾರರಿಗೆ ಖಾತೆಯ ಹಾಗೂ ವೃತ್ತಿಯ ಕಾರಕಗ್ರಹಗಳೆರಡೂ ಬಲಾಢ್ಯವಿರಬೇಕು.

ಈ ಖಾತೆಯ ಇತರ ಕಾರಕೂನರು ಹಾಗೂ ಅಕೌಂಟಂಟರು

ಖಾತೆಗೆ ಇರಬೇಕಾದ ಎಲ್ಲ ಯೋಗಗಳೂ, ಎಲ್ಲ ನಿಯಮಗಳೂ ಇವರ ಜಾತಕದಲ್ಲಿರುತ್ತವೆ.

## ೧೨ ಗಣಿ ಹಾಗೂ ಭೂಗರ್ಭ ಖಾತೆ

ಗಣಿ ಹಾಗೂ ಭೂಗರ್ಭ ಎಂಬ ಎರಡು ಖಾತೆಗಳನ್ನು ಕೂಡಿಸಿ ಒಂದೇ ಖಾತೆಯನ್ನಾಗಿ ಮಾಡಿದ್ದಾರೆ. ಫಲ ಜ್ಯೋತಿಷ್ಯದಲ್ಲಿ ಈ ಎರಡೂ ಖಾತೆಗಳ ಕಾರಕಗ್ರಹಗಳಲ್ಲಿ ಹಾಗೂ ರಾಶಿಗಳಲ್ಲಿ ಸಾಮ್ಯವಿದೆ.

ಸ್ಥಾನ : ಸ್ಥಾನದೃಷ್ಟಿಯಿಂದ ನೋಡಿದರೆ ಈ ಎರಡೂ ಖಾತೆಗಳು ಚತುರ್ಥ ಸ್ಥಾನಕ್ಕೆ ಸಂಬಂಧಿಸಿರುವುದರಿಂದ ಚತುರ್ಥ ಸ್ಥಾನವೇ ಈ ಉದ್ಯೋಗದ ಸ್ಥಾನವೆಂದು ಹೇಳಬಹುದು.

ರಾಶಿ : ರಾಶಿದೃಷ್ಟಿಯಿಂದ ನೋಡಿದರೆ ಪೃಥ್ವಿ ರಾಶಿಗಳಾದ ವೃಷಭ, ಕನ್ಯಾ, ಮಕರ ಈ ರಾಶಿಗಳೇ ಈ ಖಾತೆಯ ಕಾರಕ ರಾಶಿಗಳಾಗಿವೆ.

ಕಾರಕ ಗ್ರಹ: ಸ್ವಾಭಾವಿಕವಾಗಿ ಚಂದ್ರನು ಚತುರ್ಥಾಧಿಪತಿ ಇರುವುದರಿಂದ ಈ ಖಾತೆಗೆ ಚಂದ್ರನೇ ಕಾರಕನೆಂದು ಹೇಳಬಹುದು.

ಭೂಮಿಯಲ್ಲಿ ಸಿಗುವ ಅನೇಕ ಖನಿಜ ದ್ರವ್ಯ, ಪ್ರವಾಹಿ ಪದಾರ್ಥಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕರು, ಪೂರಕರು ಇರುವುದರಿಂದ ಆ ಗ್ರಹಗಳೇ ಈ ಖಾತೆಗೆ ಕಾರಕರಾಗುತ್ತಾರೆ. ಉದಾ :—ಕಬ್ಬಿಣ, ಕಲ್ಲಿದ್ದಲಿ, ಕಲ್ಲೆಣ್ಣೆ, ಪೆಟ್ರೋಲಿಯಂ ಮೊದಲಾದ ಪದಾರ್ಥಗಳ ಮೇಲೆ ಶನಿಯೂ, ತಾಮ್ರಕ್ಕೆ ಮಂಗಳನೂ, ಬಂಗಾರಕ್ಕೆ ಗುರು-ಮಂಗಳರೂ, ಬೆಳ್ಳಿಗೆ ಗುರು–ಶುಕ್ರರೂ ಹೀಗೆ ಭಿನ್ನ ಭಿನ್ನ ಧಾತುಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕರಿರುವದರಿಂದ ಆ ಗ್ರಹಗಳನ್ನು ಚಂದ್ರನ ಸಂಗಡವೇ ಪರಿಶೀಲಿಸಬೇಕಾಗುತ್ತದೆ.

ಭೂಗರ್ಭ ಖಾತೆಯ ಕಾರಕ ಗ್ರಹಗಳು : ಗಣಿ ಶಾಖೆಯ ಖಾತೆಯ ಗ್ರಹಗಳೇ ಈ ಖಾತೆಗೂ ಕಾರಕಗ್ರಹಗಳಿದ್ದು ಕೆಲವೊಂದು ವಿಶಿಷ್ಟವಾದ ಗ್ರಹಗಳ ಯೋಗಗಳನ್ನೂ ಪರಿಶೀಲಿಸಬೇಕಾಗುತ್ತವೆ. ಏಕೆಂದರೆ ಸರ್ವೆ, ಡಿಜಾಯಿನಿಂಗ ಮೊದಲಾದ ಸಿವ್ಹಿಲ್ ಇಂಜನಿಯರಿಂಗ ವಿದ್ಯೆಯಲ್ಲಿಯೂ ಕಲ್ಲು ಪರೀಕ್ಷೆಯ ವಿದ್ಯೆಯಲ್ಲಿಯೂ ಜ್ಞಾನ ಬೇಕಾಗುವದರಿಂದ ಈ ವಿದ್ಯೆಗಳ ಕಾರಕರಾದ ಬುಧ–ಶುಕ್ರರನ್ನೂ ನೋಡಬೇಕಾಗುತ್ತದೆ.

ವಿಭಾಗಗಳು : ಸಾಮಾನ್ಯವಾಗಿ ಈ ಖಾತೆಯಲ್ಲಿ ೫ ವರ್ಗದ ನೌಕರರನ್ನು ಕಲ್ಪಿಸಬಹುದು.

(೧) ಆಡಳಿತಗಾರರು
(೨) ಓಡಾಡುವ (ಫಿಲ್ಡ) ಕೆಲಸಗಾರರು
(೩) ಕಾರಕೂನರು
(೪) ಸಂಶೋಧಕರು
(೫) ಟೆಕ್ನಿಕಲ್ ಕೆಲಸಗಾರರು

ಡೈರೆಕ್ಟರ, ಡೆಪ್ಯೂಟಿ ಡೈರೆಕ್ಟರ, ಭೂಗರ್ಭ ಶಾಸ್ತ್ರಜ್ಞ (Geologist)

ಈ ಮೊದಲಾದ ಆಡಳಿತಾಧಿಕಾರಿಗಳ ಜಾತಕದಲ್ಲಿ ಖಾತೆಯ ಕಾರಕನಾದ ಚಂದ್ರನೂ, ಚತುರ್ಥೇಶನೂ ಚತುರ್ಥ ಸ್ಥಾನದಲ್ಲಿರುವ ಗ್ರಹವೂ

ಬಲಾಢ್ಯವಿರಬೇಕಲ್ಲದೆ ಆಡಳಿತೆಯ ಕಾರಕಗ್ರಹಗಳಾದ ರವಿ, ಗುರು, ಮಂಗಳರೂ ಬಲಾಢ್ಯರಿರಬೇಕಿದ್ದು ಚಂದ್ರನೂ ಪುರುಷ ರಾಶಿಯಲ್ಲಿರಬೇಕು.

### ಅಸಿಸ್ಟಂಟ ಜಿಯಾಲಾಜಿಸ್ಟ, ಸರ್ವೇಯರ, ಮೆನೇಜರ

ಈ ಮೊದಲಾದ ಫಿರ್ತಿ(ಓಡಾಡಿ)ಕೆಲಸಮಾಡುವವರ (Outdoor executive wokers) ಜಾತಕದಲ್ಲಿ ಚಂದ್ರ ಹಾಗೂ ಚತುರ್ಥ ಸ್ಥಾನವಂತೂ ಬಲಾಢ್ಯ ಇದ್ದೇ ಇರುವವಲ್ಲದೆ ಇವುಗಳ ಸಂಗಡ ಅನೇಕ ಗ್ರಹಗಳು ಲಗ್ನ, ತೃತೀಯ, ಸಪ್ತಮ, ಭಾಗ್ಯ, ವ್ಯಯ ಈ ಸ್ಥಾನಗಳಲ್ಲಿರುತ್ತವೆ.

### ಕೆಮಿಸ್ಟ ಹಾಗೂ ಮೆಟಲರ್ಜಿಸ್ಟ
### (Chemist and Metallurgist)

ಈ ಮೊದಲಾದವರ ಜಾತಕದಲ್ಲಿ ಚಂದ್ರನೂ, ಚತುರ್ಥೇಶನೂ ಬಲಾಢ್ಯರಿರುವರಲ್ಲದೆ ಪೃಥ್ವಿ ವಾಗೂ ವಾಯುರಾಶಿಗಳಲ್ಲಿಯೇ ಗ್ರಹಗಳು ಹೆಚ್ಚಾಗಿದ್ದು ಮಂಗಳನೂ ಬಲಾಢ್ಯನಿರುವನು. ವಿಶೇಷವಾಗಿ ಬುಧ, ಚಂದ್ರರು ವಾಯು ಇಲ್ಲವೆ ಭೂ ರಾಶಿಯಲ್ಲಿರುವರು. ಪಂಚಮೇಶನೂ ಗುರುವೂ ಕೂಡ ಬಲಾಢ್ಯರಿರುತ್ತಾರೆ.

### ಕಾರಕೂನ

ಈ ಉದ್ಯೋಗದಲ್ಲಿ ಕೆಲಸ ಮಾಡುವವರ ಜಾತಕದಲ್ಲಿ ಕಾರಕೂನಿಕೆ ಯೋಗಗಳಂತೂ ಇರುವವಲ್ಲದೆ ಚಂದ್ರನೂ ಚತುರ್ಥ ಸ್ಥಾನವೂ ಚತುರ್ಥೇಶನೂ ಬಲಾಢ್ಯರಿರುತ್ತಾರೆ.

### ಟೆಕ್ನಿಕಲ್ ಕೆಲಸಗಾರರು

ಟರ್ನರ, ಟ್ರ್ಯಾಕ್ಟರ ಆಪರೇಟರ, ಡ್ರಿಲರ, ಡ್ರೈವ್ಹರ, ಮೆಕ್ಯಾನಿಕ್ ಮೊದಲಾದ ಈ ಖಾತೆಯ ತಾಂತ್ರಿಕ ಕೆಲಸಗಾರರ ಜಾತಕದಲ್ಲಿ ಚಂದ್ರನೂ ಚತುರ್ಥೇಶನೂ ಬಲಾಢ್ಯರಿದ್ದು ಇವರ ಉದ್ಯೋಗದ ಕಾರಕ ಗ್ರಹಗಳಾದ ಶನಿ,

ಮಂಗಳರು ಸ್ಥಾನಬಲ-ಯೋಗಕಾರಕರಿಲ್ಲದೆ ರಾಶಿ ಬಲದವರಿರ ತ್ತಾರೆ. (ಈ ವಿಷಯಕ್ಕಾಗಿ ಇದೇ ಪುಸ್ತಕದ ೩ನೇ ಪ್ರಕರಣ ನೋಡಿರಿ).

## ೧೩ ಭಾರತ ಸರಕಾರದ ಮುಖ್ಯ ಕಚೇರಿಗಳು

(Headquarters of Government of India)

ಸರಕಾರದ ಸಚಿವಾಲಯ (Government Secretariat)

ರಾಜ್ಯಪಾಲರ ಸಚಿವಾಲಯ (Governor's Secretariat)

ರಾಷ್ಟ್ರಾಧ್ಯಕ್ಷರ ಸಚಿವಾಲಯ (President's Secretariat)

ಭಾರತ ಸರಕಾರದ ಕೇಂದ್ರೀಯ ಕಚೇರಿಗಳಲ್ಲಿ ಮುಖ್ಯವಾಗಿ ವಿವಿಧ ಸಚಿವರ ಶಾಖೆಗಳು ಹಾಗೂ ಅವರ ಖಾತೆಗಳು ಸಮಾವೇಶವಾಗುತ್ತವೆ. ಇವರ ಜವಾಬ್ದಾರಿ, ಕೆಲಸದ ಹೊಣೆಯು ರಾಜ್ಯಾಂಗ ಘಟನೆಯ ಕಲಮು ೭೭ (೩) ರಲ್ಲಿ ಉಲ್ಲೇಖಿಸಲ್ಪಟ್ಟಿದೆ. ಪ್ರತಿಯೊಂದು ಸಚಿವ ಶಾಖೆಯು (Ministry) ತನ್ನ ಶಾಖೆಯ ಕಾರ್ಯಕ್ಷೇತ್ರದಲ್ಲಿಯ ಸರಕಾರದ ಧೋರಣೆಯನ್ನು ರೂಪಿಸುವದರಲ್ಲಿಯೂ, ಆ ಧೋರಣೆಯನ್ನು ಕಾರ್ಯಾಚರಣೆಯಲ್ಲಿ ತರುವದಕ್ಕೂ ಮತ್ತೆ ಪುನರ್ವಿಮರ್ಶಿಸುವದಕ್ಕೂ ಹೊಣೆಗಾರವಾಗಿರುತ್ತದೆ. ಮುಖ್ಯವಾಗಿ ಆಡಳಿತ ಪದ್ಧತಿ ಸರಳವಾಗಿದೆ. ಮಂತ್ರಿವರ್ಯರ ಅಧೀನದಲ್ಲಿ ಸರಕಾರದ ಕಾರ್ಯದರ್ಶಿ (Secretary) ಆಡಳಿತೆಯ ಉಚ್ಚ ಅಧಿಕಾರಿಯಾಗಿ ಸಚಿವರಿಗೆ ತಮ್ಮ ಶಾಖೆಯ ಎಲ್ಲ ವಿಷಯಗಳಲ್ಲಿ ಮುಖ್ಯ ಸಲಹೆ ನೀಡುವಂತಹ ಹೊಣೆ, ಜವಾಬ್ದಾರಿಯನ್ನು ನಿರ್ವಹಿಸಬೇಕಾಗುತ್ತದೆ. ಈ ಕಾರ್ಯದರ್ಶಿಯ ಅಧೀನದಲ್ಲಿ ಡೆಪ್ಯೂಟಿ ಕಾರ್ಯದರ್ಶಿ, ಎಡಿಶನಲ್ ಕಾರ್ಯದರ್ಶಿ, ಸಹಾಯಕ ಕಾರ್ಯದರ್ಶಿ (Secretaries), Deputy Secretary, Additional Secretary Assistant Secretary, Under Secretary ಈ ಮೊದಲಾದ ಕಾರ್ಯದರ್ಶಿ ಹುದ್ದೆಗಳು ಇಲ್ಲಿವೆ.

ಇಲ್ಲಿ ಕೆಲಸ ಮಾಡುವ ಕಾರಕೂನರ ಹುದ್ದೆಗಳ ನಾಮಗಳು ಭಿನ್ನವಿರುತ್ತವೆ. ಕಾರಕೂನ — ಮೊದಲನೇ ದರ್ಜೆ, ದ್ವಿತೀಯ ದರ್ಜೆ— ಸುಪರಿಂಟೆಂಡೆಂಟ್, ಮ್ಯಾನೇಜರ ಈ ಮೊದಲಾದ ನಾಮಧೇಯಗಳಿರದೆ ಇವರ ಹುದ್ದೆಗಳ ನಾಮಗಳೂ ಕೂಡ ಭಿನ್ನವಿದ್ದು ಅವನ್ನು ಈ ಕೆಳಗೆ ಕೊಡಲಾಗಿದೆ.

ಸೆಕ್ಷನ್, ಆಫೀಸರ, ಟೆಕ್ನಿಕಲ್ ಅಸಿಸ್ಟಂಟ ಕೌನ್ಸಿಲ್ ಅಸಿಸ್ಟಂಟ, ಜ್ಯೂನಿಯರ ಅಸಿಸ್ಟಂಟ, ಅಪ್ಪರ ಡಿವ್ಹಿಜನ್ ಕ್ಲಾರ್ಕ ಈ ಮೊದಲಾದ ನೌಕರ ವರ್ಗದವರನ್ನು ಪ್ರತಿಯೊಂದು ಖಾತೆಯಲ್ಲಿ ಕಾಣಬಹುದು.

ಹೀಗಾಗಿ ಇಲ್ಲಿ ಕೆಲಸಮಾಡುವವರ ಜಾತಕದಲ್ಲಿಯ ಯೋಗಗಳು ಎಂತಿರಬೇಕು, ಕಾರಕಗ್ರಹಗಳಾವವು, ಸ್ಥಾನ-ಲಗ್ನಗಳು ಎಂತಿರಬೇಕು ಎಂಬುದನ್ನು ನೋಡುವಾ.

## ಸಾಮಾನ್ಯ ನಿಯಮಗಳು

ಕಾರಕ ಗ್ರಹ : ಇಲ್ಲಿ ಕೆಲಸ ಮಾಡುವವರಿಗೆ ಅನೇಕ ಖಾತೆಗಳ ಸಂಬಂಧ ಬರುವದರಿಂದ ಅನೇಕ ಗ್ರಹಗಳು ಕಾರಕವಾಗಿರುತ್ತವೆ. ಆದರೆ ಮಾಡುವ ಕಾರ್ಯ ಮಾತ್ರ ಕಾರಕೂನಿಕೆಯದೇ ಹೆಚ್ಚಾಗಿರುವದರಿಂದ ಕಾರಕೂನಿಕೆ ಕಾರಕಗ್ರಹಗಳಾದ ಬುಧ, ಶನಿ, ಶುಕ್ರ ಹಾಗೂ ಸ್ತ್ರೀ ರಾಶಿಯ ಚಂದ್ರ ಇವರೇ ಈ ಖಾತೆಗಳ ಕಾರಕರಾಗುತ್ತಾರೆ.

ಲಗ್ನ : ಈ ಖಾತೆಗಳ ನೌಕರದಾರರಿಗೆ ಯಾವ ಕಾರಣದಿಂದಲೂ ತಮ್ಮ ಸ್ಥಳಗಳನ್ನು ಬಿಟ್ಟು ಬೇರೆ ಕಡೆಗೆ ಹೋಗುವ ಸಂದರ್ಭಗಳು ಇಲ್ಲದಿರುವದರಿಂದ (non-tranferable jobs) ಸ್ಥಿರರಾಶಿಯ ಲಗ್ನಗಳಾದ ವೃಷಭ, ಸಿಂಹ, ವೃಶ್ಚಿಕ, ಕುಂಭ ಈ ಲಗ್ನಗಳೂ ತದನಂತರ ದ್ವಿಸ್ವಭಾವ ರಾಶಿಗಳಾದ ಮಿಥುನ, ಕನ್ಯಾ, ಧನು. ಮೀನ ಈ ಲಗ್ನಗಳೂ ಹೆಚ್ಚಾಗಿರುವದು ಕಂಡುಬರುತ್ತದೆ.

ಸ್ಥಾನ : ಸ್ಥಾನ ದೃಷ್ಟಿಯಿಂದ ನೋಡಿದರೆ ಉದ್ಯೋಗದ ಸ್ವಾಭಾವಿಕ ಸ್ಥಾನವಾದ ದಶಮಸ್ಥಾನವೇ ಈ ಖಾತೆಯ ಸ್ಥಾನವಿರುವದರಿಂದ ದಶಮೇಶನು ಬಲಾಢ್ಯನಿದ್ದ ಜಾತಕನು ಬಹು ಬೇಗ ಉತ್ಕರ್ಷಹೊಂದುವನು.

ರಾಶಿ : ರಾಶಿದೃಷ್ಟಿಯಿಂದ ನೋಡಿದರೆ ಈ ಖಾತೆಯಲ್ಲಿ ಕೆಲಸ ಮಾಡುವವರು ಹೆಚ್ಚಾಗಿ ಸ್ತ್ರೀ ರಾಶಿಯವರಿರುವದು ಕಂಡುಬರುತ್ತದೆ.

ಯೋಗಗಳು : ಬದಲಾವಣೆ ಇಲ್ಲದಿರುವದರಿಂದ ಅನೇಕ ಗ್ರಹಗಳು ದ್ವಿತೀಯ,ಚತುರ್ಥ,ಪಂಚಮ, ಷಷ್ಠ,ದಶಮ,ಏಕಾದಶ ಈ ಸ್ಥಾನಗಳಲ್ಲಿಯೇ ಹೆಚ್ಚಾಗಿರುವವು. ಅಧಿಕಾರವಿದ್ದರೂ ಚಲಾಯಿಸಲು ಸುಲಭವಾಗಿರುವದಿಲ್ಲ ವಾದ ಕಾರಣ ರವಿ, ಮಂಗಳ, ಗುರು ಈ ಗ್ರಹಗಳು ರಾಶಿ ಬಲದವರಿದ್ದು ಸ್ಥಾನಬಲವಿಲ್ಲದವರೂ, ಬುಧ, ಶುಕ್ರ, ಶನಿಯರು ಸ್ಥಾನಬಲದವರಿದ್ದು ರಾಶಿ ಬಲವಿಲ್ಲದವರೂ ಇರುತ್ತಾರೆ.

## ಕಾರ್ಯದರ್ಶಿ, ಸಹ ಯಕ ಕಾರ್ಯದರ್ಶಿ, ಡೆಪ್ಯೂಟಿ ಕಾಯದರ್ಶಿ, ಅಸಿಸ್ಟಂಟ ಕಾರ್ಯದರ್ಶಿ, ಅಂಡರ್ ಕಾರ್ಯದರ್ಶಿ

ಇವರು ಅತಿ ಉಚ್ಚ, ಹಿರಿಯ, ಅನುಭವಿಕ, ಜಾಣಾಕ್ಷ, ಎಲ್ಲರಿಂದ ಹೊಗಳಿಸಿಕೊಂಡ, ಕೆಲಸದಲ್ಲಿ ದಕ್ಷತೆ ತೋರಿಸಿದ ಇತ್ಯಾದಿ ವಿವಿಧ ಪದವಿಗಳನ್ನು ಪಡೆದವರನ್ನೂ I. A. S., I. F. S., ಇತ್ಯಾದಿ ಉಚ್ಚ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಆಡಳಿತೆಯ ಅನುಭವ ಪಡೆದವರನ್ನೂ ಈ ಹುದ್ದೆಯಲ್ಲಿ ಕಾಣುತ್ತೇವೆ. ಇವರು ಮಂತ್ರಿವರ್ಯರಿಗೆ ಮುಖ್ಯ ಸಲಹೆಗಾರರಾಗಿ ಸರಕಾರದ ಧೋರಣೆಯನ್ನು ರೂಪಿಸುವದರಲ್ಲಿ ಕಾರ್ಯವನ್ನು ಆಚರಣೆಯಲ್ಲಿ ತರುವದರಲ್ಲಿ, ಪುನಃ ವಿಮರ್ಶಿಸುವದರಲ್ಲಿ ಮಹತ್ವದ ಪಾತ್ರವನ್ನು ವಹಿಸಬೇಕಾಗುತ್ತದಲ್ಲದೆ ತಮ್ಮ ಅಧೀನದಲ್ಲಿಯ ಕೆಳಗಿನ ನೌಕರ ವರ್ಗದ ಆಡಳಿತೆಯನ್ನೂ ಕಾಯ್ದುಕೊಳ್ಳಬೇಕಾಗುತ್ತದೆ.

ಆದುದರಿಂದ ಫಲಜ್ಯೋತಿಷ್ಯದಲ್ಲಿ ಈ ತರಹದ ಅಧಿಕಾರಿಗಳ ಯೋಗಗಳೂ ವಿಚಿತ್ರವಿರುತ್ತವೆ. ಅವನ್ನು ಈ ಕೆಳಗೆ ಕೊಡಲಾಗಿದೆ :

(೧) I. A. S., I. F. S. ಶಿಕ್ಷಣ ಪಡೆದವರಿದ್ದು ಕಾರಣ ಆ ಯೋಗಗಳಂತೂ ಇವರ ಜಾತಕದಲ್ಲಿ ಇರಲೇಬೇಕು. ಇವುಗಳಿಗಾಗಿ ಇದೇ **ಪುಸ್ತಕದ ೩ ನೇ ಪ್ರಕರಣವನ್ನು** ನೋಡಿರಿ.

(೨) ಅಧಿಕಾರವಿದ್ದರೂ, ಅಧಿಕಾರ ಚಲಾಯಿಸಲು ಬಾರದಿರುವದರಿಂದ ಅಧಿಕಾರೀ ಕಾರಕಗ್ರಹಗಳಾದ ರವಿ, ಮಂಗಳರು ಸ್ಥಾನಬಲದವರಿರದೆ ರಾಶಿಬಲದವರಿರಬಹುದು.

(೩) ಅಧಿಕಾರಿ ಕಾರಕ ಗ್ರಹಗಳೂ ಹಾಗೂ ಯೋಗಕಾರಕ ಗ್ರಹಗಳೂ ಸ್ಥಾನಬಲ ರಾಶಿಬಲದವರಿದ್ದಾಗ್ಯೂ ಕೂಡ ಅಸ್ತ, ವಕ್ರ, ಪಾಪಗ್ರಹ ದೃಷ್ಟ, ಬಾಲ್ಯಾವಸ್ಥೆಯ, ವೃದ್ಧಾವಸ್ಥೆಯ ಗ್ರಹಯೋಗಗಳಿರುತ್ತವೆ.

(೪) ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿರುವವು.

(೫) ವೃಷಭ, ಮಿಥುನ, ಕನ್ಯಾ, ತುಲಾ, ಮಕರ, ಕುಂಭ, ಮೀನ, ಕರ್ಕ - ಈ ಲಗ್ನದವರೇ ಹೆಚ್ಚಾಗಿರುತ್ತಾರೆ.

(೬) ಇವರು ಒಂದು ಘಟಕದ ಪ್ರಮುಖರಿದ್ದು ಇಡೀ ರಾಜ್ಯದ ಆಡಳಿತೆಯು ಇವರ ಹೆಸರಿನಲ್ಲಿ ಸಾಗುತ್ತದೆ. ಆಡಳಿತೆಯ ವರ್ಗಗಳು ಇವರ ಆಧೀನದಲ್ಲಿದ್ದು ಚುನಾಯಿತ ವರ್ಗದವರ ಆದೇಶದಂತೆ ಆಡಳಿತೆಯನ್ನು ನಿರ್ವಹಿಸಬೇಕಾಗುವದರಿಂದ ಮತ್ತು ಚುನಾಯಿತ ವರ್ಗದವರ ಧೋರಣೆಯಂತೆಯೇ ತಮ್ಮ ಕಾರ್ಯಗಳನ್ನು ನಿರ್ವಹಿಸಬೇಕಾಗುವದರಿಂದ ಭಾಗ್ಯೇಶನಿಗಿಂತ ದಶಮೇಶನೇ ಬಲಾಢ್ಯನಿರುತ್ತಾನೆ.

ಇವರು ಮಂತ್ರಿಪರ್ಯರಿಗೆ ಮುಖ್ಯ ಸಲಹೆಗಾರರಿರುವದರಿಂದ ಹಾಗೂ ಸರಕಾರದ ಧೋರಣೆಯನ್ನು ರೂಪಿಸಬೇಕಾಗುವದರಿಂದ ಬುದ್ಧಿಕಾರಕನಾದ ಬುಧನೂ, ಜ್ಞಾನಕಾರಕನಾದ ಗುರುವೂ, ಬುದ್ಧಿ-ಜ್ಞಾನಗಳ

ಕಾರಕನಾದ ಪಂಚಮೇಶನೂ ಬಲಾಢ್ಯರಿದ್ದು ಅವರೆಲ್ಲರ ಅಥವಾ ಯಾರೀ ವರ್ಗರ ಶುಭ ಸಂಬಂಧವಾಗಲಿ ಶುಭಯೋಗವಾಗಲಿ ಇರುತ್ತದೆ.

(೮) ಇವರ ಜಾತಕದಲ್ಲಿರುವ ವೈಶಿಷ್ಟ್ಯವೆಂದರೆ, ರವಿ-ಮಂಗಳರಿಗಿಂತ ಬುಧ-ಗುರು ಹೆಚ್ಚು ಬಲಾಢ್ಯರೂ ಯೋಗಕಾರಕರೂ ಇದ್ದು ಲಗ್ನ, ಪಂಚಮ, ಭಾಗ್ಯ, ದಶಮ, ಲಾಭ ಈ ಸ್ಥಾನದಲ್ಲಿರುವರು.

(೯) ಇವರ ಜಾತಕದಲ್ಲಿ ಮಂಗಳನು ಹೆಚ್ಚಾಗಿ ದುರ್ಬಲನಿರುವನು.

(೧೦) ಇವರು ಹೆಚ್ಚಾಗಿ ಮಿಥುನ, ತುಲಾ, ಕುಂಭ, ಕರ್ಕ, ವೃಶ್ಚಿಕ, ಮಕರ, ಮೀನ ಈ ರಾಶಿಯವರೇ ಇರುತ್ತಾರೆ.

(೧೧) ದ್ವಿತೀಯೇಶನಿಗಿಂತ ಪಂಚಮೇಶನು ಹೆಚ್ಚು ಬಲಾಢ್ಯನಿರುತ್ತಾನೆ.

**ಸುಪರಿಂಟೆಂಡೆಂಟ್ಸ್, ಟೆಕ್ನಿಕಲ್ ಅಸಿಸ್ಟಂಟ, ಕೌನ್ಸಿಲ್ ಅಸಿಸ್ಟಂಟ, ಅಸಿಸ್ಟಂಟ್ಸ, ಜ್ಯೂನಿಯರ ಅಸಿಸ್ಟಂಟ, ಅಪ್ಪರ್ ಡಿವ್ಹಿಜನ್ ಕ್ಲಾರ್ಕ**

ಈ ಮೊದಲಾದ ವರ್ಗದವರ ಜಾತಕದಲ್ಲಿಯ ಯೋಗಗಳು ಹಿಂದೆ ಬರೆದ ಸಾಮಾನ್ಯ ನಿಯಮಗಳ ಹೊರತಾಗಿ ಕಾರಕೂನಿಕೆಯ ಯೋಗಗಳು ಇವರ ಜಾತಕದಲ್ಲಿರುತ್ತವೆ. ಇದಕ್ಕಾಗಿ ಇದೇ ಪುಸ್ತಕದ ೩ನೆಯ ಪ್ರಕರಣವನ್ನು ನೋಡಿರಿ. ಇನ್ನು ಇವರ ಸಂಬಳ ಪ್ರಮಾಣವು ಇತರ ಖಾತೆಯ ಕಾರಕೂನರಿಗಿಂತ ಹೆಚ್ಚಾಗಿರುವದರಿಂದ ಹೆಚ್ಚು ಸಂಬಳ ದೊರಕಿಸಲು ಕಾರಕಸ್ಥಾನವಾದ ಪಂಚಮಸ್ಥಾನವೂ ಕಾರಕಗ್ರಹವಾದ ಪಂಚಮೇಶನೂ ಬಲಾಢ್ಯರಿರುವದೇ ಇವರ ಯೋಗದಲ್ಲಿರುವ ವೈಶಿಷ್ಟ್ಯ.

## ೧೪ ರೆವ್ಹಿನ್ಯೂ ಖಾತೆ

ಸರಕಾರೀ ಖಾತೆಗಳಲ್ಲೆಲ್ಲ ಅತ್ಯಂತ ಹೆಚ್ಚಿನ ಅಧಿಕಾರಿಗಳು ಹಾಗೂ ಅಧಿಕಾರ ಇರುವ ಖಾತೆಯೆಂದರೆ ರೆವ್ಹಿನ್ಯೂ ಖಾತೆ. ಇಲ್ಲಿ ಮೊದಲು ಕೇವಲ

ಕಾರಕೂನನಾಗಿ ಸೇರಿದವನು ಯಾವದೊಂದು ವಿಶೇಷ ಅರ್ಹತೆ ಇಲ್ಲದೆ ಅಮಲ್ದಾರ ಇಲ್ಲವೆ ಮತ್ತಿತರ ಅಧಿಕಾರದ ಹುದ್ದೆಗೆ ಏರಬಹುದು.

ಉಳಿದ ಯಾವದೇ ಖಾತೆಯಲ್ಲೇ ಆಗಲಿ ಈ ತರದ ಸೌಲಭ್ಯ ಅಥವಾ ಅನುಕೂಲತೆ ಇರುವುದು ಕಂಡುಬರುವದಿಲ್ಲ. ಉದಾ ಇಂಜನಿಯರಿಂಗ ಖಾತೆಯನ್ನೇ ತೆಗೆದುಕೊಳ್ಳುವಾ. ಈ ಖಾತೆಯಲ್ಲಿ ಮೇಲಿನ ಟೆಕ್ನಿಕಲ್ ಹುದ್ದೆಗಳಿಗೆ ಟೆಕ್ನಿಕಲ್ ಶಿಕ್ಷಣದ ಅಹ ತೆಗಳು ಅವಶ್ಯ. ಈ ಕಾರಣದಿಂದ ಕಾರಕೂನರು ಮತ್ತು ಟೆಕ್ನಿಕಲ್ ಅಲ್ಲದ ಹುದ್ದೆಗಳಲ್ಲಿರುವವರು ಅಧಿಕಾರಿಗಳಾಗುವದು ಸಾಧ್ಯವಿಲ್ಲ.

ಕಾರಕ ಗ್ರಹ : ಈ ಖಾತೆಗೆ ಅನೇಕ ಗ್ರಹಗಳು ಕಾರಕವಿರುವವು, ಮುಖ್ಯವಾಗಿ ರೆವ್ಹಿನ್ಯೂ ಕಾರಕನಾದ ಶನಿಯೂ ಕಾರಕೂನಿಕೆ ಕಾರಕನಾದ ಬುಧನೂ ಅಧಿಕಾರಕಾರಕ ಹಾಗೂ ಆಡಳಿತೆಕಾರಕರಾದ ರವಿ, ಗುರು, ಮಂಗಳ ಬಲಾಢ್ಯರಿರಬೇಕು.

ಸ್ಥಾನ : ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಈ ಖಾತೆಗೆ ದಶಮ ಸ್ಥಾನವೇ ಮೂಲ ಹಾಗು ಮುಖ್ಯವಿರುವದರಿಂದ ದಶಮೇಶನೂ ದಶಮಸ್ಥಾನದಲ್ಲಿರುವ ಗ್ರಹವೂ ನೈಸರ್ಗಿಕವಾಗಿ ದಶಮೇಶನಾದ ಶನಿಯೂ ಬಲಾಢ್ಯರಿರಬೇಕು,

ಲಗ್ನ : ರೆವ್ಹಿನ್ಯೂ ಆಫೀಸಿನಲ್ಲಿ ಕೆಲಸ ಮಾಡುತ್ತಿರುವವರು ಹೆಚ್ಚಾಗಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಲ, ವೃಶ್ಚಿಕ, ಮಕರ, ಕುಂಭ ಈ ರಾಶಿಯ ಲಗ್ನದವರಿರುವುದು ಕಂಡುಬರುತ್ತದೆ.

ತಹಸೀಲ್ದಾರ, ಅಸಿಸ್ಟಂಟ ಕಮೀಶನರ,
ಡೆಪ್ಯೂಟಿ ಕಮೀಶನರ, ಕಮೀಶನರ

ಈ ತರಹದ ಅಧಿಕಾರಿಗಳಾಗಲು ಜಾತಕದಲ್ಲಿ ಅನೇಕ ಗ್ರಹಗಳು ಬಲಾಢ್ಯವಿರಬೇಕು. ಅಥವಾ ೭ ಗ್ರಹಗಳು ಸ್ವಗೃಹ ರಾಶಿಯ ಇಲ್ಲವೆ

೩ ಗ್ರಹಗಳು ಉಚ್ಚ ಹಾಗೂ ೪ ಗ್ರಹಗಳು ಸ್ವಗೃಹ ದವಿರಬೇಕು. ಏಕೆಂದರೆ ತಾಲೂಕಿನಲ್ಲಿ ಇಲ್ಲವೆ ಜಿಲ್ಲೆಯಲ್ಲಿ ನಡೆಯುವ ಎಲ್ಲ ಕಾರ್ಯಕ್ಕೂ ಇವರದೇ ಮೇಲ್ವಿಚಾರಣೆ ಇರುತ್ತದೆ. ಇವರು ಆಡಳಿತೆಗಾರರೂ ಮೇಲ್ವಿಚಾರಕರೂ ನ್ಯಾಯಾಧೀಶರೂ ಇರುವರಲ್ಲದೆ ಕಾಯಿದೆಯನ್ನು ಅಮಲಿನಲ್ಲಿ ತರುವದಕ್ಕೂ ಕಾರಣರು. ಶಾಂತತೆಯನ್ನು (Law end Order) ಕಾಪಾಡುವದೂ ಇವರ ಕೆಲಸ, ಇದಲ್ಲದೆ ತಾಲೂಕ. ಜಿಲ್ಲೆಯಲ್ಲಿ ಇರುವ ಎಲ್ಲ ಖಾತೆಗಳ ಅಧಿಕಾರಿಗಳ ಮೇಲೂ ಕೂಡ ಇವರ ಅಧಿಕಾರ ನಡೆಯುತ್ತದೆ. (Co-ordination meeting).

ಅಂತೆಯೇ ಇವರಿಗೆ ಎಲ್ಲ ವಿಷಯಗಳ ಜ್ಞಾನವಿರಲು ಅನೇಕ ಗ್ರಹಗಳು ಬಲಾಢ್ಯವಿರಬೇಕು. ಕೇವಲ ಒಂದೆರಡು ಗ್ರಹಗಳು ಬಲಾಢ್ಯವಿದ್ದ ವ್ಯಕ್ತಿಗಳು ಯಶಸ್ವೀ ಅಧಿಕಾರಿಗಳಾಗಲಾರರು.

ಇವರು ನ್ಯಾಯದಾನದ ಕಾರ್ಯ ಮಾಡುವದರಿಂದ ನ್ಯಾಯಾಧೀಶ ಕಾರಕನಾದ ಗುರುವೂ ಕಾಯದೆ ಹಾಗೂ ರೆವ್ಹಿನ್ಯೂ ಕಾರಕನಾದ ಶನಿಯೂ ಕಾಯದೆಯನ್ನು ಅಮಲಿನಲ್ಲಿ ತರಲು ಕಾರಕನಾದ ಮಂಗಳನೂ ಬಲಾಢ್ಯರಿರುವರಲ್ಲದೆ ತಾಲೂಕ ಇಲ್ಲವೆ ಜಿಲ್ಲೆಯ ಮೋಜಣಿಗಾರಿಕೆಯ ಹಾಗೂ ಮೇಲ್ವಿಚಾರಣಾ ಕಾರಕನೂ ಆಡಳಿತೆಯ ಕಾರಕನೂ ಆದ ರವಿಯೂ ಬಲಾಢ್ಯನಿರಬೇಕು.

## ಬಿ. ಡಿ. ಓ., ಮುನಸಿಪಲ್ ಅಡ್ಮಿನಿಸ್ಟ್ರೇಟರ, ಚೀಫ ಆಫೀಸರ, ಹೆಡ್‌ಕ್ವಾರ್ಟರ ಅಸಿಸ್ಟಂಟ

ಈ ತರಹದ ಹುದ್ದೆಯನ್ನು ಪಡೆಯುವವರು ಸ್ವತಂತ್ರವಾದ ಅಧಿಕಾರವನ್ನು ಚಲಾಯಿಸಲಾರರು (Partly officer). ಇವರ ಜಾತಕದಲ್ಲಿ ರವಿ-ಮಂಗಳರು ದುರ್ಬಲರಿರುವರು. ಇಲ್ಲವೆ ಅನೇಕ ಗ್ರಹಗಳು ಸ್ಥಾನಬಲದವರಿರದೆ ರಾಶಿಬಲದವರಿರುತ್ತಾರೆ.

ಇವರ ಜಾತಕದಲ್ಲಿರುವ ಯೋಗಗಳು : (೧) ರವಿಯು ಬಲಾಢ್ಯನಿದ್ದರೂ ಮಂಗಳನು ದುರ್ಬಲನಿರುವನು. (೨) ಅನೇಕ ಗ್ರಹಗಳು

ಹೆಚ್ಚಾಗಿ ಸ್ತ್ರೀ ರಾಶಿಯಲ್ಲಿಯೇ ಇರುವವು. (೩) ಲಗ್ನವೂ ಕೂಡ ವೃಷಭ, ಮಿಥುನ, ಕನ್ಯಾ, ತುಲಾ, ಮಕರ, ಕುಂಭ ಈ ಲಗ್ನಗಳಿರುತ್ತವೆ. (೪) ಸ್ಥಾನಿಕ ಸಂಸ್ಥೆಗಳ ಕಾರಕನೂ ಪಂಚಾಯತಿ ಕಾರಕನೂ ಆದ ಶನಿಯು ಬಲಾಢ್ಯನಿರುವನು.

ಚಿಟ್ನೀಸ, ಕಲೆಕ್ಟರರ ಹೆಡ್‌ಕ್ಲಾರ್ಕ,
ಕಮೀಶನರ ಆಫೀಸಿನಲ್ಲಿ ಅಸಿಸ್ಟಂಟ ಕಮೀಶನರ,
ಕಲೆಕ್ಟರರ ಪರ್ಸನಲ್ ಅಸಿಸ್ಟಂಟ, ಶಿರಸ್ತೇದಾರ

ಈ ತರಹದ ಹುದ್ದೆಯನ್ನು ಪಡೆಯುವ ಇವರ ಜಾತಕದಲ್ಲಿ ರವಿ–ಮಂಗಳರು ದುರ್ಬಲರಿರುವರು. ಬುಧ–ಗುರು ಗ್ರಹಗಳು ಬಲಾಢ್ಯವಿರುತ್ತವೆ.

ಕಾರಕೂನಿ ಕಾರಕನಾದ ಬುಧನೂ ಸೇವಾವೃತ್ತಿ ಕಾರಕನಾದ ಶನಿಯೂ ಸ್ತ್ರೀ ರಾಶಿಯ ಚಂದ್ರನೂ ಬಲಾಢ್ಯರಿರುತ್ತಾರೆ.

ಲಗ್ನ : ವೃಷಭ, ಮಿಥುನ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ ವಿವರಗಳನ್ನು (೩) ನೇ ಪ್ರಕರಣದಲ್ಲಿ ಕೊಡಲಾಗಿದೆ.

ತಲಾಠಿ, ಸರ್ಕಲ್ ಇನ್ಸಪೆಕ್ಟರ, ಸರ್ಕಲ್ ಆಫೀಸರ, ಗ್ರಾಮಸೇವಕ,

ಸರಕಾರ ಹಾಗೂ ಗ್ರಾಮಸ್ಥರ ನಡುವೆ ಶುಭ ಹಾಗೂ ಸುಮಧುರ ಸಂಬಂಧವನ್ನು ಬೆಳೆಸಲು ಈ ನೌಕರದಾರರೆ ಕಾರಣರೆಂದು ಹೇಳಬಹುದು.

ಕಾರಕ ಗ್ರಹ : ಇವರ ಜಾತಕದಲ್ಲಿ ಗ್ರಾಮಕಾರಕನಾದ ಶನಿಯೇ ಕಾರಕನಿರುವನು. ಶನಿಯ ತರುವಾಯ ಚಂದ್ರನೂ ಯೋಗಕಾರಕನಾಗುವನು. ಚತುರ್ಥೇಶ ಹಾಗೂ ಷಷ್ಠೇಶರೂ ಕೂಡ ಬಲಾಢ್ಯರಿರುವದು ಕಂಡು ಬರುತ್ತದೆ.

ಇವರಿಗೆ ಹೊರವಲಯದ ನಿರ್ವಹಣಾ Outdoor executive work ಕೆಲಸವಿರುವದರಿಂದ ಅನೇಕ ಗ್ರಹಗಳು ಇವರ ಜಾತಕದಲ್ಲಿ ಲಗ್ನ, ತೃತೀಯ,

ಸಪ್ತಮ, ಭಾಗ್ಯ, ವ್ಯಯ ಈ ಸ್ಥಾನದಲ್ಲಿ ಇರುವದಲ್ಲದೆ ಅನೇಕ ಗ್ರಹಗಳು ಚರ ರಾಶಿಯಲ್ಲಿರುವವು. ಇಲ್ಲವೆ ಲಗ್ನವೂ ಚರ ರಾಶಿಯಲ್ಲಿರುತ್ತದೆ.

ಪೃಥ್ವಿ ರಾಶಿಗಳಾದ ವೃಷಭ, ಕನ್ಯಾ ಮಕರ ಈ ರಾಶಿಯವರೇ ಈ ಹುದ್ದೆಯಲ್ಲಿರುವದು ಹೆಚ್ಚಾಗಿ ಕಂಡುಬರುತ್ತದೆ.

## Department of Settlement & Land Records
## (ವೋಜಣಿ ಖಾತೆ)

**ಕಾರಕಗ್ರಹ :** ಭೂಮಿ, ಹೊಲ-ತೋಟಗಳ ಕೆಲಸವೇ ಮುಖ್ಯವಿದ್ದು, ಈ ತುಂಡು ಭೂಮಿಯನ್ನು ಜೋಡಿಸುವುದು, ಹೊಲಗಳ ವೋಜಣೆ, ಮೊದಲಾದ ವಿಷಯಗಳೇ ಮುಖ್ಯವಿರುವ ಈ ಖಾತೆಯ ಕಾರಕ ಗಹಗಳೆಂದರೆ ಶನಿ, ಚಂದ್ರ, ಹಾಗೂ ಚತುರ್ಥೇಶರು. ಈ ಮೂರು ಗ್ರಹಗಳು ಬಲಾಢ್ಯವಿದ್ದ ಜಾತಕನು ಈ ಖಾತೆಯಲ್ಲಿ ಅಭ್ಯುದಯವನ್ನು ಹೊಂದುವನು.

**ಲಗ್ನ :** ಮೇಷ, ವೃಷಭ, ಕರ್ಕ, ತುಲಾ, ವೃಶ್ಚಿಕ, ಕಂಭ ಈ ಲಗ್ನಗಳೇ ಈ ಖಾತೆಯ ಕಾರಕ ಲಗ್ನಗಳಾಗಿರುತ್ತವೆ.

**ಸ್ಥಾನ :** ಈ ಖಾತೆಯ ಕಾರಕಸ್ಥಾನವೆಂದರೆ ಚತುರ್ಥ ಸ್ಥಾನವು. ಚತುರ್ಥ ಸ್ಥಾನವೇ ಮೂಲ ಹಾಗೂ ಮುಖ್ಯವಾದುದು. ಇದರ ನಂತರ ರೆವಿನ್ಯೂ ಖಾತೆಯ ಸ್ಥಾನವಾದ ದಶಮ ಸ್ಥಾನವೂ ಕಾರಕವಾಗುತ್ತದೆ. ಏಕೆಂದರೆ ರೆವಿನ್ಯೂಖಾತೆಯ ಸಂಬಂಧವು ಈ ಖಾತೆಗೆ ಬರುತ್ತದೆ.

## ಕಮೀಷನರ್, ಕನ್ಸಾಲಿಡೇಷನ್ ಆಫೀಸರ್, ಸುಪರಿಂಟೆಂಡೆಂಟ್ ಆಫ್ ಲ್ಯಾಂಡ್ ರಿಕಾರ್ಡ್ಸ್

ಈ ಮೊದಲಾದ ಹುದ್ದೆಗಳನ್ನು ಪಡೆಯಲು ಖಾತೆಯ ಕಾರಕ ಗ್ರಹಗಳಾದ ಶನಿ, ಚಂದ್ರರು ಅಧಿಕಾರಿ ಕಾರಕ ಹಾಗೂ ಸರಕಾರಿ ನೌಕರೀ ಕಾರಕ ಗ್ರಹವಾದ ರವಿಯೂ ಬಲಾಢ್ಯರಿರುವುದಲ್ಲದೆ, ನ್ಯಾಯ ಖಾತೆಯ ಕಾರಕನಾದ ಗುರುವೂ ಬಲಾಢ್ಯನಿರುತ್ತಾನೆ.

ಚತುರ್ಥೇಶ ಹಾಗೂ ದಶಮೇಶರು ಬಲಾಢ್ಯರಿದ್ದು, ಚಂದ್ರನು ಹೆಚ್ಚಾಗಿ ಪುರುಷ ರಾಶಿಯಲ್ಲಿರುತ್ತಾನೆ.

### ಸೂಪರ್‌ವೈಜರ್, ಸರ್ವ್ಹೆಯರ್, ಡಿಸ್ಟ್ರಿಕ್ಟ ಸರ್ವ್ಹೆ ಆಫೀಸರ್, ಡಿಸ್ಟ್ರಿಕ್ಟ ಇನ್ಸಪೆಕ್ಟರ್

ಈ ಮೊದಲಾದ ನೌಕರದಾರ ವರ್ಗದವರಲ್ಲಿ ಖಾತೆಯ ಕಾರಕ ಗ್ರಹವಾದ ಶನಿ-ಚಂದ್ರರು ಕೇವಲ ರಾಶಿಬಲದವರಿದ್ದು ಯೋಗಕಾರಕರೂ ಇರುತ್ತಾರೆ, ಆದರೆ ಸ್ಥಾನಬಲದವರಿರುವುದಿಲ್ಲ. ತಿರುಗಾಟವೇ ಇವರ ಮುಖ್ಯ ಕೆಲಸವಿರುವುದರಿಂದ ಅನೇಕ ಗ್ರಹಗಳು ಹೆಚ್ಚಾಗಿ ಲಗ್ನ, ತೃತೀಯ, ಸಪ್ತಮ, ಭಾಗ್ಯ, ವ್ಯಯ, ಈ ಸ್ಥಾನದಲ್ಲಿ ಇರುವವು.

### ಸ್ಟ್ಯಾಂಪ್ಸ ಹಾಗೂ ರಿಜಿಸ್ಟ್ರೇಷನ್ ಖಾತೆ

**ಕಾರಕಗ್ರಹ :** ಈ ಖಾತೆಯ ಕಾರಕಗ್ರಹವೆಂದರೆ ಗುರುವು. ಖರೀದಿ, ವತ್ತಿ, ವಿವಾಹ ಮೊದಲಾದ ಮಹತ್ವದ ದಾಖಲೆ ಕಾಗದಪತ್ರಗಳನ್ನು ಸರಕಾರೀ ರಜಿಸ್ಟರ್ ಆಗಲು ಗುರುವೇ ಕಾರಕನಿರುತ್ತಾನೆ. ಗುರುವಿನ ತರುವಾಯ ಬುಧನೂ ಕಾರಕನಾಗುತ್ತಾನೆ. ಏಕೆಂದರೆ ರೆವ್ಹಿನ್ಯೂ ಖಾತೆಯ ಸಂಬಂಧ ಈ ಖಾತೆಗೆ ಬರುವದರಿಂದಲೂ ಸ್ಟ್ಯಾಂಪಗಳ ಕಾರಕನಾದ ಬುಧನೂ ಈ ಖಾತೆಗೆ ಕಾರಕನಾಗುತ್ತಾನೆ.

**ಕಾರಕ ಲಗ್ನ :** ಮೀನ, ಮಿಥುನ, ಧನು, ಕನ್ಯಾ ಈ ಲಗ್ನಗಳೇ ಈ ಖಾತೆಯ ಕಾರಕ ಲಗ್ನಗಳಿರುವವು. ಇವುಗಳನಂತರ ಮೇಷ, ಕರ್ಕ, ಮಕರ ಈ ಲಗ್ನಗಳೂ ಕಾರಕವಾಗುವವು.

**ಕಾರಕ ಸ್ಥಾನ :** ಈ ಖಾತೆಗೆ ಅನೇಕ ಸ್ಥಾನಗಳು ಕಾರಕವಾಗುತ್ತವೆ. ಸ್ಥಾವರ ಇಸ್ಟೇಟ್, ಜಮೀನು-ಜುಮ್ಲುಗಳ ಸಂಬಂಧ ಬರುವುದರಿಂದಲೂ ಚತುರ್ಥ ಸ್ಥಾನವೂ ವಿವಾಹ ಮೊದಲಾದ ಧಾರ್ಮಿಕ ಸಂಬಂಧ ಬರುವುದ

ರಿಂದ ನವಮ ಸ್ಥಾನವೂ ರೆವಿನ್ಯೂ ಖಾತೆಯ ಸಂಬಂಧ ಬರುವುದರಿದ ದಶಮ ಸ್ಥಾನವೂ ಕಾರಕರಿರುವುದರಿಂದ ಚತುರ್ಥೇಶ, ದಶಮೇಶರೂ ಕೂಡ ಬಲಾಢ್ಯರಿರಬೇಕು.

ರಾಶಿ : ಇಂತಹ ರಾಶಿಯವರೇ ಈ ಖಾತೆಯಲ್ಲಿರಬೇಕೆಂಬ ನಿಯಮ ವಿಲ್ಲ.

ಯೋಗ : ಈ ಖಾತೆಯ ನೌಕರದಾರರಲ್ಲಿರುವ ವಿಶಿಷ್ಟ ಯೋಗ ವೆಂದರೆ ಅಷ್ಟಮಸ್ಥಾನವೂ ಅಷ್ಟಮೇಶನೂ ಬಲಾಢ್ಯರಿರುತ್ತಾರೆ.

**ಸುಪರಿಂಟೆಂಡೆಂಟ್ ಆಫ್ ಸ್ಟ್ಯಾಂಪ್ಸ್, ಇನ್ಸಪೆಕ್ಟರ್–ಆಫ್ ರಜಿಸ್ಟ್ರೇಷನ್, ಸಬ್–ರಿಜಿಸ್ಟ್ರಾರ್**

ಈ ನೌಕರದಾರರೇ ಖಾತೆಯ ಅತಿಪರಿಚಿತ ವ್ಯಕ್ತಿಗಳು. ಇವರ ಜಾತಕದಲ್ಲಿ ಮೇಲೆ ಬರೆದ ಎಲ್ಲ ಸಾಮಾನ್ಯ ನಿಯಮಗಳ ಹೊರತಾಗಿ ಅಷ್ಟ ಮೇಶನೂ ಅಷ್ಟಮ ಸ್ಥಾನವೂ ಬುಧನೂ ಹೆಚ್ಚು ಬಲಾಢ್ಯರಿರುವುದು ಕಂಡು ಬರುತ್ತದೆ.

## ೧೫ ಒಕ್ಕಲುತನ ಖಾತೆ

ರಾಜ್ಯ ಸರಕಾರದ ಖಾತೆಗಳಲ್ಲಿ ರೆವಿನ್ಯೂ ಖಾತೆಯ ತರುವಾಯ ಅತ್ಯಂತ ದೊಡ್ಡ ಖಾತೆಯೆಂದರೆ ಒಕ್ಕಲತನ ಖಾತೆಯೆಂದೇ ಹೇಳಬಹುದು. ಒಕ್ಕಲತನ ಪ್ರಧಾನವಾದ ನಮ್ಮ ದೇಶದಲ್ಲಿ ೧೯೪೭ ರಿಂದ ಅನೇಕ ರೀತಿಯ ವ್ಯವಸಾಯ ಸುಧಾರಣೆ ನಡೆಯುತ್ತಿದ್ದು ಇತ್ತೀಚೆಗೆ ಇದರ ಬಗ್ಗೆ ಹೆಚ್ಚಿನ ಗಮನ ನೀಡಿರುವುದು ಅಭಿನಂದನಾರ್ಹವೇ. ಆದರೂ ಇದರಲ್ಲಿ ಅಷ್ಟರಿ ಯೇನಿಲ್ಲ. ಕಾರಣ ಎಂದೋ ಆಗಬೇಕಾದುದು ಈಗ ಆರಂಭವಾಗಿದೆ.

ದಿನೇ ದಿನೇ ಏರುತ್ತಿರುವ ರಾಷ್ಟ್ರದ ಜನಸಂಖ್ಯೆಗನುಣವಾಗಿ ಆಹಾರ ಪರಿಸ್ಥಿತಿಯನ್ನು ಉತ್ತಮಗೊಳಿಸಲು ಒಕ್ಕಲತನದ ಚಟುವಟಿಕೆಗಳು

ಎಂದಿಗಿಂತಲೂ ಇಂದು ಬಹಳವಾಗಿ ಹೆಚ್ಚಿದ್ದು ಕೇಂದ್ರ ಸರಕಾರದ ಕಣ್ಣು ಇದರ ಮೇಲೆ ಬಿದ್ದಿದೆ. ರೈಲ್ವೆ, ಅಂಚೆ ಮೊದಲಾದ ಖಾತೆಗಳಂತೆಯೇ ಈ ಖಾತೆಯಯೂ ಸಹ ಇನ್ನು ಕೆಲ ಸಮಯದಲ್ಲಿಯೇ ಕೇಂದ್ರ ಸರಕಾರದ ಖಾತೆಯನಿಸಿಕೊಳ್ಳಬಹುದೆಂದು ಜ್ಯೋತಿಷ್ಯಶ್ಶಾಸ್ತ್ರದ ಆಧಾರದ ಮೇಲಿಂದ ಹೇಳಬಹುದು.

ಫಲಜ್ಯೋತಿಷ್ಯದಲ್ಲಿ ಈ ಖಾತೆಯಲ್ಲಿ ನೌಕರಿ ಮಾಡಲು ಜಾತಕ ಹೇಗಿರಬೇಕೆಂಬುದನ್ನು ಪರಿಶೀಲಿಸೋಣ.

ಕಾರಕ ಗ್ರಹಗಳು : ಒಕ್ಕಲುತನ ಉದ್ಯೋಗಕ್ಕೆ ಕಾರಕನಾದ ಶನಿಯೇ ಈ ಖಾತೆಗೂ ಕಾರಕನಾಗುವನು. ಕೇವಲ ಒಕ್ಕಲುತನ ಉದ್ಯೋಗ ಕೈ ಕೊಳ್ಳಲು ಶನಿಯೊಬ್ಬನೇ ಬಲಾಢ್ಯನಿದ್ದರೆ ನಡೆದೀತು. ಆದರೆ ಈ ಖಾತೆಯಲ್ಲಿ ನೌಕರದಾರರೆಂದು ಕಾರ್ಯ ಮಾಡಲು ಶನಿಯ ಜೊತೆಗೆ ಇತರ ಗ್ರಹಗಳ ಬಲಾಬಲಗಳನ್ನೂ ನೋಡಬೇಕಾಗುತ್ತದೆ.

ಯಾವದೇ ಖಾತಯಳ್ಳಿ ವರಿಷ್ಠ ಅಧಿಕಾರಿ, ಅಮಲ್ದಾರರೆಂದು ಕಾರ್ಯ ಮಾಡಲು ರವಿ-ಗುರು ಗ್ರಹಗಳ ಬಲಾಬಲವಂತೂ ಬೇಕೇಬೇಕು. ಶನಿಯ ಜೊತೆಗೆ ರವಿ, ಗುರು ಗ್ರಹಗಳ ಬಲಾಬಲವನ್ನೂ ಪರಿಶೀಲಿಸಬೇಕಾಗುತ್ತದೆ.

ಸ್ಥಾನ : ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಹೊಲ, ಮನೆಗಳ ಸ್ಥಾನವಾದ ಚತುರ್ಥಸ್ಥಾನವೇ ಈ ಖಾತೆಯ ಕಾರಕ ಸ್ಥಾನವಾಗಿರುತ್ತದೆ.

ಚತುರ್ಥ ಸ್ಥಾನದ ನಂತರ ಒಕ್ಕಲುತನಕ್ಕೆ ಪೂರಕ ಸ್ಥಾನವಾದ ಹಾಗೂ ದನಕರುಗಳ ಸ್ಥಾನವಾದ ಷಷ್ಠ ಹಾಗೂ ದ್ವಾದಶ ಸ್ಥಾನಗಳನ್ನೂ ಕೂಡ ಪರಿಶೀಲಿಸಬೇಕಾಗುತ್ತದೆ.

ಲಗ್ನ : ಒಕ್ಕಲುತನ ಖಾತೆಯಲ್ಲಿ ಕೆಲಸ ಮಾಡುತ್ತಿರುವವರು ಹೆಚ್ಚಾಗಿ ಮೇಷ, ವೃಷಭ, ಕರ್ಕ, ತುಲಾ, ವೃಶ್ಚಿಕ, ಮಕರ, ಕುಂಭ, ಮೀನ ಈ ಲಗ್ನದವರಿರುವದು ಕಂಡುಬರುತ್ತದೆ.

ರಾಶಿ : ಈ ಖಾತೆಯಲ್ಲಿ ಕೆಲಸ ಮಾಡುತ್ತಿರುವವರು ಹೆಚ್ಚಾಗಿ ಪೃಥ್ವಿ ರಾಶಿಯವರು ಇದ್ದಾಗ್ಯೂ ಆಡಳಿತೆ ಕಾರ್ಯವನ್ನು ನಿರ್ವಹಿಸುವ ಇವರು ಹೆಚ್ಚಾಗಿ ಅಗ್ನಿ ಇಲ್ಲವೆ ಜಲರಾಶಿಯವರಿರುವದು ಕಂಡುಬರುತ್ತದೆ.

ವಿಭಾಗಗಳು :

ಈ ಖಾತೆಯಲ್ಲಿ ಪ್ರಾಮುಖ್ಯವಾಗಿ ಎರಡು ವಿಭಾಗಗಳಿವೆ.

(೧) ಶಿಕ್ಷಣ ಹಾಗೂ ಸಂಶೋಧನೆ.

(೨) ಹೊರಾಡಳಿತ ಹಾಗೂ ವಿಸ್ತರಣೆ.

ಶಿಕ್ಷಣ ಹಾಗೂ ಸಂಶೋಧನೆಯ ಅಧಿಕಾರಿಗಳು

ಈ ಖಾತೆಯ ಕಾಲೇಜ ಅಧ್ಯಾಪಕ, ಮುಖ್ಯಾಧ್ಯಾಪಕ, ಗ್ರಾಮಸೇವಕ ಟ್ರೇನಿಂಗ ಕೇಂದ್ರದ ಶಿಕ್ಷಕರು, ಒಕ್ಕಲುತನ ಶಾಲೆಯ ಶಿಕ್ಷಕ-ಹೆಡ್‌ಮಾಸ್ತರ ಇತ್ಯಾದಿ ಶಿಕ್ಷಣಕ್ಕೆ ಸಂಬಂಧಿಸಿದ ಹುದ್ದೆಯನ್ನು ಪಡೆಯಲು ಖಾತೆಯ ಕಾರಕನಾದ ಶನಿಯೊಂದಿಗೆ ಶಿಕ್ಷಕ ವೃತ್ತಿಯ ಕಾರಕನಾದ ಗುರುವನ್ನೂ ಪರಿಶೀಲಿಸಬೇಕಲ್ಲದೆ ಗುರುವೂ ಬಲಾಢ್ಯನಿರಬೇಕು.

ಸ್ಥಾನ :- ಖಾತೆಯ ಕಾರಕಸ್ಥಾನಕ್ಕಿಂತ ಹೆಚ್ಚಾಗಿ ಪಂಚಮ, ದ್ವಿತೀಯ ಸ್ಥಾನವನ್ನೂ ಸ್ಥಾನಾಧೀಶರನ್ನೂ ಪರಿಶೀಲಿಸಬೇಕಾಗುತ್ತದೆ.

ಬೆಳೆಗಳ ಸ್ಪೇಶಲಿಸ್ಟ ಅಧಿಕಾರಿ

ಸರಕಾರೀ ಬೆಳೆಸಂಶೋಧನಾ ಕೇಂದ್ರಗಳಲ್ಲಿ ಹಾಗೂ ಫಾರ್ಮುಗಳಲ್ಲಿ ಕೆಲಸ ಮಾಡಲು ಜಾತಕದಲ್ಲಿ ಖಾತೆಯ ಕಾರಕನಾದ ಶನಿಯ ಸಂಗಡ ಧಾನ್ಯಕಾರಕನೂ ಖಾದ್ಯಕಾರಕನೂ ಆದ ಚಂದ್ರನೂ, ತೋಟಗಾರಿಕೆ ಖಾತೆಯ ಕಾರಕನಾದ ಶುಕ್ರನೂ ಬಲಾಢ್ಯರಿರಬೇಕು.

ಸ್ಥಾನ : ಖಾತೆಯ ಸ್ಥಾನವಾದ ಚತುರ್ಥ ಸ್ಥಾನವಲ್ಲದೆ ಷಷ್ಠ, ದ್ವಾದಶ ಸ್ಥಾನಗಳನ್ನೂ ಪರಿಶೀಲಿಸಬೇಕಾಗುತ್ತದೆ.

## ಅಗ್ರಿಕಲ್ಚರಲ್ ಇಂಜನಿಯರ್ಸ್

ಟ್ರ್ಯಾಕ್ಟರ, ಬುಲ್‌ಡೋಜರ, ಆಯಿಲ್ ಇಂಜಿನ ಇತ್ಯಾದಿ ಒಕ್ಕಲು ತನಕ್ಕೆ ಸಂಬಂಧಿಸಿದ ಮಶಿನರಿಗಳ ಸಂಗಡ ಕಾರ್ಯ ಮಾಡುವ ಇಂಜಿನಿಯರ ಹಾಗೂ ಇತರ ನೌಕರ ವರ್ಗದ ಜನರ ಜಾತಕದಲ್ಲಿ ಈ ಕೆಳಗೆ ಕಾಣಿಸಿದ ಯೋಗಗಳಿರುತ್ತವೆ. ಖಾತೆಯ ಕಾರಕನಾದ ಶನಿಯು ಸಂಗಡ ಇಂಜಿನಿಯರ ಕಾರಕನಾದ ಮಂಗಳನೂ ಅಮಲ್ದಾರ ಕಾರಕನಾದ ರವಿಯೂ ಬಲಾಢ್ಯರಿರು ತ್ತಾರೆ.

ಸ್ಥಾನ : ಖಾತೆಯ ಕಾರಕವಾದ ಚತುರ್ಥ ಸ್ಥಾನದ ಸಂಗಡ ದಶಮ ಸ್ಥಾನವನ್ನೂ ಪರಿಶೀಲಿಸಬೇಕಾಗುತ್ತದೆ.

## ಸಾಯಿಲ್ ಕಂಜರವೇಟರ, ಡಿವ್ಹಿಜನಲ್ ಆಫೀಸರ, ಸಬ್-ಡಿವ್ಹಿಜನಲ್ ಆಫೀಸರ

ಈ ತರಹದ ಮಣ್ಣಿಗೆ ಸಂಬಂಧಿಸಿದ ಉದ್ಯೋಗಕ್ಕೆ ಚತುರ್ಥ ಸ್ಥಾನ, ಚತುರ್ಥೇಶ ಹಾಗೂ ಶನಿ, ಚಂದ್ರ, ಶುಕ್ರ ಈ ಗ್ರಹಗಳನ್ನು ಹೆಚ್ಚಾಗಿ ಪರಿಶೀಲಿಸಬೇಕಾಗುತ್ತದೆ. ಅಲ್ಲದೆ ಪೃಥ್ವಿರಾಶಿಗಳೂ ಬಲಾಢ್ಯ ವಿರಬೇಕು.

## ಅಗ್ರಿಕಲ್ಚರಲ್ ಡೆಮೊನ್‌ಸ್ಟ್ರೇಟರ ಹಾಗೂ ಒಕ್ಕಲುತನದ ಅಧಿಕಾರಿ

ಕಾರಕ ಗ್ರಹ : ಖಾತೆಯ ಕಾರಕನಾದ ಶನಿಯು ಬಲಾಢ್ಯ ಮತ್ತು ಯೋಗಕಾರಕನೂ ಇರಬೇಕಲ್ಲದೆ ಕಾರಕೂನಿಕೆಯ ಗ್ರಹವಾದ ಬುಧನೂ ಸ್ತ್ರೀ ರಾಶಿಯ ಚಂದ್ರನೂ ಬಲಾಢ್ಯರಿರುತ್ತಾರೆ.

ಸ್ಥಾನ : ಖಾತೆಯ ಸ್ಥಾನವಾದ ಚತುರ್ಥ ಸ್ಥಾನ ಹಾಗೂ ದಶಮ ಸ್ಥಾನ, ಪಂಚಮ ಸ್ಥಾನ ಬಲಾಢ್ಯವಿದ್ದು ಸ್ಥಾನಾಧೀಶರೂ ಬಲಾಢ್ಯರಿರಬೇಕು.

ಡೈರೆಕ್ಟರ, ಡೆಪ್ಯೂಟಿ ಡೈರೆಕ್ಟರ, ಜೊಯಿಂಟ ಡೈರೆಕ್ಟರ, ಜಿಲ್ಹಾಧಿಕಾರಿ

ಇವೇ ಮೊದಲಾದ ಈ ಖಾತೆಯ ವರಿಷ್ಠ ಅಧಿಕಾರಿಗಳಾಗಲು ಜಾತಕವು ವೆಶಿಷ್ಟ್ಯಪೂರ್ಣವಿರುತ್ತದೆ. ಇವರ ಕೆಲಸ ಮೇಲ್ವಿಚಾರಣೆ ಹಾಗೂ ಆಡಳಿತೆಗಳೇ ಹೆಚ್ಚು ಪ್ರಧಾನವಿರುವದರಿಂದ ಖಾತೆಯ ಕಾರಕನಾದ ಶನಿಯು ಕೇವಲ ರಾಶಿಬಲದನಿದ್ದು ಸ್ಥಾನಬಲದವನೂ ಯೋಗಕಾರಕನೂ ಇರುವದಿಲ್ಲ.

ಆಡಳಿತೆಯ ಕಾರಕ ಗ್ರಹವಾದ ರವಿಯೂ ಮೇಲ್ವಿಚಾರಣೆ ಕಾರಕ ಗ್ರಹವಾದ ಗುರುವೂ ಹೊರಾಡಳಿತೆ ಕಾರಕ ಗ್ರಹವಾದ ಮಂಗಳನೂ ಬಲಾಢ್ಯರೂ ಯೋಗಕಾರಕರೂ (ಸ್ಥಾನಬಲ ಹಾಗು ರಾಶಿಬಲ) ಇರುತ್ತಾರೆ.

ಲಗ್ನದ ದೃಷ್ಟಿಯಿಂದ ವಿಚಾರಿಸಲಾಗಿ ಆಡಳಿತೆಯ ಕಾರ್ಯಕ್ಕೆ ಪೋಷಕ ಲಗ್ನಗಳಾದ, ಮೇಷ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನಗಳೇ ಹೆಚ್ಚಾಗಿರುವದು ಕಂಡುಬರುತ್ತದೆ.

ಸ್ಥಾನದ ದೃಷ್ಟಿಯಿಂದ ವಿಚಾರಿಸಿದರೆ ಮೇಲ್ಮಂಡ ಹುದ್ದೆಗಳನ್ನು ಪಡೆಯಲು ದಶಮ ಸ್ಥಾನಕ್ಕಿಂತ ಭಾಗ್ಯಸ್ಥಾನವೂ ಹಾಗೂ ಭಾಗ್ಯೇಶನೂ, ಸುಖಸ್ಥಾನಕ್ಕಿಂತ ಪಂಚಮೇಶನೂ ಹಾಗೂ ಪಂಚಮ ಸ್ಥಾನವೂ ಬಲಾಢ್ಯವಿರುತ್ತವೆ.

ರಾಶಿದೃಷ್ಟಿಯಿಂದ ಕೂಡ ಆಡಳಿತೆಯ ಕಾರಕರಾಶಿಗಳಾದ ಪುರುಷ ರಾಶಿಗಳೇ ಹೆಚ್ಚು ಬಲಾಢ್ಯವಿರುವದು ಕಂಡುಬರುತ್ತದೆ.

## ೧೬ ಲೋಕೋಪಯೋಗಿ ಖಾತೆ( P. W. D. )

ಲೋಕೋಪಯೋಗಿ ಖಾತೆ, ಸಾರ್ವಜನಿಕರ ಸೌಕರ್ಯಕ್ಕಾಗಿ ನಿರ್ಮಿಸಲ್ಪಟ್ಟ ಖಾತೆಯಾಗಿದೆ ಎನ್ನಬಹುದು. ಈ ಖಾತೆಗೆ ಲೋಕೋಪಯೋಗಿ

ಖಾತೆ, ಮರಾಮತ್ ಖಾತೆ, ಪಿ. ಡಬ್ಲ್ಯೂ. ಡಿ. ಎಂಬ ನಾಮಧೇಯಗಳಿವೆ. ಸಾರ್ವಜನಿಕರ ಸೌಕರ್ಯಗಳಿಗಾಗಿ ಈ ಖಾತೆ ಶ್ರಮಿಸುತ್ತಿದ್ದು ಇದರ ವ್ಯಾಪ್ತಿ ಬಹಳ ದೊಡ್ಡದಿದೆ. ಸಾರ್ವಜನಿಕರ ಅನುಕೂಲತೆಗಳಿಗಾಗಿ ನೀರಿನ ವ್ಯವಸ್ಥೆ, ರಸ್ತೆ ನಿರ್ಮಾಣ, ಸೇತುವೆ ಕಟ್ಟುವದು, ನೀರಾವರಿ ವ್ಯವಸ್ಥೆ, ಗೃಹನಿರ್ಮಾಣ, ಒಳಚರಂಡಿ ಇವೇ ಮೊದಲಾದ ಕೆಲಸಗಳಿಗಾಗಿ ಇಂಜನೀಯರರು ಸಾರ್ವಜನಿಕ ಖಾತೆಯಲ್ಲಿ ಕೆಲಸಮಾಡುತ್ತಿರುವುದನ್ನು ನಾವು ಕಾಣಬಹುದಾಗಿದೆ. ಸರಕಾರ ಸಹ ಈ ಖಾತೆಗಾಗಿ ಬಹಳಷ್ಟು ಹಣ ವನ್ನು ಪ್ರತಿವರ್ಷ ಖರ್ಚು ಮಾಡುವದಲ್ಲದ ಅತಿ ಹೆಚ್ಚು ಇಂಜನೀಯರರನ್ನು ಪಡೆದುಕೊಳ್ಳುವ ಈ ಖಾತೆಗೆ ಕಾರಕಗ್ರಹಗಳಾವು, ಜ್ಯೋತಿಷ್ಯದ ಭಾಷ್ಯವೇನು ಎನ್ನುವದನ್ನು ಕೂಲಂಕಷವಾಗಿ ವಿಚಾರಿಸುವಾ.

ಕಾರಕಗ್ರಹ : ಈ ಖಾತೆಗೆ ಅನೇಕ ಗ್ರಹಗಳು ಕಾರಕವಾಗಿರುವವು. ಪ್ರಾಮುಖ್ಯವಾಗಿ ಸಾರ್ವಜನಿಕ ಖಾತೆಯ ಕಾರಕನಾದ ಶನಿಯೂ, ಇಂಜನೀಯರಿಂಗ ಕಾರಕನಾದ ಮಂಗಳ, ಬುಧರೂ ಆಡಳಿತೆ ಕಾರಕನಾದ ರವಿಯೂ ಕಾರಕರಾಗಿರುವರು.

ಸಿವ್ಹಿಲ್ ಇಂಜನಿಯರಿಂಗ ಕೈಕೊಳ್ಳುತ್ತಿರುವ ರಸ್ತೆ, ರಹದಾರಿ, ಕಟ್ಟಡ, ಇಮಾರತಿ, ಸೇತುವೆ, ಪೂಲು, ಕಾಲುವೆ ಇತ್ಯಾದಿಗಳಿಗ ಬೇಕಾಗುವ ಕಟ್ಟಿಗೆ, ಕಲ್ಲು, ಇಟ್ಟಿಗೆ, ಹೆಂಚಿ, ಸಿಮೆಂಟ, ಕಬ್ಬಿಣ, ಉಕ್ಕು, ಮೊದಲಾದ ವಸ್ತುಗಳ ಮೇಲೆ ಶನಿಯ ಪ್ರಭುತ್ವವಿರುವದರಿಂದ ಈ ಖಾತೆಗೆ ಶನಿಯೇ ಕಾರಕಗ್ರಹವೆಂದು ಹೇಳಬಹುದು.

ಶನಿಗ್ರಹದೊಂದಿಗೆ, ಮಂಗಳನೂ ಕಾರಕನಾಗಬಲ್ಲನೆಂಬುದಕ್ಕೆ ಸಿವ್ಹಿಲ ಇಂಜನಿಯರ ಅಥವಾ ಯಾವದೇ ಇಂಜನಿಯರ ವೃತ್ತಿಗೆ ಮಂಗಳನೊಬ್ಬನೇ ಕಾರಕಗ್ರಹವಿರುವನು. ಅಲ್ಲದೆ ಸಾರ್ವಜನಿಕ ಖಾತೆಯಲ್ಲಿ ಕೆಲಸ ಮಾಡಲು ಸಾರ್ವಜನಿಕಖಾತೆಯ ಕಾರಕಗ್ರಹವಾದ ಶನಿಯೊಂದಿಗೆ ಇಂಜನೀಯರ ವೃತ್ತಿಯ ಕಾರಕಗ್ರಹವಾದ ಮಂಗಳನೂ ಬಲಾಢ್ಯನಿರಬೇಕೆಂದು ನಿಃಸಂದೇಹ ವಾಗಿ ಹೇಳಬಹುದು.

ಸಿವ್ಹಿಲ ಇಂಜನಿಯರ ವೃತ್ತಿಯಲ್ಲಿ ಪ್ರಮುಖವಾದ ಕೆಲಸವೆಂದರೆ ಅಂದಾಜು ತಯಾರಿಕೆ (Estimation), ಆದುದರಿಂದ ಸರಿಯಾದ ಅಂದಾಜು ತಯಾರಿಕೆಗೆ ಕಾರಕಗ್ರಹವಾದ ಬುಧನೂ, ಶನಿಗ್ರಹದೊಂದಿಗೆ ಕೆಲಮಟ್ಟಿಗೆ ಬಲಾಢ್ಯನಿರಲೇಬೇಕು.

ಯಾವದೆ ಖಾತೆಯಲ್ಲಿ ಪ್ರಮುಖ ಅಧಿಕಾರ ಪಡೆಯಲು, ಯೋಗ್ಯ ಅಧಿಕಾರಿಯೆಂದು ಕೆಲಸ ನಿರ್ವಹಿಸಲು, ಅದಕ್ಕೆ ಕಾರಕಗ್ರಹನಾದ ರವಿಯು ಬಲಾಢ್ಯನಿರಲೇಬೇಕು. ಆದುದರಿಂದ ಲೋಕೋಪಯೋಗಿ ಖಾತೆಯಲ್ಲಿ ಸಹ ಯೋಗ್ಯ ಅಧಿಕಾರಿ ಎಂದು ಕೆಲಸ ನಿರ್ವಹಿಸಲು ರವಿಯು ಬಲಾಢ್ಯನಿರಬೇಕಾಗುತ್ತದೆ.

ಲಗ್ನ : ಸಾರ್ವಜನಿಕ ಖಾತೆಯಲ್ಲಿ ಕೆಲಸ ಮಾಡುತ್ತಿರುವವರು ಹೆಚ್ಚಾಗಿ ಮೇಷ, ವೃಷಭ, ಮಿಥುನ, ತುಲಾ, ವೃಶ್ಚಿಕ, ಮಕರ, ಕುಂಭ, ಮೀನ ಈ ಲಗ್ನದವರಿರುವದು ಕಂಡುಬರುತ್ತದೆ.

ಸ್ಥಾನ : ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ಖಾತೆಗೆ ಶನಿಯ ನೈಸರ್ಗಿಕ ಸ್ಥಾನವಾದ ದಶಮಸ್ಥಾನವೇ ಮೂಲ ಹಾಗೂ ಮುಖ್ಯ ವಾಗಿದ್ದರೂ ಕಟ್ಟಡ, ಹಾಗೂ ರಹದಾರಿಗಳ ಸ್ಥಾನವಾದ ಸುಖಸ್ಥಾನವನ್ನೂ ನೋಡಬೇಕಾಗುತ್ತದೆ.

ರಾಶಿ : ಈ ಖಾತೆಯಲ್ಲಿ ಕೆಲಸ ಮಾಡುವವರು ಇಂತಹ ರಾಶಿಯವರೇ ಇರಬೇಕೆಂಬ ನಿಯಮವಿರುವದಿಲ್ಲ.

ಖಾತೆಗಳಲ್ಲಿಯ ಪ್ರಮುಖ ವಿಭಾಗಗಳು :

ಸಾರ್ವಜನಿಕ ಖಾತೆಯಲ್ಲಿ ಮುಖ್ಯವಾಗಿ ಎರಡು ವಿಭಾಗಗಳಿವೆ.

(೧) ರಹದಾರಿ ಹಾಗೂ ಕಟ್ಟಡಗಳ ವಿಭಾಗ.
(Buildings and Roads Department).

(೨) ನೀರಾವರಿ ಹಾಗೂ ವಿದ್ಯುಚ್ಛಕ್ತಿ ವಿಭಾಗ
(Irrigation and Power Department)

ಹೀಗೆ ವಿಂಗಡಿಸಿ ಪ್ರತ್ಯೇಕ ಖಾತೆಗಳನ್ನಾಗಿ ಮಾಡಿದುದನ್ನು ಕಾಣಬಹುದು.

(೧) ರಹದಾರಿ ಹಾಗೂ ಕಟ್ಟಡಗಳ ವಿಭಾಗ : ಈ ವಿಭಾಗದಲ್ಲಿ ಕೆಲಸ ಮಾಡುವ ಇಂಜನಿಯರಲ್ಲಿ ಸಾರ್ವಜನಿಕ ಖಾತೆಯ ಕಾರಕಗ್ರಹವಾದ ಶನಿಯೊಂದಿಗೆ ರವಿ ಹಾಗೂ ಮಂಗಳರೂ ಬಲಾಢ್ಯರಿರುವದು ಕಂಡು ಬರುತ್ತದೆ. ಕಟ್ಟಡ ನಿರ್ಮಾಣಕ್ಕೆ ಹಾಗೂ ರಹದಾರಿ ರಚನೆಗೆ ಕಾರಕ ಸ್ಥಾನಗಳಾದ ತೃತೀಯ ಹಾಗೂ ಚತುರ್ಥಸ್ಥಾನಗಳಲ್ಲದೆ ಈ ಸ್ಥಾನಾಧೀಶರೂ ಬಲಾಢ್ಯರಿರಬೇಕಾಗುತ್ತದೆ.

(೨) ನೀರಾವರಿ ಹಾಗೂ ವಿದ್ಯುಚ್ಛಕ್ತಿ ವಿಭಾಗ : ಈ ವಿಭಾಗದಲ್ಲಿ ಕೆಲಸ ಮಾಡುವ ಇಂಜನಿಯರಲ್ಲಿ ಪ್ರಾಮುಖ್ಯವಾಗಿ ಶನಿ, ಮಂಗಳ ಹಾಗೂ ಚಂದ್ರರು ಬಲಾಢ್ಯರಿರುವದನ್ನು ಕಾಣಬಹುದಾಗಿದೆ. ಇಲ್ಲಿ ರವಿ ಗ್ರಹ ಅಷ್ಟೊಂದು ಬಲಾಢ್ಯವಿರುವದಿಲ್ಲ.

ನೀರಾವರಿಯಲ್ಲಿ ಕೆರೆ, ಕಾಲುವೆ, ಒಡ್ಡು ನಿರ್ಮಾಣ, ದುರಸ್ತಿ ಮೊದಲಾದ ಕಾರ್ಯಗಳ ಮೇಲೆಯೂ, ಭೂಮಿಯಲ್ಲಿ ಇರುವ ಅಶುದ್ಧ ಧಾತು, ಕಲ್ಲಿದ್ದಲಿ, ಇವುಗಳ ಮೇಲೆಯೂ, ಶನಿಯ ಪ್ರಭುತ್ವವಿರುವದರಿಂದ ಈ ವಿಭಾಗದಲ್ಲಿ ಕೆಲಸ ಮಾಡಲು ಶನಿಯೇ ಬಲಾಢ್ಯನಿರಬೇಕಲ್ಲದೆ ವಿದ್ಯುಚ್ಛಕ್ತಿ ಕಾರಕನಾದ ಮಂಗಳನೂ ಶನಿಯೊಂದಿಗೆ ಬಲಾಢ್ಯನಿರಬೇಕೆಂದು ಹೇಳಬಹುದಾಗಿದೆ.

ಹೊಳೆಹಳ್ಳಗಳ ಪ್ರವಾಹವನ್ನು ಬದಲಿಸುವದಕ್ಕಾಗಲಿ, ಮಹಾಪೂರಗಳನ್ನೂ ತಡೆಯುವದಕ್ಕಾಗಲಿ, ಚಂದ್ರನ ಗುಣಧರ್ಮಗಳೇ ಪರಿಣಾಮ ಬೀರುವದರಿಂದ ಮೇಲೆ ವಿವರಿಸಿದಂತೆ ಶನಿ, ಮಂಗಳ ಗ್ರಹಗಳೊಂದಿಗೆ ಚಂದ್ರನೂ ಸಹ ಪೂರಕನಾಗಿರಬೇಕೆಂದು ಸಕಾರಣವಾಗಿ ಹೇಳಬಹುದು. ನೀರಾವರಿ ಸಂಗ್ರಹದ (Storage) ಕಾರಕವಾದ ಪಂಚಮಸ್ಥಾನ ಹಾಗೂ ಸ್ಥಾನಾಧೀಶರೂ ಪೂರಕರಿರಬೇಕು.

ಸಾರ್ವಜನಿಕ ಖಾತೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ವಿವಿಧ ಹುದ್ದೆಗಳ ಪ್ರಮುಖರ ಕಾರಕಗ್ರಹಗಳು ಹೇಗಿರಬೇಕು, ಅವರ ಜಾತಕದಲ್ಲಿ ಗ್ರಹಗಳ ಸ್ಥಾನಮಾನಗಳು ಯಾವವು ಎಂಬುದನ್ನು ವಿವೇಚಿಸೋಣ.

ಲೋಕೋಪಯೋಗಿ ಖಾತೆಯ ಪ್ರಮುಖರಾದ ಚೀಫ್ ಇಂಜನಿಯರ, ಸುಪರಿಂಟೆಂಡಿಂಗ ಇಂಜನಿಯರ ಇತ್ಯಾದಿ :

ಇವರ ಕೆಲಸ ಪ್ರಾಮುಖ್ಯವಾಗಿ ಇಂಜನಿಯರಿಂಗ ವೃತ್ತಿಗಿಂತ ಮೇಲ್ವಿಚಾರಣೆಗೆ, ಆಡಳಿತಗೇ ಹೆಚ್ಚು ಪ್ರಾಧಾನ್ಯವಿರುವದರಿಂದ ಆಡಳಿತಕಾರಕ ಗ್ರಹವಾದ ರವಿಯೂ, ಮೇಲ್ವಿಚಾರಣೆಗೆ ಕಾರಕಗ್ರಹವಾದ ಗುರುವೂ, ಇಂಜನಿಯರಿಂಗ ವೃತ್ತಿಯ ಕಾರಕ ಗ್ರಹವಾದ ಮಂಗಳನೂ ಬಲಾಢ್ಯರಿದ್ದು, ರಾಶಿಬಲದವರೂ ಸ್ಥಾನಬಲದವರೂ, ಯೋಗಕಾರಕರೂ ಇದ್ದು, ಸಾರ್ವಜನಿಕ ಖಾತೆಯ ಕಾರಕನಾದ ಶನಿಯೂ ಕೇವಲ ರಾಶಿಬಲದವನಿರುವದಾಗಿ ಹೇಳಬಹುದು.

ಲಗ್ನ ದೃಷ್ಟಿಯಿಂದ ವಿಚಾರಿಸಲಾಗಿ ಆಡಳಿತೆಯ ಕಾರ್ಯಕ್ಕೆ ಪೋಷಕ ಲಗ್ನಗಳಾದ ಮೇಷ, ಮಿಥುನ, ಸಿಂಹ, ಧನು, ಕರ್ಕ, ವೃಶ್ಚಿಕ, ಹಾಗೂ ಮೀನ ಲಗ್ನಗಳೇ ಹೆಚ್ಚಾಗಿರುವದು ಕಂಡುಬರುತ್ತದೆ. ತದನಂತರ ವೃಷಭ ಕುಂಭ ಲಗ್ನಗಳಿರುವದನ್ನೂ ಕಾಣಬಹುದಾಗಿದೆ.

ಸ್ಥಾನ ದೃಷ್ಟಿಯಿಂದ ವಿಚಾರಿಸಲಾಗಿ ಚೀಫ ಇಂಜನಿಯರ, ಸುಪರಿಂಟೆಂಡಂಟ್ ಇಂಜನಿಯರ ಹುದ್ದೆಗಳು ಅತಿ ವಿರಳವಿದ್ದು, ಇಡೀ ರಾಜ್ಯದಲ್ಲಿ ಕೆಲವು ಪರಿಮಿತ ಸ್ಥಳಗಳಿರುವದರಿಂದ, ಮೇಲಿನ ವರಿಷ್ಠ ಹುದ್ದೆಗಳಿಗೆ ಬಡತಿ ಸಿಗುವ ಇಂಜನಿಯರರು ಸುದೈವಿಗಳಾಗಿರಬೇಕೆಂದು ಹೇಳದೆ ಗತ್ಯಂತರವಿಲ್ಲ. ಆದುದರಿಂದ ಈ ಖಾತೆಯ, ವೃತ್ತಿಯ ದಶಮ ಸ್ಥಾನಕ್ಕಿಂತ, ಭಾಗ್ಯಸ್ಥಾನ ಹಾಗೂ ಭಾಗ್ಯೇಶ ಹೆಚ್ಚು ಪೋಷಕವಾಗಿರಲೇಬೇಕೆಂದು ಹೇಳಬಹುದಾಗಿದೆ.

ರಾಶಿ ದೃಷ್ಟಿಯಿಂದ ಕೂಡಾ ಆಡಳಿತೆಯ ಕಾರಕರಾಶಿಗಳಾದ ಪುರುಷ ರಾಶಿಗಳೇ ಹೆಚ್ಚು ಇರುವ ವ್ಯಕ್ತಿಗಳನ್ನೂ ಈ ಹುದ್ದೆಗಳಲ್ಲಿ ಕಾಣಬಹುದಾಗಿದೆ.

ಎಗ್ಷಿಕ್ಯೂಟಿವ್ಹ ಇಂಜಿನಿಯರ, ರೆಸಿಡೆಂಟ ಇಂಜಿನಿಯರ,
ಸಿಟಿ ಇಂಜಿನಿಯರ ಡೆಪ್ಯೂಟಿ ಇಂಜಿನಿಯರ,
ಅಸಿಸ್ಟಂಟ ಇಂಜಿನಿಯರ ಇತ್ಯಾದಿ :

ಇವರು ಆಡಳಿತೆಗಾರರೂ ಮೇಲ್ವಿಚಾರಕರೂ ಇರುವರಲ್ಲದೆ ಸ್ವತಃ ಕೆಲಸಗಳನ್ನು ನಿರ್ವಹಿಸಬಲ್ಲ ಶ್ರಮಜೀವಿಗಳೂ ಅಹುದು ಎಂದು ಹೇಳಬಹುದು. (Both Official and outdoor Executive work) ಆದುದರಿಂದ ಇಂತಹ ಹುದ್ದೆಗಳಲ್ಲಿ ಕೆಲಸ ಮಾಡುವವರ ಜಾತಕಗಳಲ್ಲಿ ಗ್ರಹಗಳ ಸ್ಥಾನಗಳನ್ನು ಬಹುಸೂಕ್ಷ್ಮವಾಗಿ ಪರಿಶೀಲಿಸಬೇಕಾಗುತ್ತದೆ. ಇವರ ವೃತ್ತಿ, ಆಡಳಿತ, ಮೇಲ್ವಿಚಾರಣೆ, ಶ್ರಮಜೀವಿ, ಸಾರ್ವಜನಿಕರ ಸಂಪರ್ಕ, ಮಾನಮರ್ಯಾದೆಯ ಹುದ್ದೆ ಮೊದಲಾದವುಗಳೆಲ್ಲವೂ ಮೇಲಿನ ಹುದ್ದೆಗಳಿಗೆ ಲಭಿಸುವದರಿಂದ, ಯಾವ ಯಾವ ಗ್ರಹಗಳು ನಿರ್ದಿಷ್ಟವಾಗಿ ಕಾರಕವಾಗಬಹುದೆಂದು ಹೇಳುವದು ಕ್ಲಿಷ್ಟಕರವಾದ ಸಮಸ್ಯೆಯಾಗಿದೆ.

ಆಡಳಿತೆ ಹಾಗೂ ಮಾನಮರ್ಯಾದೆ ಕಾರಕಗ್ರಹಗಳಾದ ರವಿ, ಗುರು ಇವರೂ, ಮೇಲ್ವಿಚಾರಣೆ ಹಾಗೂ ಇಂಜಿನಿಯರಿಂಗ ವೃತ್ತಿಯ ಕಾರಕ ಗ್ರಹವಾದ ಮಂಗಳನೂ, ಖಾತೆಯ ಕಾರಕನೂ, ಶ್ರಮಜೀವಿಯ ಕಾರಕನೂ, ಸ್ವತಃ ನಿಂತು ಕೆಲಸ ಮಾಡತಕ್ಕ ಪ್ರವೃತ್ತಿಯನ್ನು ನಿರ್ಮಿಸಲು ಕಾರಕನಾದ ಶನಿಯಂತೂ ಬಲಾಢ್ಯನಿರಲೇಬೇಕಲ್ಲದೆ ಹಣದ ವ್ಯವಹಾರ ಹೇರಳವಾಗಿರುವ ಈ ಹುದ್ದೆಗಳಿಗೆ ಹಣವ್ಯವಹಾರದ ಕಾರಕಗ್ರಹವಾದ ಬುಧನೂ ಪೂರಕನಾಗಿರಬೇಕು.

ಸ್ಥಾನದೃಷ್ಟಿಯಿಂದ ದಶಮಸ್ಥಾನವೇ ಪ್ರಾಮುಖ್ಯವೆಂದು ಹೇಳಿದರೂ ಅದರೊಂದಿಗೆ ಭಾಗ್ಯ, ಲಾಭ, ಪಂಚಮ ಹಾಗೂ ಸುಖ ಸ್ಥಾನಗಳನ್ನೂ ಪರಿಶೀಲಿಸಬೇಕಾಗುತ್ತದೆ.

ಲಗ್ನದೃಷ್ಟಿಯಿಂದ ನಿರ್ದಿಷ್ಟವಾದ ಲಗ್ನಗಳೇ ಪೋಷಕವಿರುವವೆಂದು ಹೇಳುವದಕ್ಕಿಂತ ಗ್ರಹಬಲವೇ ಹೆಚ್ಚು ಪೋಷಕವಿರುವದೆಂದು ಹೇಳಬಹುದಾಗಿದೆ.

ರಾಶಿದೃಷ್ಟಿಯಿಂದ ಕೂಡಾ ನಿರ್ದಿಷ್ಟ ರಾಶಿಯವರೇ ಇರುವರೆಂದು ಹೇಳಲುಬಾರದಿದ್ದರೂ ಪುರುಷ ರಾಶಿಯವರೇ ಹೆಚ್ಚು ಇರುವದನ್ನು ಕಾಣ ಬಹುದಾಗಿದೆ.

ಕೊನೆಯದಾಗಿ, ಇವರ ಜಾತಕದಲ್ಲಿರುವ ವೈಶಿಷ್ಟ್ಯವೆಂದರೆ ಅನೇಕ ಗ್ರಹಗಳು ಸ್ಥಾನಬಲಕ್ಕಿಂತ ರಾಶಿಬಲದವರೇ ಹೆಚ್ಚು ಇರುವದನ್ನು ಕಾಣ ಬಹುದಾಗಿದೆ.

ಜ್ಯೂನಿಯರ ಇಂಜನಿಯರ, ಸಬ್-ಇಂಜನಿಯರ್ಸ, ಓವ್ಹರಸೀಯರ, ಸೂಪರವಾಯ್ಝರ, ಸಬ್-ಓವ್ಹರಸೀಯರ ಇತ್ಯಾದಿ :

ಅಸಿಸ್ಟಂಟ ಇಂಜನಿಯರ ಮೊದಲಾದ ಪ್ರಮುಖ ಅಡಳಿತೆಗಾರರಿಗೆ ಸಹಾಯವಾಗಲೆಂದು ಕೆಲಸ ನಿರ್ವಹಿಸುವದಕ್ಕಾಗಿ ಈ ಮೇಲೆ ವಿವರಿಸಿದ ಹುದ್ದೆಗಳು ನಿರ್ಮಿಸಲ್ಪಟ್ಟಿವೆ ಎಂದು ಹೇಳಬಹುದು. ಇವರು ಶ್ರಮಜೀವಿಗಳೂ ತಕ್ಕ ಮಟ್ಟಿಗೆ ಅಡಳಿತೆಗಾರರೂ ಇರುವರಲ್ಲದೆ ವೃತ್ತಿಯ ಸಂಪೂರ್ಣ ಜ್ಞಾನ ಇವರಲ್ಲಿ ಇರುವದನ್ನೂ ಕಾಣಬಹುದು.

ಖಾತೆಯ ಕಾರಕನೂ, ಶ್ರಮಜೀವಿಯ ಕಾರಕನೂ, ನಿಂತು ಕೆಲಸ ನಿರ್ವಹಿಸುವ ಪ್ರವೃತ್ತಿಕಾರಕನೂ ಆದ ಶನಿಯೇ ಕಾರಕನಿರುವನಲ್ಲದೆ ಯೋಗಕಾರಕನೂ ಇರುವನು. ಶನಿಯೊಂದಿಗೆ ಇಂಜನಿಯರಿಂಗ ವೃತ್ತಿಯ ಕಾರಕನಾದ ಮಂಗಳನೂ ಕಾರಕನಾಗುವನು. ಆಡಳಿತೆ ಕಾರಕನಾದ ರವಿಯು ಕಾರಕನಾದರೂ, ಅಲ್ಪ ಆಡಳಿತೆ ಕೊಡುವದರಿಂದ ರವಿಯು ಸ್ಥಾನಬಲ ಹಾಗೂ ಯೋಗಕಾರಕನಿರದೆ ಕೇವಲ ರಾಶಿಬಲದವನಷ್ಟೇ ಇರುವನು.

ಲಗ್ನ ದೃಷ್ಟಿಯಿಂದ ಪರಿಶೀಲಿಸಲಾಗಿ ವೃಷಭ, ತುಲಾ, ಮಕರ, ಕುಂಭ ಲಗ್ನಗಳೂ ತದನಂತರ ಮೇಷ, ಕರ್ಕ, ವೃಶ್ಚಿಕ ಲಗ್ನಗಳೇ ಹೆಚ್ಚಾಗಿರುವದನ್ನು ಕಾಣಬಹುದಾಗಿದೆ.

ಸ್ಥಾನ ದೃಷ್ಟಿಯಿಂದ ಖಾತೆಯ ಸ್ಥಾನವಾದ ದಶಮ ಸ್ಥಾನವನ್ನಂತೂ ಪರಿಶೀಲಿಸಲೇಬೇಕಲ್ಲದೆ ತದನಂತರ ಕಟ್ಟಡ, ರಹದಾರಿ ಮೊದಲಾದ ಕೆಲಸಗಳಿಗೆ ಕಾರಕಸ್ಥಾನಗಳಾದ ತೃತೀಯ ಹಾಗೂ ಚತುರ್ಥ ಸ್ಥಾನಗಳಲ್ಲದೆ, ನೀರಿನ ಸಂಗ್ರಹಕ್ಕೆ (Storage) ಸ್ಥಾನವಾದ ಪಂಚಮ ಸ್ಥಾನ ಹಾಗೂ ಈ ಸ್ಥಾನಾಧೀಶರೂ ಬಲಾಢ್ಯರಿರಬೇಕಲ್ಲದೆ ಪೂರಕರಾಗಿರಬೇಕು.

ರಾಶಿದೃಷ್ಟಿಯಿಂದ ಪುರುಷರಾಶಿಯವರೇ ಹೆಚ್ಚು ಇರುವದನ್ನು ಕಾಣಬಹುದು.

ಇವರ ಜಾತಕದಲ್ಲಿರುವ ವೈಶಿಷ್ಟ್ಯವೆಂದರೆ ಭಾಗ್ಯಸ್ಥಾನ ಹಾಗೂ ಭಾಗ್ಯೇಶ ದುರ್ಬಲರಿರುವರಲ್ಲದೆ ರವಿಯೂ ದುರ್ಬಲನಿರುವದನ್ನು ಕಾಣಬಹುದು. ಭಾಗ್ಯೇಶ ಹಾಗೂ ರವಿಯು ದುರ್ಬಲರಿದ್ದಲ್ಲಿ ಮೇಲಿನ ಹುದ್ದೆಗಳಲ್ಲಿ ಅವರು ಬಹುದಿನ ಕೆಲಸಮಾಡಲಾರರು.

### ಟೆಕ್ನಿಕಲ್ ಅಸಿಸ್ಟಂಟ, ವರ್ಕ್ಸ್ ಇನಸ್ಪೆಕ್ಟರ, ಮೇಸ್ತ್ರಿ, ಕಾರಕೂನ, ಮುಕಾದಮ್ ಇತ್ಯಾದಿ :

ಇವರು ಕೇವಲ ಕೆಲಸ ನಿರ್ವಹಿಸುತ್ತಿರುವ ಸ್ಥಾನಗಳಲ್ಲಿ ಹೆಸರಿಗೋಸ್ಕರ ಆಡಳಿತೆ ನಿರ್ವಹಿಸುವದಕ್ಕಾಗಿಯೂ, ಕೆಲಸದ ಬಹುಭಾಗವನ್ನು ನಿರ್ಮಿಸುವವರೂ ನಿರ್ಮಿಸಲು ಸಹಾಯ ಮಾಡುವವರೂ ಆಗಿರುತ್ತಾರೆ.

ಖಾತೆಯ ಕಾರಕನೂ, ವೃತ್ತಿಯ ಕಾರಕನೂ, ಶ್ರಮಜೀವಿಯ ಕಾರಕನೂ, ಆದ ಶನಿಯು ರಾಶಿಬಲದವನಿರುವನಲ್ಲದೆ ಸ್ಥಾನ ಹಾಗೂ ಯೋಗಕಾರಕನಾಗಿರಲಾರನು. ಇದರಂತೆಯೇ ಮಂಗಳನೂ ಸಹ ರಾಶಿಬಲದವನಷ್ಟೇ ಇರುವನಲ್ಲದೆ ಸ್ಥಾನ ಹಾಗೂ ಯೋಗಕಾರಕನಾಗಿರಲಾರನು. ರವಿ–ಗುರು, ಪಂಚಮ ಸ್ಥಾನ ಹಾಗೂ ಪಂಚಮೇಶರು ಸಂಪೂರ್ಣವಾಗಿ ದುರ್ಬಲರಾಗಿರುತ್ತಾರೆ.

ಲಗ್ನದೃಷ್ಟಿಯಿಂದ ವೃಷಭ, ತುಲಾ, ಮಕರ, ಕುಂಭ ಈ ಲಗ್ನಗಳೂ ತದನಂತರ ಮೇಷ, ಕರ್ಕ, ವೃಶ್ಚಿಕ ಲಗ್ನಗಳೇ ಹೆಚ್ಚಾಗಿರುವದನ್ನು ಕಾಣ ಬಹುದಾಗಿದೆ.

ಸ್ಥಾನದೃಷ್ಟಿಯಿಂದ ಖಾತೆಯ ಸ್ಥಾನವಾದ ದಶಮ ಸ್ಥಾನವೇ ಮೂಲ ಹಾಗೂ ಮುಖ್ಯವಾಗಿರುವದಲ್ಲದೆ ತದನಂತರ ಕಟ್ಟಡ, ರಸ್ತೆ ಮೊದಲಾದ ಕೆಲಸಗಳಿಗೆ ಕಾರಕಸ್ಥಾನಗಳಾದ ತೃತೀಯ ಹಾಗೂ ಚತುರ್ಥ ಸ್ಥಾನಗಳಲ್ಲದೆ ನೀರಿನ ಸಂಗ್ರಹಸ್ಥಾನವಾದ (Storage) ಪಂಚಮ ಮತ್ತು ಈ ಸ್ಥಾನಾಧೀಶರನ್ನೂ ಪರಿಶೀಲಿಸಬೇಕಾಗುತ್ತದೆ.

ರಾಶಿದೃಷ್ಟಿಯಿಂದ ಪುರುಷರಾಶಿಗಳೇ ಹೆಚ್ಚು ಇರುವದನ್ನು ಕಾಣ ಬಹುದು

ಇವರ ಜಾತಕದಲ್ಲಿಯ ವೈಶಿಷ್ಟ್ಯವೆಂದರೆ ಅನೇಕ ಗ್ರಹಗಳು ಅಸ್ತ, ವಕ್ರ, ನೀಚ, ಶತ್ರುಕ್ಷೇತ್ರ, ವೃದ್ಧಾಪ್ಯದ, ಬಾಲ್ಯಾವಸ್ಥೆಯ ಇರುವವಲ್ಲದೆ ಭಾಗ್ಯೇಶನೂ ದುರ್ಬಲನಿರುವದನ್ನು ಕಾಣಬಹುದಾಗಿದೆ.

ಡ್ರಾಫ್ಟ್ಸ್‌ಮನ್, ಅಸಿಸ್ಟಂಟ ಡ್ರಾಫ್ಟ್ಸ್‌ಮನ್, ಟ್ರೇಸರ ಇತ್ಯಾದಿ :

ಪೂಲು, ಕಾಲುವೆ, ಹೊಳೆ-ಹಳ್ಳಗಳ ಯೋಜನೆ, ಯಂತ್ರ, ಮಶಿನರಿ ಇತ್ಯಾದಿಗಳ ನಕಾಶ (Designs), ಕಟ್ಟಡ-ಇಮಾರತಿಗಳ-ಡಿಜಾಯಿನುಗಳ ನಕಾಶ ಮೊದಲಾದವುಗಳನ್ನು ಸುಂದರವಾಗಿ, ಅಚ್ಚುಕಟ್ಟಾಗಿ ಪ್ರತಿಯನ್ನು (ನಕಲನ್ನು) ತಯಾರಿಸುವ, ಅಲ್ಲದೆ ಅಂದಾಜ ಪತ್ರಿಕೆಯನ್ನು ತಯಾರಿಸುವದು ಡ್ರಾಫ್ಟ್ಸ್‌ಮನ್, ಅಸಿಸ್ಟಂಟ ಡ್ರಾಫ್ಟ್ಸ್‌ಮನ್ ಇವರ ಮುಖ್ಯವಾದ ಕೆಲಸವೆಂದು ಹೇಳಬಹುದು. ಇವರಿಗೆ ಇಂಜನಿಯರೀಂಗ ವೃತ್ತಿಯ ಸಂಪೂರ್ಣ ಜ್ಞಾನವಿಲ್ಲದೆ ನಕಲು ಮಾಡಲು ಅವಶ್ಯವಿದ್ದ ಸುಂದರ ಅಕ್ಷರ, ನೀಟಾಗಿ ಅಚ್ಚುಕಟ್ಟಾದ ನಕಾಶ ತಯಾರಿಸುವ ವಿಧಾನವಾದ ಡ್ರಾಯಿಂಗಕಲೆ, ತಕ್ಕಮಟ್ಟಿಗೆ ಅಂದಾಜ ತಯಾರಿಸಲು ಬೇಕಾಗುವ ಗಣಿತ ಜ್ಞಾನ, ಸ್ಮರಣ

ಶಕ್ತಿ ಅಲ್ಲದೆ ಶೋಧಕ ಬುದ್ಧಿ ಮೊದಲಾದ ಗುಣಗಳ ಅವಶ್ಯಕತೆ ಇರುವದನ್ನು ಕಾಣಬಹುದು.

ಕಾರಕ ಗ್ರಹ : ಈ ಉದ್ಯೋಗಕ್ಕೆ ಕಾರಕಗ್ರಹವೆಂದರೆ ಬುಧನು. ಅಂದಾಜಪತ್ರಿಕೆ ಮೊದಲಾದ ಕೆಲಸಗಳಿಗೆ ಬುಧನು ಬಲಾಢ್ಯನಿದ್ದರೆ ಮಾತ್ರ ಸಾಧ್ಯವಾಗುತ್ತದೆ. ಪೃಥ್ವಿ ಹಾಗೂ ವಾಯು ರಾಶಿಯ ಬುಧನು ಯೋಗ ಕಾರಕನಿರಬೇಕು. ಅಚ್ಚುಕಟ್ಟುತನ, ನೀಟಾಗಿ ನಕಲುಮಾಡುವ ಡ್ರಾಯಿಂಗ ಕಲೆ, ಶುಕ್ರ ಹಾಗೂ ಚಂದ್ರರ ಗುಣಧರ್ಮಗಳಿರುವದರಿಂದ ಶುಕ್ರ-ಚಂದ್ರರು ಬಲಾಢ್ಯರೂ ಯೋಗಕಾರಕರೂ ಇರಬೇಕು.

ಕಾರಕ ಸ್ಥಾನ : ಸ್ಥಾನದೃಷ್ಟಿಯಿಂದ ನೋಡಿದರೆ ಅಚ್ಚುಕಟ್ಟುತನದ ಡ್ರಾಯಿಂಗಕಲೆಗೆ ಪೋಷಕವಾದ ಸ್ಥಾನವೆಂದರೆ ತೃತೀಯ ಸ್ಥಾನವು ಎಂದೇ ಹೇಳಬಹುದು.

ಪೃಥ್ವಿ ಇಲ್ಲವೆ ವಾಯುರಾಶಿಗಳು ತೃತೀಯ ಸ್ಥಾನದಲ್ಲಿದ್ದು, ತೃತೀಯೇಶನು ಬಲಾಢ್ಯನಿದ್ದ ವ್ಯಕ್ತಿಗಳು ಡ್ರಾಯಿಂಗ ಕಲೆಯಲ್ಲಿ ಅಚ್ಚುಕಟ್ಟುತನದಲ್ಲಿ ಪ್ರವೀಣರಿರುತ್ತಾರೆ.

ಅಗ್ನಿರಾಶಿಗಳು ತೃತೀಯ ಸ್ಥಾನದಲ್ಲಿರುವದು ಕಲಾಕೌಶಲ್ಯದ ಗಂಧವೇ ಇರದಿದ್ದರೂ ದರ್ಪ, ಕಾರ್ಯ, ತೇಜ ಇವುಗಳಿಂದ ಕಾರ್ಯದಕ್ಷರಾಗಿರುತ್ತಾರೆ, ಮತ್ತೂ ಬಹುಬೇಗ ಕಾರ್ಯ ಮುಗಿಸುವ ಪ್ರವೃತ್ತಿಯವರಿರುತ್ತಾರೆ.

ಜಲರಾಶಿಯವರು ತೃತೀಯ ಸ್ಥಾನದಲ್ಲಿರುವ ವ್ಯಕ್ತಿಗಳು ಕಲೆಯ ಶತ್ರುಗಳಿದ್ದರೂ ಕಲೆಯಿಂದಲೇ ಹೆಚ್ಚು ಸಂಪಾದಿಸುವವರು ಆಗಿರುತ್ತಾರೆ.

ಲಗ್ನ : ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನಗಳೇ ಹೆಚ್ಚಾಗಿರುವದನ್ನು ಕಾಣಬಹುದಾಗಿದೆ.

ರಾಶಿ : ರಾಶಿದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕನ್ಯಾ, ತುಲಾ, ಮಕರ, ಕುಂಭ ಈ ರಾಶಿಯ ಜನರೇ ಹೆಚ್ಚಾಗಿರುವದು ಕಂಡು ಬರುತ್ತದೆ.

ಡ್ರಾಫ್ಟ್ಸ್‌ಮನ್, ಅಸಿಸ್ಟಂಟ ಡ್ರಾಫ್ಟ್ಸ್‌ಮನ್, ಟ್ರೇಸರ ಮೊದಲಾದ ಹುದ್ದೆಗಳನ್ನು ಲೋಕೋಪಯೋಗಿ ಖಾತೆಯಲ್ಲಿ, ಫ್ಯಾಕ್ಟರಿ, ರೇಲ್ವೆ, ಕಂಪನಿ, ಖಾಸಗಿ ಉದ್ಯೋಗ-ಧಂದೆ ಮೊದಲಾದ ವಿವಿಧ ಖಾತೆಗಳಲ್ಲಿ ಕಾಣಬಹುದು. ಆದುದರಿಂದ ಇಂತಹದೇ ಖಾತೆಯಲ್ಲಿ ಕೆಲಸಮಾಡಲು ಆ ಖಾತೆಯ ಕಾರಕ ಗ್ರಹದೊಂದಿಗೆ ಬುಧನನ್ನು ಪರಿಶೀಲಿಸಬೇಕಾಗುತ್ತದೆ. ಉದಾಹರಣೆಗಾಗಿ: ಲೋಕೋಪಯೋಗಿ ಖಾತೆಯಲ್ಲಿ ಕೆಲಸ ಮಾಡಲು ಬುಧನೊಂದಿಗೆ ಶನಿಗ್ರಹ ವನ್ನು ನೋಡಬೇಕಾಗುತ್ತದೆ. ಇದರಂತೆಯೇ ಫ್ಯಾಕ್ಟರಿ, ಕಂಪನಿ, ಕಾರಖಾನೆ ಮೊದಲಾದವುಗಳಲ್ಲಿ ಕೆಲಸ ಮಾಡಲು ಬುಧನೊಂದಿಗೆ ಮಂಗಳನನ್ನು ಪರಿಶೀಲಿಸಬೇಕಾಗುತ್ತದೆ.

ಮ್ಯಾನೇಜರ, ಅಕೌಂಟಂಟ, ಫಸ್ಟ ಡಿವ್ಹಿಜನ್ ಕ್ಲಾರ್ಕ,
ಕ್ಲಾರ್ಕ್ಸ ಇತ್ಯಾದಿ (Ministerial) ವರ್ಗ :

ಈ ಕೆಲಸ ನಿರ್ವಹಿಸಲು ಕಾರಕೂನಕಿ ಗ್ರಹಗಳೊಂದಿಗೆ ಶನಿಯನ್ನು ಪರಿಶೀಲಿಸಬೇಕಾಗುತ್ತದೆ.

## ೧೭ ಶಿಕ್ಷಣ ಖಾತೆ

( Education Department )

ಕಾರಕಗ್ರಹ : ಶಿಕ್ಷಣ ಖಾತೆಗೆ ಕಾರಕಗ್ರಹಗಳಾವವೆಂದು ವಿಚಾರಿಸಲು ಅನೇಕ ಸಂಗತಿಗಳನ್ನು ನಾವು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ, ಈ ಖಾತೆಯಲ್ಲಿ ಸಾಮಾನ್ಯವಾಗಿ ಈ ಕೆಳಗಿನಂತೆ ವಿಭಾಗಗಳನ್ನು ಕಾಣಬಹುದು.

(೧) ಆಡಳಿತ ವಿಭಾಗ (Administration),
(೨) ತಪಾಸಣೆ (Inspection) ಹಾಗೂ ಆಡಳಿತ ವಿಭಾಗ
(೩) ಶಿಕ್ಷಣವಿಭಾಗ, (Teaching)
(೪) ಕಾರಕೂನಿಕೆ ವಿಭಾಗ (Ministerial)
(೫) ಇತರ ವಿಭಾಗಗಳು.

ಈ ಭಿನ್ನಭಿನ್ನ ವಿಭಾಗದಲ್ಲಿ ಕೆಲಸ ಮಾಡುವವರ ಕಾರಕಗ್ರಹಗಳು ಭಿನ್ನಭಿನ್ನವಿರುತ್ತವೆ. ಇಡೀ ಶಿಕ್ಷಣ ಖಾತೆಗೆ ಜ್ಞಾನ ಹಾಗೂ ವಿದ್ಯೆ ಕಾರಕನಾದ ಗುರುವೇ ಕಾರಕಗ್ರಹವೆಂದು ಹೇಳಬಹುದು.

ಸ್ಥಾನ : ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ, ಈ ಖಾತೆಯ ಕಾರಕ ಸ್ಥಾನವು ದಶಮ ಸ್ಥಾನವಿದ್ದರೂ ಮೇಲಿನ ಭಿನ್ನಭಿನ್ನ ವಿಭಾಗಗಳ ಕಾರಕ ಸ್ಥಾನಗಳು ಬೇರೆಬೇರೆ ಇರುತ್ತವೆ.

ಲಗ್ನ : ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ, ಭಿನ್ನಭಿನ್ನ ವಿಭಾಗ ಗಳಿಗೆ ಭಿನ್ನಭಿನ್ನ ಲಗ್ನಗಳಿರುವುದರಿಂದ ಖಾತೆಗೆ ನಿರ್ದಿಷ್ಟವಾದ ಲಗ್ನಗಳೇ ಇರುತ್ತವೆ ಎಂದು ಹೇಳಲುಬಾರದು.

ರಾಶಿ : ರಾಶಿದೃಷ್ಟಿಯಿಂದ ಪರಿಶೀಲಿಸಲಾಗಿ ಭಿನ್ನಭಿನ್ನ ವಿಭಾಗಗಳಿಗೆ ಭಿನ್ನಭಿನ್ನ ರಾಶಿಗಳು ಕಾರಕ ಇರುವುದರಿಂದ ಖಾತೆಗೆ ಇಂಥವೇ ನಿರ್ದಿಷ್ಟ ವಾದ ರಾಶಿಗಳು ಎಂದು ಹೇಳಲುಬಾರದು.

## ಆಡಳಿತೆಯ ವಿಭಾಗ

ಈ ಆಡಳಿತ ವಿಭಾಗದಲ್ಲಿ ಪ್ರಾಮುಖ್ಯವಾಗಿ ಡೈರೆಕ್ಟರ್ ಆಫ್ ಪಬ್ಲಿಕ್ ಇನ್ಸ್ಟ್ರಕ್ಶನ್ (Director of Public Instruction), ಜಂಟಿ ಡೈರೆಕ್ಟರ್ (Joint Director), ಆಡಿಷನಲ್ ಡೈರೆಕ್ಟರ್ (Additional Director), ಡಿವ್ಹಿಜನಲ್ ಡೆಪ್ಯುಟಿ ಡೈರೆಕ್ಟರ್ ( D. D. P. I. ).

ಇವರ ಕೆಲಸವು, ಪ್ರಾಮುಖ್ಯವಾಗಿ ಮೇಲ್ವಿಚಾರಣೆ ಆಡಳಿತೆಯೇ ಹೆಚ್ಚು ಪ್ರಧಾನವಿರುವುದರಿಂದ ಆಡಳಿತೆಯ ಕಾರಕಗ್ರಹವಾದ ರವಿಯೂ, ಖಾತೆಯ ಕಾರಕನೂ ಆಡಳಿತ ಕಾರಕನೂ ಆದ ಗುರುವೂ ಬಲಾಢ್ಯರಿದ್ದು (ಸ್ಥಾನಬಲ ಹಾಗೂ ರಾಶಿಬಲ) ಅನೇಕ ಗ್ರಹಗಳು ಪುರುಷರಾಶಿಯಲ್ಲಿ ರುತ್ತವೆ.

ಲಗ್ನದ ದೃಷ್ಟಿಯಿಂದ ವಿಚಾರಿಸಿದರೆ, ಆಡಳಿತೆಯ ಕಾರ್ಯಕ್ಕೆ ಪೋಷಕ ಲಗ್ನಗಳಾದ ಮೇಷ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಈ ಈ ಲಗ್ನಗಳೇ ಹೆಚ್ಚಾಗಿರುವುದು ಕಂಡುಬರುತ್ತದೆ.

ಸ್ಥಾನದೃಷ್ಟಿಯಿಂದ ವಿಚಾರಿಸಲಾಗಿ ಡೈರೆಕ್ಟರ್ (D. P. I.), ಡೆಪ್ಯೂಟಿ ಡೈರೆಕ್ಟರ್ ಮೊದಲಾದ ಹುದ್ದೆಗಳು ಅತಿ ವಿರಳವಿದ್ದು ಇಡೀ ರಾಜ್ಯದಲ್ಲಿ ಕೆಲವೇ ಸ್ಥಳಗಳಿರುವುದರಿಂದ ಮೇಲಿನ ವರಿಷ್ಠ ಹುದ್ದೆಗಳಿಗೆ ಬಡತಿ ಸಿಗುವುದಾಗಲಿ, ಅಧಿಕಾರಿಗಳಾಗುವುದಾಗಲಿ ಸುದೈವಿಗಳೆಂದೆ ಹೇಳಬಹುದು. ಆದ್ದರಿಂದ ಈ ಖಾತೆಯ ಕಾರಕಸ್ಥಾನವಾದ ದಶಮ ಸ್ಥಾನಕ್ಕಿಂತ ಭಾಗ್ಯ ಸ್ಥಾನ ಹಾಗು ಭಾಗ್ಯೇಶ ಬಲಾಢ್ಯರಿದ್ದು ರವಿ-ಗುರುಗಳೊಂದಿಗೆ ಶುಭ ಸಂಬಂಧವಿರಬೇಕು.

ರಾಶಿ : ರಾಶಿದೃಷ್ಟಿಯಿಂದ ಪರಿಶೀಲಿಸಿದರೆ, ಆಡಳಿತೆಗೆ ಪೋಷಕ ರಾಶಿಗಳು ಪುರುಷ ರಾಶಿಗಳಿರುವವರಿಂದ ಚಂದ್ರನು ಪುರುಷರಾಶಿಯಲ್ಲಿರಬೇಕು.

### ತಪಾಸಣೆ ಹಾಗೂ ಆಡಳಿತ ವಿಭಾಗ

(District Educational Officer) ಜಿಲ್ಲಾ ಶಿಕ್ಷಣಾಧಿಕಾರಿ, (Chief Inspector of Commercial School), ಇನ್ಸ್‌ಪೆಕ್ಟರ್ಸ್ (Inspectors).

ಅಡಳಿತಗಾರರೂ ಅಹುದು, ಮೇಲ್ವಿಚಾರಕರೂ ಅಹುದು, ತಪಾಸಣಾ ಅಧಿಕಾರಿಗಳೂ ಅಹುದು (Both Official and Executive work). ಆದ್ದರಿಂದ ಇಂಥ ಹುದ್ದೆಗಳಲ್ಲಿ ಕೆಲಸ ಮಾಡುವವರ ಜಾತಕದಲ್ಲಿ ಗ್ರಹಗಳ ಸ್ಥಾನಗಳನ್ನು ಬಹು ಸೂಕ್ಷ್ಮವಾಗಿ ಪರಿಶೀಲಿಸಬೇಕಾಗುತ್ತದೆ.

ಆಡಳಿತೆ ಹಾಗೂ ಸಾರ್ವಜನಿಕ ಮಾನಮರ್ಯಾದೆ ಕಾರಕಗ್ರಹವಾದ ರವಿಯೂ ಖಾತೆಯ ಕಾರಕನಾದ ಗುರುವೂ ಬಲಾಢ್ಯನಿರಬೇಕಲ್ಲದೆ ಜಿಲ್ಲೆ

ಯಲ್ಲಿರುವ ಹಣದ ವ್ಯವಹಾರ (Grants to Aided Schools) ಇವರ ಮುಖಾಂತರವೇ ನಡೆಯುತ್ತಿರುವುದರಿಂದ ಬುಧನೂ ಈ ಹುದ್ದೆಯ ಕಾರಕನಾಗುವನು.

ಸ್ಥಾನದೃಷ್ಟಿಯಿಂದ ದಶಮಸ್ಥಾನವೇ ಪ್ರಾಮುಖ್ಯವೆಂದು ಹೇಳಿದರೂ ಅವರೊಂದಿಗೆ ಭಾಗ್ಯ, ಲಾಭ, ಪಂಚಮ ಈ ಸ್ಥಾನಗಳನ್ನು ಪರಿಶೀಲಿಸ ಬೇಕಾಗುತ್ತದೆ.

ಲಗ್ನದೃಷ್ಟಿಯಿಂದ ನಿರ್ದಿಷ್ಟವಾದ ಲಗ್ನಗಳೇ ಪೋಷಕವೆಂದು ಹೇಳು ವುದಕ್ಕಿಂತ ಗ್ರಹಬಲವೇ ಹೆಚ್ಚು ಪೋಷಕವಿರುತ್ತವೆ. ಇವರೆ ಭಿನ್ನ ಭಿನ್ನ ಊರುಗಳಲ್ಲಿ ಶಾಲೆಗಳ ತಪಾಸಣೆಯ ಕೆಲಸಕ್ಕಿರುವುದರಿಂದ ಇವರ ಜಾತಕ ದಲ್ಲಿ ಚರಲಗ್ನಗಳು ಇಲ್ಲವೆ ದ್ವಿಸ್ವಭಾವ ರಾಶಿಯ ಲಗ್ನಗಳು ಹೆಚ್ಚಾಗಿದ್ದು ಲಗ್ನ, ತೃತೀಯ, ಸಪ್ತಮ, ಭಾಗ್ಯ ಈ ಸ್ಥಾನಗಳಲ್ಲಿಯೇ ಅನೇಕ ಗ್ರಹಗಳು ಇರುವುದು ಕಂಡುಬರುತ್ತದೆ.

ರಾಶಿದೃಷ್ಟಿಯಿಂದ ಚಂದ್ರನು ಸ್ತ್ರೀರಾಶಿಯವನಿದ್ದರೂ ಆಡಳಿತಕಾರ್ಯಕ್ಕೆ ಪೋಷಕ ರಾಶಿಗಳಾದ ಜಲಚರ ರಾಶಿಗಳೇ ಹೆಚ್ಚಾಗಿರುವುದು ಕಂಡುಬರುತ್ತದೆ.

ಇವರ ಜಾತಕದಲ್ಲಿರುವ ವೈಶಿಷ್ಟ್ಯವೆಂದರೆ ಅನೇಕ ಗ್ರಹಗಳು ಸ್ಥಾನ ಬಲದವರಿಗಿಂತ ರಾಶಿಬಲದವರೇ ಹೆಚ್ಚಾಗಿರುವುದು ಕಂಡುಬರುತ್ತದೆ.

## ಶಿಕ್ಷಕ ವಿಭಾಗ :

ಪ್ರಾಥಮಿಕ ಶಿಕ್ಷಕ, ಹೈಸ್ಕೂಲ್ ಶಿಕ್ಷಕ, ಲೆಕ್ಚರರ್, ಪ್ರೊಫೆಸರ್, ರೀಡರ್ ಮತ್ತು ಇತರ ಶಿಕ್ಷಕರು ( Instructors ), ಪಂಡಿತರು.

ಪ್ರಾಥಮಿಕ ಶಿಕ್ಷಕರೇ ಇರಲಿ, ಹೈಸ್ಕೂಲ್ ಶಿಕ್ಷಕರೇ ಇರಲಿ, ಕಾಲೇಜಿನ ಪ್ರಾಧ್ಯಾಪಕರೇ ಇರಲಿ, ಮಾಡುವ ಕಾರ್ಯ ಒಂದೇ ತೆರನಾಗಿರುವುದ ರಿಂದ ಜ್ಯೋತಿಷ್ಯದಲ್ಲಿ ಅಂತರವನ್ನು ಮಾಡುವುದಿಲ್ಲ.

ಕಾರಕಗ್ರಹ : ಈ ಹುದ್ದೆಗೆ ಕಾರಕಗ್ರಹವೆಂದರೆ ಗುರು. ಗುರುವಿನ ಗುರುತ್ವವಿಲ್ಲದೆ ಯಾರೂ 'ಗುರು'ವಾಗಲಾರರು.

ಗುರುವಿನ ತರುವಾಯ ಬುದ್ಧಿ ಕಾರಕಗ್ರಹವಾದ ಬುಧನೂ ಕೆಲ ಮಟ್ಟಿಗೆ ಕಾರಕನಾಗುವನು.

ಸ್ಥಾನ : ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ, ಶಿಕ್ಷಕರಿಗೆ ನಿರ್ದಿಷ್ಟವಾದ ಸ್ಥಾನಗಳೂ ಹಾಗೂ ಸ್ಥಾನಾಧೀಶರೂ ಬಲಾಢ್ಯರಿರಬೇಕೆಂಬ ನಿಯಮವಿದೆ.

ಖಾತೆಯ ಕಾರಕಸ್ಥಾನವಾದ ದಶಮ ಸ್ಥಾನಕ್ಕಿಂತ ದ್ವಿತೀಯ ಸ್ಥಾನ ಹಾಗೂ ಪಂಚಮ ಸ್ಥಾನ, ಹಾಗೂ ದ್ವಿತೀಯೇಶ, ಪಂಚಮೇಶರನ್ನೂ ಪರಿಶೀಲಿಸಬೇಕಾಗುತ್ತದೆ. ಏಕೆಂದರೆ, ಕಲಿಯುವುದು ಮತ್ತು ಕಲಿಸುವಿಕೆ- ಇವುಗಳಲ್ಲಿ ಅಂತರವಿದೆ. ಪಂಡಿತರು, ವಿದ್ವಾಂಸರೆಲ್ಲರೂ ಯಶಸ್ವೀ ಶಿಕ್ಷಕರಾಗಲಾರರು. ವಿದ್ಯಾರ್ಥಿಗಳ ಮೇಲೆ ಪರಿಣಾಮಕಾರಿಯಾಗುವಂತೆ ಕಲಿಸುವುದು ಒಂದು ಕಲೆ ಇರುವುದಲ್ಲದೆ, ಅದು ಎಲ್ಲರಿಗೂ ಕರಗತವಾಗುವುದಿಲ್ಲ.

ಲಗ್ನ : ಶಿಕ್ಷಕ ಹುದ್ದೆಗೆ ನಿರ್ದಿಷ್ಟವಾದ ಲಗ್ನಗಳೇ ಇರಬೇಕೆಂಬ ನಿಯಮವಿದೆ. ಮೇಷ, ವೃಷಭ, ಮಿಥುನ, ಸಿಂಹ, ಧನು, ಕನ್ಯಾ, ವೃಶ್ಚಿಕ, ಮೀನ ಈ ಲಗ್ನಗಳೇ ಶಿಕ್ಷಕರಲ್ಲಿ ಹೆಚ್ಚಾಗಿರುವುದು ಕಂಡುಬರುತ್ತದೆ.

ರಾಶಿ : ಶಿಕ್ಷಕರಾಗಲು ನಿರ್ದಿಷ್ಟವಾದ ರಾಶಿಯವರೇ ಇರಬೇಕೆಂಬ ನಿಯಮವಿಲ್ಲದಿದ್ದರೂ, ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರೇ ಹೆಚ್ಚಾಗಿರುವುದು ಕಂಡುಬರುತ್ತದೆ.

ಭಿನ್ನ ಭಿನ್ನ ವಿಷಯಗಳ (Subjects) ಶಿಕ್ಷಕರು :

ಯಾವುದೇ ವಿಷಯವನ್ನು ಕಲಿಸಲು ಅರ್ಥಾತ್ ಕಲಿಸುವ ಉದ್ಯೋಗವನ್ನು ಕೈಕೊಳ್ಳುವ ಶಿಕ್ಷಕರಿಗೆ ಗುರು ಗ್ರಹವಂತೂ ಬಲಾಢ್ಯವಿರಲೇ

ಬೇಕಾಗಿರುವದಲ್ಲದೆ ಇತರ ಗ್ರಹಗಳನ್ನೂ ಪರಿಶಿಲಿಸಬೇಕಾಗುತ್ತದೆ. ಏಕೆಂದರೆ, ಭಿನ್ನ ಭಿನ್ನ ವಿಷಯಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕರಿರುತ್ತಾರೆ.

ಇತಿಹಾಸಕ್ಕೆ ಕಾರಕರಾರು, ಭೂಗೋಲಿಗೆ ಕಾರಕರಾರು, ಪದಾರ್ಥ, ವಿಜ್ಞಾನ ಹಾಗೂ ರಸಾಯನ ಶಾಸ್ತ್ರಕ್ಕೆ ಕಾರಕರಾರು, ಈ ಮೊದಲಾದ ವಿಷಯಗಳ ಕಾರಕರಾರು, ಜಾತಕ ನೋಡಬೇಕು ಈ ಎಲ್ಲ ಸಂಗತಿಗಳಿಗಾಗಿ ನಾವು ಪ್ರತ್ಯೇಕವಾಗಿ "ಶಿಕ್ಷಣ ಜ್ಯೋತಿಷ್ಯ" ಎಂಬ ಗ್ರಂಥವನ್ನು ಈ ಮೊದಲೇ ಪ್ರಕಟಿಸಿರುತ್ತಿದ್ದು, ಪ್ರಸ್ತುತ ಈ ವಿಷಯಕ್ಕೆ ಬೇಕಾಗುವಷ್ಟನ್ನು ಮಾತ್ರ ಇಲ್ಲಿ ವಿವೇಚಿಸಲಾಗುವುದು.

ಇಂಜಿನಿಯರಿಂಗ್ ಹಾಗು ತಾಂತ್ರಿಕ ವಿಷಯವನ್ನು ಕಲಿಸುವ ಶಿಕ್ಷಕರ ಜಾತಕದಲ್ಲಿ ಗುರುವಿನ ಜೊತೆಗೆ ಮಂಗಳನೂ ಬಲಾಢ್ಯನಿರಬೇಕು.

ಕಾಯಿದೆಯನ್ನು ಕಲಿಸುವ ಶಿಕ್ಷಕರ ಜಾತಕದಲ್ಲಿ ಗುರುವಿನ ಜೊತೆಗೆ ಶನಿಯೂ ಬಲಾಢ್ಯನಿರಬೇಕು. ವಾಣಿಜ್ಯವನ್ನು ಕಲಿಸುವ ಶಿಕ್ಷಕರ ಜಾತಕದಲ್ಲಿ ಗುರುವಿನ ಜೊತೆಗೆ ಬುಧನೂ ಬಲಾಢ್ಯನಿರಬೇಕು, ವೈದ್ಯಕೀಯ (Medicine) ವಿಷಯವನ್ನು ಕಲಿಸುವ ಶಿಕ್ಷಕರ ಜಾತಕದಲ್ಲಿ ಗುರುವಿನ ಜೊತೆಗೆ ಶನಿ-ಮಂಗಳರೂ ಬಲಾಢ್ಯರಿರಬೇಕು.

ಯೋಗಗಳು : (೧) ದ್ವಿತೀಯ ಸ್ಥಾನದಲ್ಲಿ ಬಲಾಢ್ಯ ಗುರು, ಬುಧ ಇದ್ದ ಶಿಕ್ಷಕರು ವಿದ್ಯಾರ್ಥಿಗಳ ಮೇಲೆ ಪರಿಣಾಮಕಾರಿಯಾಗಿ ಪ್ರಭಾವವನ್ನು ಬೀರುವರು.

(೨) ಪಂಚಮ ಸ್ಥಾನದಲ್ಲಿ ಬಲಾಢ್ಯ ಗುರು, ಬುಧರು ಇದ್ದು ದ್ವಿತಿಯೇಶ ದುರ್ಬಲ ಹಾಗೂ ಅಶುಭಗ್ರಹ ದ್ವಿತೀಯ ಸ್ಥಾನದಲ್ಲಿದ್ದ ಶಿಕ್ಷಕರು ಸ್ವತಃ ವಿದ್ವಾನ್ ಹಾಗೂ ಪಂಡಿತರಿದ್ದರೂ ಯಶಸ್ವೀ ಶಿಕ್ಷಕರಾಗಲಾರರು.

(೩) ಬಲಾಢ್ಯ ಗುರು, ಬುಧರು ಲಗ್ನದಲ್ಲಿದ್ದ ಶಿಕ್ಷಕರು ಎಲ್ಲ ವಿಷಯಗಳನ್ನೂ ಕಲಿಸಬಲ್ಲರು.

(೪) ನವಮ ಹಾಗೂ ಲಾಭದಲ್ಲಿ ಬಲಾಢ್ಯ ಗುರು, ಬುಧರಿದ್ದ ಶಿಕ್ಷಕರು ಪಾಂಡಿತ್ಯವಿಲ್ಲವಿದ್ದರೂ ಪರಿಣಾಮಕಾರಿಯಾಗುವಂತೆ ಕಲಿಸಬಲ್ಲರು.

### ಟೀಚರ್ ಹಾಗೂ ಪ್ರೊಫೆಸರ್‌ರಲ್ಲಿ ಇರುವ ಭೇದಗಳು :

ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಕ (ಟೀಚಸ್ ) ರಲ್ಲಿಯೂ, ಕಾಲೇಜ್, ವಿಶ್ವವಿದ್ಯಾಲಯದ ಪ್ರೊಫೆಸರ್ಸ್, ರೀಡರ್ಸ್‌ರ ಜಾತಕದಲ್ಲಿಯೂ ಹೇಳಿಕೊಳ್ಳುವಂತಹ ಭೇದವಿರುವುದಿಲ್ಲ. ಗುರುವಿನ, ಬಲಾಬಲ ಅಂದರೆ, ಲಗ್ನಬಲ, ಸ್ಥಾನಬಲ, ರಾಶಿಬಲ, ದಿಗಬಲ— ಎಲ್ಲವೂ ಸಮವಾಗಿದ್ದರೂ ಪ್ರೊಫೆಸರ್ಸ್-ರೀಡಿರ್ಸರ ಜಾತಕಗಳಲ್ಲಿ ಕೆಲ ವಿಶಿಷ್ಟ ಯೋಗಗಳಿರುತ್ತವೆ.

(೧) ಪ್ರೊಫೆಸರ್ ಜಾತಕದಲ್ಲಿ ಗುರುವಿನ ಹೊರತಾಗಿ ಮಿಕ್ಕ ಅನೇಕ ಗ್ರಹಗಳು ಬಲಾಢ್ಯವಿರುತ್ತವೆ.

(೨) ಪ್ರೊಫೆಸರ್ ಜಾತಕದಲ್ಲಿ ಭಾಗ್ಯೇಶ ಹಾಗೂ ಭಾಗ್ಯಸ್ಥಾನವೂ ಬಲಾಢ್ಯವಿರುತ್ತವೆ.

(೩) ಪ್ರೊಫೆಸರ್‌ರಿಗೆ ವಿದ್ಯಾರ್ಥಿದಶೆಯಲ್ಲಿ ಸಾಡೆಸಾತಿ ಹಾಗು ಪಂಚ ಮಾಷ್ಟಮ ಶನಿ ಇರುವುದಿಲ್ಲ.

(೪) ಪ್ರೊಫೆಸರ್‌ರ ಜಾತಕದಲ್ಲಿ ಪಂಚಮಸ್ಥಾನ ಹಾಗೂ ಪಂಚಮಾಧೀಶರು ಬಲಾಢ್ಯರಿರುತ್ತಾರೆ.

### ಕಾರಕೂನಿಕೆಯ ವಿಭಾಗ

### ಪ್ರಥಮ ಹಾಗೂ ದ್ವಿತೀಯ ದರ್ಜೆಯ ಕಾರಕೂನರು, ಮ್ಯಾನೇಜರ ಮತ್ತು ಸೂಪರಿಂಟೆಂಡಂಟ್ :

ಇವರ ಜಾತಕಗಳಲ್ಲಿ ಇತರ ಖಾತೆಗಳ ಕಾರಕೂನಿಕೆಯ ಎಲ್ಲ ಯೋಗಗಳೂ ಇದ್ದು ಕೆಲವು ವಿಶಿಷ್ಟಯೋಗಗಳು ಇರುವುದು ಕಂಡುಬರುತ್ತದೆ.

(೧) ಖಾತೆಯ ಕಾರಕನಾದ ಗುರು ಬಲಾಢ್ಯನಿಲ್ಲದಿದ್ದರೂ ನಡೆದೀತು, ಆದರೆ ದುರ್ಬಲನಿರಕೂಡದು.

(೨) ಬುಧ-ಗುರು, ಬುಧ-ಶನಿ, ಗುರು-ಶನಿ ಇವರ ಶುಭ ಸಂಬಂಧ ವಿರಬೇಕು.

(೩) ಪಂಚಮಸ್ಥಾನ ಹಾಗೂ ಪಂಚಮೇಶರೂ ದೂಷಿತವಿರ ಕೂಡದು.

(೪) ಆಡಳಿತೆಯ ಕಾರಕ ಗ್ರಹಗಳಾದ ರವಿ-ಮಂಗಳರು ದುರ್ಬಲ ರಿರುವರು.

(೫) ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿರುವುವು.

ಇತರ ವಿಭಾಗಗಳು

ಹೆಡ್ ಆಫ್ ದಿ ಡಿಪಾರ್ಟಮೆಂಟ, ಹೆಡ್ ಮಾಸ್ತರ್, ಪ್ರಿನ್ಸಿಪಾಲ್ :

ಇವರು ಆಡಳಿತಗಾರರೂ, ಮೇಲ್ವಿಚಾರಕರೂ ಇರುವರಲ್ಲದೆ ಶಿಕ್ಷಕರೂ ಇರುತ್ತಾರೆ (Both administrative and Teaching). ಆದುದರಿಂದ ಇಂಥ ಹುದ್ದೆಯಲ್ಲಿ ಕೆಲಸಮಾಡುವವರ ಜಾತಕದಲ್ಲಿ ಆಡಳಿತ ಕಾರಕ ಗ್ರಹಗಳಾದ ರವಿ-ಮಂಗಳರೂ, ಆಡಳಿತೆಯ ಸ್ಥಾನಗಳಾದ ಭಾಗ್ಯಸ್ಥಾನವೂ ಬಲಾಢ್ಯವಿದ್ದು, ಮೇಲ್ವಿಚಾರಣಾ ಕಾರಕಗ್ರಹವಾದ ಮಂಗಳನೂ ಬಲಾಢ್ಯ ರಿರುತ್ತಾರೆ. ಶಿಕ್ಷಕ ಕಾರಕಗ್ರಹವಾದ ಬುಧ-ಗುರುಗಳೂ ಬಲಾಢ್ಯರಿದ್ದು, ಶಿಕ್ಷಕಕಾರಕ ಸ್ಥಾನಗಳಾದ ದ್ವಿತೀಯ, ಪಂಚಮ ಸ್ಥಾನಗಳು ಪೂರಕವಿರುವು ದಲ್ಲದೆ, ಅನೇಕ ಗ್ರಹಗಳು ಪುರುಷರಾಶಿಯಲ್ಲಿರುತ್ತವೆ.

ಇವರ ಜಾತಕದಲ್ಲಿ ದ್ವಿತೀಯ ಸ್ಥಾನಕ್ಕಿಂತ ಪಂಚಮ ಸ್ಥಾನವೂ ದಶಮ ಸ್ಥಾನಕ್ಕಿಂತ ಭಾಗ್ಯಸ್ಥಾನವೂ ಬಲಾಢ್ಯವಿರುವುದಲ್ಲದೆ ಮಧ್ಯಮ ವಯಸ್ಸಿನಲ್ಲಿ ಯೋಗಕಾರಕಗ್ರಹಗಳ ಶುಭದಶೆಯಿರುತ್ತದೆ, ಹಾಗೂ ಇವರ ಜಾತಕದಲ್ಲಿ ಅನೇಕ ಗ್ರಹಗಳು ಉದಿತ ಗೋಳಾರ್ಧದಲ್ಲಿರುತ್ತವೆ.

**ಡೆಪ್ಯೂಟಿ ಕಮೀಷನರ್ ಫಾರ್ ಎಗ್ಸಾಮಿನೇಷನ್ಸ್, ಹಾಗೂ ಅಸಿಸ್ಟಂಟ್ ಕಮೀಷನರ್ ಫಾರ್ ಎಗ್ಸಾಮಿನೇಷನ್ಸ್, ಸೆಕ್ರೆಟರಿ ಟೆಕ್ಸ್ಟ್ ಬುಕ್ ಕಮೀಟಿ ಹಾಗೂ ಅಸಿಸ್ಟಂಟ್ ಸೆಕ್ರೆಟರಿ, ಟೆಕ್ಸ್ಟ್ ಬುಕ್ ಕಮೀಟಿ**

ಈ ಮೊದಲಾದ ಹುದ್ದೆಗಳನ್ನು ಮಾಡುವ ಅಧಿಕಾರಿಗಳ ಜಾತಕಗಳಲ್ಲಿ ಖಾತೆಯ ಕಾರಕನಾದ ಗುರುವಿನಿಗಿಂತ ಬುಧನು ಬಲಾಢ್ಯನಿದ್ದು ಪಂಚಮ ಸ್ಥಾನ, ಪಂಚಮೇಶ, ಪಂಚಮ ಸ್ಥಾನದಲ್ಲಿರುವ ಗ್ರಹಗಳು ಹೆಚ್ಚು ಬಲಾಢ್ಯ ವಿದ್ದು, ವಾಯುರಾಶಿಯಲ್ಲಿಯೇ ಗ್ರಹಗಳು ಹೆಚ್ಚಾಗಿರುವುದಲ್ಲದೆ ಲಾಭೇಶ, ಭಾಗ್ಯೇಶರೂ ಕೂಡ ಬಲಾಢ್ಯರಿರುತ್ತಾರೆ.

**ಅಡ್ಮಿನಿಸ್ಟ್ರೇಟಿವ್ಹ ಆಫೀಸರ್ (Administrative Officer)**

ಇವರ ಕಾರ್ಯದ ಮೇಲ್ವಿಚಾರಣೆಗಾಗಿ ಅಧಿಕಾರವನ್ನು ಚಲಾಯಿಸುವ ಎರಡು ವರ್ಗದವರಿರುತ್ತಾರೆ. ಒಂದು ಚುನಾಯಿತ ಪ್ರತಿನಿಧಿಗಳ ವರ್ಗ (Chairman, President) ಗಳು ಇತ್ಯಾದಿ, ಮತ್ತೊಂದು ಖಾತೆಯ ಜಿಲ್ಹಾಧಿಕಾರಿಗಳ ವರ್ಗ. ಇವರು ಮಾಡುವ ಕಾರ್ಯದ ದೃಷ್ಟಿಯಿಂದ ಸ್ವತಂತ್ರವಾದ ಅಮಲ್ದಾರರೂ ಮೇಲ್ವಿಚಾರಕರೂ ಇರುವರಲ್ಲದೆ ಇತರ ವರ್ಗಗಳ ಅಧೀನರೂ ಆಗಿರುತ್ತಾರೆ, ಆದುದರಿಂದ ಇವರ ಜಾತಕಗಳು ವಿಚಿತ್ರವಾಗಿರುವುದರಿಂದ ಸೂಕ್ಷ್ಮವಾಗಿ ಪರಿಶೀಲಿಸಬೇಕು.

(೧) ಆಡಳಿತಕಾರಕ ಗ್ರಹಗಳಾದ ರವಿ, ಮಂಗಳ, ಗುರು ಇವರು ಬಲದವರಿದ್ದರೂ, ಸ್ಥಾನಬಲದವರಿರುವುದಿಲ್ಲ.

(೨) ಭಾಗ್ಯೇಶನಿಗಿಂತ ದಶಮೇಶನು ಬಲಾಢ್ಯನಿರುತ್ತಾನೆ.

(೩) ಅನೇಕ ಗ್ರಹಗಳು ಪುರುಷರಾಶಿಯಲ್ಲಿದ್ದರೂ ಚಂದ್ರನು ಸ್ತ್ರೀ ರಾಶಿಯಲ್ಲಿರುವನು.

(೪) ಯೋಗಕಾರಕ ಗ್ರಹಗಳೂ ಹಾಗೂ ಆಡಳಿತ ಕಾರಕಗ್ರಹಗಳೂ, ರಾಶಿಬಲ, ಸ್ಥಾನಬಲ— ಇದ್ದರೂ ವಕ್ರ, ಅಸ್ತ, ವೃದ್ಧಾಪ್ಯ-ಬಾಲ್ಯಾವಸ್ಥೆಯಲ್ಲಿರುವವು.

(೫) ಪಂಚಮ ಸ್ಥಾನಕ್ಕಿಂತ ದ್ವಿತೀಯ ಸ್ಥಾನ ಬಲಾಢ್ಯವಿರುತ್ತದೆ.

# ೧೮ ವೈದ್ಯಕೀಯ ಹಾಗೂ ಆರೋಗ್ಯ ಖಾತೆ

(Medical Departments & Health Dept.)

ವೈದ್ಯಕೀಯ ಖಾತೆ ಇತ್ತೀಚೆಗೆ ಅತಿಯಾಗಿ ಬೆಳೆದು ಪ್ರತಿಯೊಂದು ಪ್ರಾಂತ್ರದಲ್ಲಿಯೂ ಬೆರಳಿನಿಂದ ಎಣಿಸುವಷ್ಟು ಮೆಡಿಕಲ್ ಕಾಲೇಜುಗಳಿದ್ದು ಹಿಂದಿನ ಕಾಲ ಎಂದೋ ಅಳಿದು ಸದ್ಯಕ್ಕೆ ಎಲ್ಲ ಪ್ರಾಂತ್ರಗಳಲ್ಲಿಯೂ ಕನಿಷ್ಠ ೩-೪ ಮೆಡಿಕಲ್ ಕಾಲೇಜುಗಳನ್ನಾದರೂ ಕಾಣುವ ಸುಯೋಗ ಬಂದಿದೆ. ಇದಕ್ಕೆ ಡಾಕ್ಟರರ ಅಭಾವ, ಬೆಳೆಯುತ್ತಿರುವ ಜನಸಂಖ್ಯೆಗೆ ಕನಿಷ್ಠ ಆರೋಗ್ಯ ಒದಗಿಸುವ ಭರವಸೆ ನೀಡುವ ಸರಕಾರದ ಧೋರಣೆ, ವಿದ್ಯಾರ್ಥಿಗಳಲ್ಲಿ ವೈದ್ಯಕೀಯ ವೃತ್ತಿಯಲ್ಲಿಯ ಅಭಿರುಚಿಗಳೇ ಮೂಲ ಕಾರಣಗಳೆಂದು ಹೇಳಲಡ್ಡಿಯಿಲ್ಲ. ಕೇವಲ ಐದರಿಂದ ಹತ್ತು ವರ್ಷಕಾಲ ವೈದ್ಯಕೀಯ ವಿದ್ಯಾಲಯದಲ್ಲಿ ಅಭ್ಯಾಸ ಸಾಗಿಸಿ, ಜನರಾರೋಗ್ಯದ ಪೂರ್ಣಜ್ಞಾನ ಪಡೆದು ಸ್ವತಃ ಸೇವೆಸಲ್ಲಿಸುವ ಅನುಭವ ಹೊಂದಿದ ಡಾಕ್ಟರರು ತಮ್ಮ ಜ್ಞಾನ ಸಂಪಾದನೆಯ ಸೇವೆಯಿಂದ ಜನರಲ್ಲಿ ಪ್ರೀಯರಾಗಿರುವ ಅಸಂಖ್ಯ ಡಾಕ್ಟರರನ್ನು ನಾವು ಇಂದು ಕಾಣುತ್ತಿದ್ದೇವೆ. ಒಂದು ದೃಷ್ಟಿಯಿಂದ ನೋಡಲಾಗಿ ವೈದ್ಯಕೀಯ ವೃತ್ತಿ ಸ್ವತಂತ್ರ ವೃತ್ತಿಯೂ ಅಹುದು, ಸರಕಾರೀ ನವಕರಿಯೂ ಅಹುದು. ಹೀಗಿದ್ದರೂ ಸರಕಾರಿ ನವಕರಿಗಿಂತ ಸ್ವತಂತ್ರ ವೃತ್ತಿಯನ್ನೇ ಕೈಕೊಳ್ಳುವ ಡಾಕ್ಟರರ ಸಂಖ್ಯೆಯೇ ಹೆಚ್ಚೆಂದು ಅನುಭವದಿಂದ ಹೇಳಬಹುದು. ಇದಕ್ಕೆ ಜ್ಯೋತಿಷ್ಯದ ಕಾರಣವೂ ಇದ್ದೇ ಇದೆ. ಪ್ರತಿಯೊಂದು ಉದ್ಯೋಗಕ್ಕೂ ಸೇವಾ ( Employment ) ವೃತ್ತಿ ನವಕರಿಕಾರಕ ಗ್ರಹಗಳೂ, ಸ್ವತಂತ್ರ ಜೀವನ ( Independent business life )ವನ್ನು ಸಾಗಿಸುವ ವೃತ್ತಿಕಾರಕ ಗ್ರಹಗಳೂ ಇದ್ದೇ ಇರುತ್ತವೆ. ಆದರೆ ಈ ಭಿನ್ನ ಭಿನ್ನ ಗ್ರಹಗಳು ಭಿನ್ನ ಭಿನ್ನ ಉದ್ಯೋಗಕ್ಕೆ ಪ್ರತ್ಯೇಕವಾಗಿ ಕಾರ್ಯವನ್ನು (They perform different functions) ಮಾಡುತ್ತವೆ.

ಹೀಗಾಗಿ ವೈದ್ಯಕೀಯ ವೃತ್ತಿಯ ಕಾರಕ ಗ್ರಹಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಲಾಗಿ, ವೈದ್ಯಕೀಯ ಕಾರಕ ಗ್ರಹಗಳು ಮೂಲತಃ ಸೇವಾವೃತ್ತಿಯ

ಕಾರಕಕ್ಕೆ ಅಷ್ಟೊಂದು ಪೂರಕವಾಗಿರದೆ (Not inclined for Gevernment or any other dependent service) ಭಿನ್ನ ಭಿನ್ನವಾಗಿ ಅವರವರ ಜಾತಕದ ಗ್ರಹಗಳ ಪ್ರಕಾರ ಸೇವಾವೃತ್ತಿಯ ಅಥವಾ ಸ್ವತಂತ್ರ ಉದ್ಯೋಗಕ್ಕೆ ಪ್ರೇರಕವಾಗಿರುತ್ತಿದ್ದರೂ ಕೂಡಾ ಅಧಿಕ ಸಂಖ್ಯೆಯಲ್ಲಿ ಅನೇಕ ವೈದ್ಯಕೀಯ ಶಿಕ್ಷಣ ಪಡೆದ ವಿದ್ಯಾರ್ಥಿಗಳು (Doctors) ಸರಕಾರಿ ಅಥವಾ ಇತರ ನವಕರಿಯನ್ನು (Subordinate service) ಬಯಸುವದಿಲ್ಲ ವೆಂಬ ವಾದಕ್ಕೆ ಜ್ಯೋತಿಷ್ಯದ ಭಾಷೆಯೇ ಬೇರೆ ಇದೆ ಎಂದು ಹೇಳ ಬೇಕಾಗಿದೆ. ಸರಕಾರೀ ಅಥವಾ ಇತರ ನವಕರಿಯಿಂದ ಪ್ರಾಪ್ತಿ ಅಷ್ಟೊಂದು ಇಲ್ಲವೆಂತಲೂ, ಸ್ವತಂತ್ರ ಉದ್ಯೋಗದಿಂದ ಅದಕ್ಕೂ ಮೂರು ನಾಲ್ಕು ಪಟ್ಟಿನವರೆಗೆ ಹೆಚ್ಚು ಪ್ರಾಪ್ತಿಪಡೆಯಬಹುದೆಂದು ಸ್ವಾಭಾವಿಕವಾಗಿ ಅನೇಕರು ಸ್ವತಂತ್ರ ಉದ್ಯೋಗಕ್ಕೆ (Independent practice) ಕೈಹಾಕುವರೆಂಬ ವಾದ ಬಹಳಷ್ಟು ಸತ್ಯವಿದ್ದರೂ ನಾವು ಇಂದು ಸ್ವತಂತ್ರ ಉದ್ಯೋಗದಲ್ಲಿ ಏನೂ ಪ್ರಾಪ್ತಿ ಇಲ್ಲದೆ ನೊಣಹೊಡೆಯುತ್ತ ಕೂತ ಅನೇಕ ಡಾಕ್ಟರರನ್ನು ಕಾಣುತ್ತಿದ್ದೇವೆ. ಹೀಗಿದ್ದರೂ ಸಹ ಏನೂ ಪ್ರಾಪ್ತಿ ಇಲ್ಲದ ಸ್ವತಂತ್ರ ಉದ್ಯೋಗದಲ್ಲಿ ತೊಡಗಿದ್ದ ಡಾಕ್ಟರರು ಸೇವಾವೃತ್ತಿಯಲ್ಲಿ ಜೀವನವನ್ನು ಸಾಗಿಸಬೇಕೆಂಬ ಲವಲವಿಕೆ ಎಷ್ಟೊಂದೂ ಇಲ್ಲದ್ದನ್ನು ಕಾಣುವದಕ್ಕೆ ಜ್ಯೋತಿಷ್ಯದಲ್ಲಿ ಮೂಲಭೂತ ಕಾರಣಗಳಿವೆ. ಇವರ ಜಾತಕದಲ್ಲಿ ನವಕರಿ ಯೋಗಗಳೇ ಕಡಿಮೆ ಇದ್ದುದು ಕಂಡುಬರುತ್ತದೆ. ಇವನ್ನು ಇದೇ ಪುಸ್ತಕದ ೨ನೇಯ ಭಾಗದಲ್ಲಿ ವಿವರಿಸಲಾಗಿದೆ. ಅದು ಪ್ರತ್ಯೇಕ ಪುಸ್ತಕ.

ಕಾರಕಗ್ರಹ : ಈ ಖಾತೆಗೆ ಎರಡುಗ್ರಹಗಳು ಕಾರಕವಾಗುತ್ತವೆ. ವೈದ್ಯಕೀಯಖಾತೆಗೆ (Medical Department) ಮಂಗಳನೂ ಆರೋಗ್ಯ ಖಾತೆಗೆ (Public Health depts.) ಶನಿಯೂ ಕಾರಕರಾಗುತ್ತಾರೆ. ಮತ್ತು ವೃತ್ತಿಕಾರಕನಾದ ಷಷ್ಠೇಶನೂ ಕಾರಕನಾಗುತ್ತಾನೆ.

ಸ್ಥಾನ : ಸ್ಥಾನವೃಷ್ಟಿಯಿಂದ ಪರಿಶೀಲಿಸಿದರೆ ಸ್ವಾಭಾವಿಕ ಉದ್ಯೋಗದ ಸ್ಥಾನವಾದ ದಶಮಸ್ಥಾನವೂ ಡಾಕ್ಟರರ ವೃತ್ತಿಯ ಸ್ಥಾನವಾದ ಷಷ್ಠ ಸ್ಥಾನವೂ ಈ ಖಾತೆಯ ಕಾರಕ ಸ್ಥಾನಗಳಿರುತ್ತವೆ.

ಲಗ್ನ : ಲಗ್ನ ದೃಷ್ಟಿಯಿಂದ ನೋಡಿದರೆ ಮೇಷ, ಸಿಂಹ, ಕನ್ಯಾ, ಮಕರ ಈ ಲಗ್ನಗಳೂ ತದನಂತರ ವೃಷಭ, ತುಲಾ, ಧನು, ಕುಂಭ, ಕರ್ಕ ಈ ಲಗ್ನಗಳೂ ಕಾರಕವಿರುತ್ತವೆ.

ರಾಶಿ : ರಾಶಿದೃಷ್ಟಿಯಿಂದ ನೋಡಿದರೆ, ನಿರ್ದಿಷ್ಟವಾದ ರಾಶಿಯವರೇ ಇರಬೇಕೆಂಬ ನಿಯಮವಿಲ್ಲ. ಏಕೆಂದರೆ ಈ ಖಾತೆಯಲ್ಲಿರುವ ಭಿನ್ನ ಭಿನ್ನ ವೃತ್ತಿಗೆ ಭಿನ್ನಭಿನ್ನ ರಾಶಿಯ ಜನರು ಪೂರಕರಿರುತ್ತಾರೆ. ಉದಾಹರಣೆಗಾಗಿ: ವೈದ್ಯರಿಗೆ ಭಿನ್ನ ರಾಶಿಯವರೂ ಸರ್ಜನರಿಗೆ ಭಿನ್ನ ರಾಶಿಯವರೂ, ಡೀನ್ ಅಧ್ಯಾಪಕ ವರ್ಗದವರಿಗೆ ಬೇರೆ ರಾಶಿಯವರಿದ್ದರೆ ಕಾರಕರೂನರಿಗೆ ಭಿನ್ನ ಭಿನ್ನ ರಾಶಿಯವರಿರುತ್ತಾರೆ.

ಈ ಖಾತೆಯಲ್ಲಿರುವ ಪ್ರಮುಖ ಸಿಬ್ಬಂದಿ ವರ್ಗದವರು,
ಡೈರೆಕ್ಟರ, ಸಿವ್ಹಿಲ್ ಸರ್ಜನ್, ಮೆಡಿಕಲ್ ಆಫೀಸರ
(ಡಿಸ್ಟ್ರಿಕ್ಟ ಮೆಡಿಕಲ್ ಆಫೀಸರ) ಡೈರೆಕ್ಟರ ಆಫ್ ಪಬ್ಲಿಕ್ ಹೆಲ್ಥ

ಈ ಮೊದಲಾದ ಅಧಿಕಾರಿಗಳಿಗೆ ವೃತ್ತಿಗಿಂತಲೂ ಮೇಲ್ವಿಚಾರಣೆ ಆಡಳಿತೆಗೆ ಹೆಚ್ಚು ಪ್ರಾಧಾನ್ಯತೆ ಇರುವದರಿಂದ ಆಡಳಿತಕಾರಕ ಗ್ರಹವಾದ ರವಿಯು ಮೇಲ್ವಿಚಾರಣೆಗೆ ಕಾರಕನಾದ ಗುರುವೂ ವೃತ್ತಿಕಾರಕನಾದ ಮಂಗಳ-ಬುಧರು ಬಲಾಢ್ಯರಿರುತ್ತಾರೆ. (ರವಿ-ಗುರು ಇವರು ಹೆಚ್ಚು ಬಲಾಢ್ಯರು.

ಸ್ಥಾನ : ಸ್ಥಾನದೃಷ್ಟಿಯಿಂದ ವಿಚಾರಿಸಿದರೆ ಈ ಹುದ್ದೆಗಳು ಅತಿ ವಿರಳವಿರುವದರಿಂದ ಸುದೈವಿ ಜಾತಕನೇ ಇಂತಹ ಹುದ್ದೆಗಳನ್ನು ಪಡೆಯುವ ಕಾರಣ ಸುದೈವಿ ಸ್ಥಾನವಾದ ಭಾಗ್ಯಸ್ಥಾನವೂ ಸುದೈವಿ ಸ್ಥಾನಕ್ಕೆ ಪೋಷಕ ಸ್ಥಾನವಾದ ಲಗ್ನ ಪಂಚಮ ಸ್ಥಾನಗಳೂ ಮತ್ತು ಈ ಸ್ಥಾನಾಧೀಶರೂ ಹೆಚ್ಚು ಬಲಾಢ್ಯರಿರುತ್ತಾರೆ.

ಲಗ್ನ : ಲಗ್ನದೃಷ್ಟಿಯಿಂದ ನೋಡಿದರೆ ಆಡಳಿತಕಾರಕ ಲಗ್ನಗಳೇ ಹೆಚ್ಚಾಗಿರುತ್ತವೆ.

ರಾಶಿ : ರಾಶಿದೃಷ್ಟಿಯಿಂದ ನೋಡಿದರೆ ಇಂತಹ ರಾಶಿಯವರೇ ಇರ ಬೇಕೆಂಬ ನಿಯಮವಿಲ್ಲ.

## ಡಾಕ್ಟರರುಗಳು

ಖಾತೆಯ ಹಾಗೂ ವೃತ್ತಿಯ ಅತಿ ಪರಿಚಿತರಾದ ಈ ಜನರ ಜಾತಕ ದಲ್ಲಿಯ ಯೋಗದ ಬಗ್ಗೆ ಇದೇ ಗ್ರಂಥದ ಎರಡನೆಯ ಭಾಗ "ವೃತ್ತಿ ಜ್ಯೋತಿಷ್ಯ"ದಲ್ಲಿ ಸ್ವತಂತ್ರ ಉದ್ಯೋಗಸ್ಥರ ಮಾಲಿಕೆಯಲ್ಲಿ ವಿವರವಾಗಿ ಕೊಡಲಾಗಿದೆ. ಅದೊಂದು ಪ್ರತ್ಯೇಕ ಗ್ರಂಥ.

ಈ ವೃತ್ತಿಯ ಜನರು ಭಿನ್ನಭಿನ್ನ ಖಾತೆಯಲ್ಲಿ ಬೇರೆಬೇರೆ ನಾಮ ಗಳಿಂದ ವಿವಿಧ ಹುದ್ದೆಗಳಿಂದ ಕರೆಯಲ್ಪಡುವ ರೂಢಿಯನ್ನು ಕಾಣಬಹುದು. ಉದಾಹರಣೆಗಾಗಿ ರೈಲ್ವೆಯಲ್ಲಿ ಚೀಫ ಮೆಡಿಕಲ್ ಆಫೀಸರ್, ಡಿವ್ಹಿಜನಲ್ ಮೆಡಿಕಲ್ ಆಫೀಸರ್, ಅಸಿಸ್ಟಂಟ್ ಮೆಡಿಕಲ್ ಆಫೀಸರ್, ಅಸಿಸ್ಟಂಟ್ ಸರ್ಜನ್ ಎಂಬ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಆದರೆ ಮಿಲಿಟರಿ ಖಾತೆಯಲ್ಲಿ ಮಿಲಿಟರಿ ಹುದ್ದೆಗಳನ್ನು ಕೊಟ್ಟಿರುವುದನ್ನು ಕಾಣಬಹುದು. ಸಾರ್ವಜನಿಕ ಆರೋಗ್ಯ ಖಾತೆಯಲ್ಲಿ ಗ್ರೇಡ್ ೧, ಗ್ರೇಡ್ ೨, ಗ್ರೇಡ್ ೩ ಇತ್ಯಾದಿ ಗ್ರೇಡುಗಳಿಂದ ಕರೆಯಲ್ಪಡುವರು. ಇದೇ ರೀತಿ ರಾಜ್ಯಸರಕಾರ ಗಳಲ್ಲಿ ಸಹ ಡೈರಕ್ಟರ್, ಡಿಸ್ಟ್ರಿಕ್ಟ ಸರ್ಜನ್, ಡಿಸ್ಟ್ರಿಕ್ಟ ಮೆಡಿಕಲ್ ಆಫೀಸರ್, ತಾಲೂಕ ಮೆಡಿಕಲ್ ಆಫೀಸರ್ ಮೊದಲಾದ ಹುದ್ದೆಗಳನ್ನೂ ಶೈಕ್ಷಣಿಕ ಕಾಲೇಜುಗಳಲ್ಲಿ ಡೀನ್, ವ್ಹೈಸ್ ಡೀನ್, ಪ್ರೊಫೆಸರ್, ಅಸೋಸಿಯೇಟೆಡ್ ಪ್ರೊಫೆಸರ್, ಅಸಿಸ್ಟಂಟ್ ಪ್ರೊಫೆಸರ್, ಲೆಕ್ಚರರ್ ಈ ಮೊದಲಾದ ಹುದ್ದೆ ಗಳನ್ನು ಕಾಣಬಹುದು. ಆದುದರಿಂದ ಖಾತೆಯ ಕಾರಕಗ್ರಹದೊಂದಿಗೆ ವೃತ್ತಿಯ ಕಾರಕಗ್ರಹವನ್ನೂ ಸಂಸ್ಥೆಯ ಕಾರಕಗ್ರಹವನ್ನೂ ಪರಿಶೀಲಿಸ ಬೇಕು. ಉದಾಹರಣೆಗೆ : ಶೈಕ್ಷಣಿಕ ವೃತ್ತಿಯ ಡಾಕ್ಟರರಿಗೆ ಡಾಕ್ಟರ ವೃತ್ತಿಯ ಕಾರಕ ಗ್ರಹದೊಂದಿಗೆ ಶೈಕ್ಷಣಿಕ ವೃತ್ತಿಯ ಕಾರಕಗ್ರಹವಾದ ಗುರುವನ್ನೂ ಸರಕಾರದ ಉಚ್ಚ ಅಧಿಕಾರಿಗಳಾಲು ಸರಕಾರಿ ವರ್ಚಸ್ವಿ ಗ್ರಹವಾದ ರವಿ ಯನ್ನೂ ಪರಿಶೀಲಿಸಬೇಕಾಗುತ್ತದೆ.

ನರ್ಸಿಂಗ ಸ್ಟಾಫ್ (ದಾಯೀವೃತ್ತಿಯ ಜನರು)

ದಾಯಿ ವೃತ್ತಿ ಜಗತ್ತಿನ ಅತ್ಯಂತ ಪವಿತ್ರ ವೃತ್ತಿಗಳಲ್ಲಿ ಒಂದಾಗಿದೆ. ರೋಗಿಯ ಆರೈಕೆಯಲ್ಲಿ ದಾಯಿಯ ಪಾತ್ರವು ಬಹು ಮುಖ್ಯವಿರುತ್ತದೆ. ಡಾಕ್ಟರರ ಔಷಧಿಗಿಂತಲೂ ಹೆಚ್ಚಾಗಿ ದಾಯಿಯ ಕರುಣಾಮಯ ಆರೈಕೆಯೇ ರೋಗಿಯನ್ನು ಬಹು ಬೇಗ ಗುಣಹೊಂದುವಂತೆ ಮಾಡುತ್ತದೆ ಎಂದು ಹೇಳಿದರೆ ಅತಿಶಯೋಕ್ತಿಯೇನೂ ಆಗಲಾರದು. ದಾಯೀವೃತ್ತಿಗೆ, ಪುರುಷರಿಗಿಂತಲೂ ಸ್ತ್ರೀಯರೇ ಹೆಚ್ಚು ಒಪ್ಪುವರು. ಸ್ತ್ರೀಯರು ಈ ವೃತ್ತಿಗೆ ಹೇಳಿ ಮಾಡಿಸಿದಂತೆ ಇರುವರು. ಏಕೆಂದರೆ, ರೋಗಿಗೆ ಅತ್ಯಾವಶ್ಯಕವಿರುವ ಮಾತೃವಾತ್ಸಲ್ಯವನ್ನು ಸ್ತ್ರೀಯರೇ ನೀಡಬಲ್ಲರು. ವೈದ್ಯಕೀಯ ಪದವೀ ಪಡೆಯುವಷ್ಟು ಅವಶ್ಯವಾದ ಶಿಕ್ಷಣ ಪಡೆಯದೆ ಕೇವಲ ಅವಶ್ಯವಿದ್ದ ಜ್ಞಾನದ ಕಲ್ಪನೆ ಇದ್ದು ಡಾಕ್ಟರರಿಗೆ ಸಹಾಯ ಸಲ್ಲಿಸುವ ವರ್ಗವು.

ನರ್ಸಿಂಗ್ ಸೂಪರಿಂಟೆಂಡೆಂಟ್, ಮೇಟ್ರನ್, ನರ್ಸಿಂಗ್ ಸಿಸ್ಟರ್

ಸ್ಟಾಫ್ ನರ್ಸ್ : ಈ ಮೊದಲಾದ ಹುದ್ದೆಗಳನ್ನು ಅಲಂಕರಿಸಿದವರ ಮಹತ್ವದ ಕೆಲಸವೆಂದರೆ ರೋಗಿಗಳ ವಾರ್ಡುಗಳನ್ನು, ಆಪರೇಷನ್ನಿನ ಕೋಣೆಯನ್ನು, ಡ್ರೆಸ್ಸಿಂಗ್‌ರೂಮನ್ನು, ಅಡಿಗೆಮನೆಯ ಸ್ಟೋರ್ ರೂಮು ಮೊದಲಾದವುಗಳನ್ನು ಸಿದ್ಧಪಡಿಸುವುದು ನರ್ಸ, ಡ್ರೆಸ್ಸರ್ಸ್ ಮೊದಲಾದ ಕಿರಿಯ ನೌಕರದಾರರ ಮೇಲ್ವಿಚಾರಣೆ, ರೋಗಿಗಳ ಕ್ಷೇಮದ ಕಾಗದಗಳನ್ನು ( Case paper ) ನೋಡಿಕೊಳ್ಳುವುದು ಆಸ್ಪತ್ರೆಯ ಸ್ವಚ್ಛತೆಯನ್ನು ಕಾಯುವುದು ಇತ್ಯಾದಿ ಕೆಲಸಗಳಿರುತ್ತವೆ.

ನರ್ಸಿಂಗ್ ಸಿಸ್ಟರಗಳು ಸ್ವಾಭಾವಿಕವಾಗಿ ಡಾಕ್ಟರರಿಗೆ ರೋಗಿಗಳ ಪರೀಕ್ಷೆಯಲ್ಲಿ ಅವಶ್ಯವಾದ ಸಹಾಯವನ್ನು ಮಾಡುವುದು, ರೋಗಿಗಳ ಯೋಗಕ್ಷೇಮ ತೆಗೆದುಕೊಳ್ಳುವುದು ಮೊದಲಾದುವುಗಳೇ ಇವರ ಕೆಲಸವಿರುತ್ತವೆ.

ಕಾರಕ ಗ್ರಹ : ಈ ಮೊದಲಾದ ಗುಣಧರ್ಮವುಳ್ಳ ಹಾಗೂ ವೃತ್ತಿಯಿರುವ ಈ ಹುದ್ದೆಗಳ ಕಾರಕಗ್ರಹವೆಂದರೆ ಮಂಗಳನು. ಮಂಗಳನು

ಬಲಾಢ್ಯನಿಂದೆ ಯಾರೂ ಈ ಹುದ್ದೆಯನ್ನು ಯಶಸ್ವಿರೀತಿಯಿಂದ ನೆರವೇರಿಸ ಲಾರರು.

ಮಂಗಳನ ತರುವಾಯ ಶನಿ-ಬುಧರು ಈ ವೃತ್ತಿಯ ಕಾರಕರಾಗುತ್ತಾರೆ. (ಮಂಗಳನು ಕೇವಲ ರಾಶಿಬಲದವನಿದ್ದು, ಸ್ಥಾನಬಲದವನಾಗಿರುವುದಿಲ್ಲ.)

ಲಗ್ನ : ಲಗ್ನದ ದೃಷ್ಟಿಯಿಂದ ನೋಡಿದರೆ, ಮೇಷ, ಕರ್ಕ, ಸಿಂಹ, ಧನು, ಈ ಲಗ್ನಗಳು ತದನಂತರ ವೃಷಭ, ಮಕರ, ವೃಶ್ಚಿಕ ಈ ಲಗ್ನದವರೇ ಈ ನೌಕರಿಯಲ್ಲಿ ಅಧಿಕ ಪ್ರಮಾಣದಲ್ಲಿರುವುದು ಕಂಡುಬರುತ್ತದೆ.

ರಾಶಿ : ಪುರುಷ ರಾಶಿಯಲ್ಲಿಯೇ ಅನೇಕ ಗ್ರಹಗಳು ಹೆಚ್ಚಾಗಿರು ವುವಲ್ಲದೆ ಚಂದ್ರನೂ ಪುರುಷರಾಶಿಯಲ್ಲಿರುವನು.

ಪುರುಷ ನರ್ಸಗಳಲ್ಲಿ ( Male Nurse ) ಸ್ತ್ರೀರಾಶಿಯ ಚಂದ್ರ ನಿರುವನು.

ಸ್ಥಾನ : ಖಾತೆಯ ಸ್ಥಾನವಾದ ದಶಮ ಸ್ಥಾನವೂ ವೃತ್ತಿಯ ಸ್ಥಾನ ವಾದ ಷಷ್ಠಸ್ಥಾನವೂ ಇವರ ಕಾರಕಸ್ಥಾನಗಳಿರುತ್ತವೆ. ಆದುದರಿಂದ ದಶಮೇಶನೂ ಷಷ್ಠೇಶನೂ ಬಲಾಢ್ಯರಿರುತ್ತಾರೆ.

ಯೋಗಗಳು : ಇವರ ಜಾತಕದಲ್ಲಿ ಈ ಕೆಳಗೆ ಕಾಣಿಸಿದ ಯೋಗ ಗಳಿರುತ್ತವೆ.

( i ) ಸಪ್ತಮೇಶನು ದುರ್ಬಲನಿದ್ದು ಸಪ್ತಮಸ್ಥಾನದಲ್ಲಿ ಪಾಪಗ್ರಹ ಗಳು ಇಲ್ಲವೆ ದೂಷಿತ ಸಪ್ತಮಸ್ಥಾನವಿರುತ್ತವೆ.

( ii ) ಶನಿ-ಮಂಗಳ, ರವಿ-ಶನಿ, ಮಂಗಳ-ರಾಹು, ಚಂದ್ರ-ಶನಿ, ಚಂದ್ರ-ರಾಹು ಇವರ ಸಮಸಪ್ತಕವಾಗಲಿ ಯುತಿಯಾಗಲಿ ಪರಸ್ಪರ ದೃಷ್ಟಿಯಾಗಲಿ ಸಪ್ತಮ, ಪಂಚಮ, ಲಾಭ, ಚತುರ್ಥ, ದಶಮ ಈ ಸ್ಥಾನಗಳಲ್ಲಿರುತ್ತವೆ.

( iii ) ಶುಕ್ರ–ಚಂದ್ರ, ಚಂದ್ರ–ಮಂಗಳ, ಶುಕ್ರ–ಮಂಗಳ, ಶುಕ್ರ ಶನಿ, ಚಂದ್ರ-ಶನಿ ಇವರ ಯುತಿಯಾಗಲಿ ಸಮ ಸಪ್ತಕಯೋಗವಾಗಲಿ ಅನ್ಯೋನ್ಯ ದೃಷ್ಟಿಯಾಗಲಿ ಲಗ್ನ, ಸಪ್ತಮ, ಪಂಚಮ, ಅಷ್ಟಮ, ವ್ಯಯ, ಲಾಭ, ಈ ಸ್ಥಾನಗಳಲ್ಲಿರುತ್ತವೆ.

( iv ) ಸಪ್ತಮದಲ್ಲಿ ಮಂಗಳ, ಪಂಚಮದಲ್ಲಿ ಶನಿ ಇದ್ದು ಸಪ್ತಮೇಶನು ದುರ್ಬಲನಿರುತ್ತಾನೆ.

( v ) ಸುಖೇಶನೂ ಲಗ್ನೇಶನೂ ದುರ್ಬಲರಿರುತ್ತಾರೆ.

( vi ) ಪುರುಷ ರಾಶಿಯ ಚಂದ್ರನೂ ಬಲಾಢ್ಯ ಮಂಗಳನೂ ದೂಷಿತ ಸಪ್ತಮಸ್ಥಾನವೂ ಇರುವುದೇ ಇವರ ಜಾತಕದಲ್ಲಿರುವ ವೈಶಿಷ್ಟ್ಯ.

## ಕಾಂಪೌಂಡರ್ಸ

ಇವರು ಕೇವಲ ಡಾಕ್ಟರರ ಆದೇಶದಂತೆ ರೋಗಿಗಳಿಗೆ ಔಷಧಕೊಡಲು ನಿಯಮಿಸಿದ ಅವಶ್ಯವಾದ ಸಿಂಬ್ಬದಿಯಾಗಿದ್ದಾರೆ ಎನ್ನಬಹುದು. ಇವರಿಗೆ ಔಷಧಗಳ ಜ್ಞಾನ ಸ್ವಲ್ಪಮಟ್ಟಿಗೆ ಇರುತ್ತದೆ.

**ಕಾರಕಸ್ಥಾನ :** ಔಷಧವನ್ನು ತಯಾರಮಾಡುವ, ರಸಾಯನವನ್ನು ಮಿಶ್ರಣಮಾಡುವ ಕೆಲಸವು ಅತಿಸೂಕ್ಷ್ಮವಿದ್ದು, ಡಾಕ್ಟರುಗಳು ಹೇಳಿದ ಪ್ರಮಾಣದಲ್ಲಿ ಔಷಧಿಗಳನ್ನು ತಯಾರು ಮಾಡುವ ಕೆಲಸವೇ ಮುಖ್ಯ ಕೆಲಸವಿರುವುದರಿಂದ ರೋಗಕಾರಕ ಸ್ಥಾನವಾದ ಷಷ್ಠಮ ಸ್ಥಾನವೇ ರೋಗಶಮನ ಮಾಡಲು ಕಂಪೌಂಡರರಿಗೆ ಬಲಾಢ್ಯವಿರಬೇಕು.

**ಕಾರಕಗ್ರಹ :** ಸೂಕ್ಷ್ಮ ಹಾಗೂ ಸಾವಧಾನ ಕೆಲಸಗಳಿಗೆ ಶನಿಯೇ ಕಾರಕನಿರುವುದರಿಂದ ಶನಿಯು ಇವರ ಜಾತಕದಲ್ಲಿ ಬಲಾಢ್ಯನಿರುತ್ತಾನೆ.

(ಕೇವಲ ರಾಶಿಬಲ) ಶನಿಯ ತರುವಾಯ ಕುಶಲಮತಿ ಕಾರಕನಾದ ಬುಧನೂ ರಸಾಯನದ್ರವ್ಯ ಹಾಗೂ ಪ್ರವಾಹೀಪದಾರ್ಥಗಳ ಕಾರಕನಾದ ಚಂದ್ರನೂ ಈ ಹುದ್ದೆಯ ಕಾರಕಗ್ರಹರಾಗುವರು.

ರಾಶಿ : ರಾಶಿದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಸಿಂಹ, ಕನ್ಯಾ, ಮಕರ, ಮೀನ ಈ ರಾಶಿಯವರೇ ಹೆಚ್ಚಾಗಿರುವುದು ಕಂಡುಬರುತ್ತದೆ.

ಲಗ್ನ : ಲಗ್ನದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಸಿಂಹ, ಕನ್ಯಾ, ಮಕರ, ಈ ಲಗ್ನಗಳೂ ತದನಂತರ ವೃಷಭ, ತುಲಾ, ಕುಂಭ ಈ ಲಗ್ನಗಳೇ ಹೆಚ್ಚಾಗಿರುತ್ತವೆ.

ಯೋಗ : ಇವರ ಜಾತಕದಲ್ಲಿರುವ ಯೋಗಗಳು ಈ ಕೆಳಗೆ ಕಂಡಂತೆ ಇರುತ್ತವೆ.

( i ) ಯೋಗ ಕಾರಕಗ್ರಹಗಳು ದುರ್ಬಲವಿರುವುವು.

( ii ) ಅನೇಕ ಗ್ರಹಗಳು ಹೆಚ್ಚಾಗಿ, ಅಸ್ತ, ವಕ್ರ, ಬಾಲ್ಯಾವಸ್ಥೆ, ವೃದ್ಧಾಪ್ಯದಲ್ಲಿರುವುವು.

( iii ) ಲಗ್ನೇಶ, ಭಾಗ್ಯೇಶ, ಪಂಚಮೇಶ, ಹಾಗೂ ರವಿ, ಮಂಗಳ ದುರ್ಬಲರಿರುವರು.

### ಭಿನ್ನ ಭಿನ್ನ ರೋಗಗಳ ಮೇಲಿನ ಅಧಿಕಾರಿಗಳು ಹಾಗೂ ನೌಕರದಾರರು

ಸೀನಿಯರ್ ಲೆಪ್ರೊಜಿಸ್ಟ್ (Senior Leprologist).

ಜೂನಿಯರ್ ಲೆಪ್ರೊಜಿಸ್ಟ್ (Junior Leprologist).

ಮಲೇರಿಯಾ ಆಫೀಸರ್ (Malaria Officer).

ಎಂಟೊಮೊಲಾಜಿಸ್ಟ್ (Entomologist).

ಸಾಂಕ್ರಾಮಿಕ ರೋಗದ ಅಧಿಕಾರಿ
(Epidemic Medical Officer)

ಈ ಮೊದಲಾದ ವಿಶಿಷ್ಟ ರೋಗಗಳ ತಜ್ಞ ಅಧಿಕಾರಿ ಹಾಗೂ ನೌಕರ ವರ್ಗದವರ ಜಾತಕದಲ್ಲಿ ಈ ಕೆಳಗಿನಂತೆ ಯೋಗಗಳಿರುತ್ತವೆ.

(೧) ಷಷ್ಠೇಶನು ಬಲಾಢ್ಯನಿರುತ್ತಾನೆ.

(೨) ದಶಮೇಶನು ಬಲಾಢ್ಯನಿರುತ್ತಾನೆ.

(೩) ಷಷ್ಠೇಶ, ದಶಮೇಶರ ಶುಭ ಸಂಬಂಧವಿದ್ದು ಷಷ್ಠಸ್ಥಾನದಲ್ಲಿರುವ ಗ್ರಹವೂ ದಶಮ ಸ್ಥಾನದಲ್ಲಿರುವ ಗ್ರಹವೂ ಬಲಾಢ್ಯವಿರುತ್ತವೆ.

(೪) ಡಾಕ್ಟರ್, ವೈದ್ಯ, ಹಕೀಮರ ಜಾತಕದಲ್ಲಿರುವ ಯೋಗಗಳೇ ಇವರ ಜಾತಕದಲ್ಲಿರುತ್ತವೆ.

## ಕುಟುಂಬ ಯೋಜನಾ ಅಧಿಕಾರಿಗಳು ಹಾಗೂ ನೌಕರವರ್ಗದವರು

ಹೆಚ್ಚು ಮಕ್ಕಳನ್ನು ಹೆರುವವರೂ ಕೂಡ ಒಂದು ಪ್ರಕಾರದ ರೋಗ ಬಾಧೆಯಿಂದ ಪೀಡಿತರಾದಂತೆ ಎಂಬ ಕಲ್ಪನೆ ಇದ್ದು ಈ ರೋಗದ ಬಾಧೆಯನ್ನು ಶಮನ ಮಾಡಲು ಪ್ರಯತ್ನಿಸುವ ಈ ಕುಟುಂಬ ಯೋಜನೆಯ ನೌಕರವರ್ಗದವರು ಒಂದ ರೀತಿಯ ವೈದ್ಯಕೀಯ ವೃತ್ತಿಯಂತೆ ಇವರ ಕೆಲಸ-ಕಾರ್ಯವಿರುವುದರಿಂಧ ವೈದ್ಯಕೀಯ ವೃತ್ತಿಯಲ್ಲಿರುವ ಡಾಕ್ಟರ್‌ಗಳು, ನರ್ಸ್, ಕಂಪೌಂಡರ್ ಮೊದಲಾದವರ ಯೋಗಗಳಂತೆಯೇ

ಇವರ ಯೋಗಗಳು ಇದ್ದು ಕೆಲವು ವಿಶಿಷ್ಟ ಯೋಗಗಳು ಈ ಕೆಳಗೆ ಕಂಡಂತೆ ಇರುತ್ತವೆ.

(೧) ಪಂಚಮೇಶ, ಹಾಗೂ ಷಷ್ಠೇಶರು ಮತ್ತು ಪಂಚಮಸ್ಥಾನ ಹಾಗೂ ಷಷ್ಠ ಸ್ಥಾನಗಳು ಬಲಾಢ್ಯವಿರುತ್ತವೆ.

(೨) ಮಿತಸಂತಾನಕಾರಕ ಗ್ರಹಗಳಾದ ಶನಿ, ರಾಹು, ಮಂಗಳರು ಇವರ ಜಾತಕದಲ್ಲಿ ಬಲಾಢ್ಯರಿದ್ದು ಗುರು-ಶುಕ್ರ–ಚಂದ್ರರು ದುರ್ಬಲರಿರುತ್ತಾರೆ.

ವಿಶೇಷ ಸೂಚನೆ : ವೈದ್ಯಕೀಯ ಹಾಗೂ ಆರೋಗ್ಯ ಖಾತೆ ಈ ವಿಷಯದ ಬಗೆಗೆ ನಾವು "ಆರೋಗ್ಯ ಜ್ಯೋತಿಷ್ಯ" ಎಂಬ ಪ್ರತ್ಯೇಕವಾದ ಗ್ರಂಥವನ್ನು ಪ್ರಕಟಿಸಿದ್ದು ಆ ಪುಸ್ತಕದಲ್ಲಿ ಈ ಕುರಿತು ವಿವರವಾಗಿ ವಿವೇಚಿಸಲಾಗಿದೆ.

## ೧೯ ನ್ಯಾಯಖಾತೆ

(Judical Department)

ಮುನ್ಸೀಫ್, ಮ್ಯಾಜಿಸ್ಟ್ರೇಟ್, ಸಿವ್ಹಿಲ್ ಜಡ್ಜ್, ಜಿಲ್ಹಾ ನ್ಯಾಯಾಧೀಶ, ಹೈಕೋರ್ಟ ನ್ಯಾಯಾಧೀಶ, ಸುಪ್ರೀಂ ಕೋರ್ಟ ನ್ಯಾಯಾಧೀಶ—ಇಂತಹ ಹೊಣೆಗಾರಿಕೆ ಸ್ಥಾನವನ್ನು ಪಡೆಯಲು ಜಾತಕವು ನಿರ್ದಿಷ್ಟವಾದ ಯೋಗಗಳುಳ್ಳದ್ದು ಇರುತ್ತದೆ.

ಕಾರಕ ಗ್ರಹ : ನ್ಯಾಯಾಧೀಶರಾಗಲು ಜಾತಕದಲ್ಲಿ ನ್ಯಾಯಾಧೀಶ ಕಾರಕವಾದ ಗುರುವು ಬಲಾಢ್ಯನೂ ಯೋಗಕಾರಕನೂ ಇರಲೇಬೇಕು. ಗುರುವು ಬಲಾಢ್ಯನಿರದೆ ಯಾರೂ ನ್ಯಾಯಾಧೀಶರಾಗರಾರರು. ಕಾಯಿದೆ ಕಾರಕನು ಶನಿಯೇನೋ ನಿಜ, ಆದರೆ ನ್ಯಾಯಾಧೀಶಕಾರಕನು ಗುರುವು.

ಗುರುವಿನ ತರುವಾಯ ಅಧಿಕಾರಿ ಯೋಗವನ್ನು ಕೊಡುವ ರವಿಯು ಬಲಾಢ್ಯನಿರಬೇಕು. ಕೇವಲ ಶನಿಯು ಬಲಾಢ್ಯನಿದ್ದ ವ್ಯಕ್ತಿಗಳು ಮುನ್ಸೀಫ್, ಮ್ಯಾಜಿಸ್ಟ್ರೇಟ್‌ಗಳಿಂದ ಜಿಲ್ಲಾ ನ್ಯಾಯಾಧೀಶರಾಗಬಹುದಾಗಿದೆ. ಹೈಕೋರ್ಟ್ ಮತ್ತು ಸುಪ್ರೀಂ ಕೋರ್ಟ್ ನ್ಯಾಯಾಧೀಶರಾಗಲು ಶನಿಯ ಜೊತೆಗೆ ಗುರುವೂ ಬಲಾಢ್ಯನಿರಲೇಬೇಕಾಗುತ್ತದೆ.

ಲಗ್ನ : ನ್ಯಾಯಾಧೀಶರಾಗಲು ಜಾತಕದಲ್ಲಿ ನಿರ್ದಿಷ್ಟ ಲಗ್ನಗಳೇ ಇರಬೇಕೆಂಬ ನಿಯಮವಿದೆ. ರಾಜಕೀಯ ರಾಶಿಗಳಾದ ಕರ್ಕ, ಸಿಂಹ, ಧನು, ತುಲಾ, ಮೇಷ ಈ ಲಗ್ನಗಳೇ ನ್ಯಾಯಾಧೀಶರ ಜಾತಕದಲ್ಲಿ ಹೆಚ್ಚಾಗಿರುವುದು ಕಂಡುಬರುತ್ತವೆ. ಇವುಗಳ ನಂತರ ಮಿಥುನ, ಮೀನ ಲಗ್ನಗಳಿರುವುದನ್ನೂ ಕಾಣಬಹುದಾಗಿದೆ.

ಸ್ಥಾನ : ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ, ನವಮ ಸ್ಥಾನವೇ (ಭಾಗ್ಯಸ್ಥಾನ) ನ್ಯಾಯಾಧೀಶರ ಕಾರಕಸ್ಥಾನವೆಂದು ಹೇಳಬಹುದು. ಭಾಗ್ಯೇಶ ಹಾಗು ಗುರು ಇವರ ಶುಭ ಸಂಬಂಧ ಇದ್ದ ಜಾತಕನು ಶ್ರೇಷ್ಠ ನ್ಯಾಯಾಧೀಶನಾಗಬಲ್ಲನು.

ನ್ಯಾಯಾಧೀಶರ ಜಾತಕದಲ್ಲಿ ದ್ವಿತೀಯ ಸ್ಥಾನವು ಅಷ್ಟೊಂದು ಬಲಾಢ್ಯವಿರುವುದಿಲ್ಲ. ಆದರೆ ಪಂಚಮ ಸ್ಥಾನವು ಹಾಗೂ ಪಂಚಮಾಧೀಶನೂ ಬಲಾಢ್ಯನಿದ್ದು ಪಂಚಮೇಶ ಹಾಗೂ ಭಾಗ್ಯೇಶರ ಶುಭ ಸಂಬಂಧವೂ ಇರುವುದಲ್ಲದೆ ಪಂಚಮೇಶ ಹಾಗೂ ಗುರುವಿನ ಸಂಬಂಧವೂ ಮತ್ತು ಪಂಚಮೇಶ–ಭಾಗ್ಯೇಶ–ಗುರು ಇವರ ಶುಭಯೋಗವಿದ್ದ ಜಾತಕನು ಶ್ರೇಷ್ಠ ನ್ಯಾಯಾಧೀಶನಾಗಬಲ್ಲನು.

ಯೋಗಗಳು : ನ್ಯಾಯಾಧೀಶ ಸ್ಥಾನನೆಂದರೆ ಸರ್ಕಾರದ ಯಾವುದೆ ಹಿರಿಯ ಅಧಿಕಾರಿಗಳಿಗಿಂತಲೂ ಹೆಚ್ಚಿನ ಸ್ಥಾನವಿರುವುದರಿಂದ ಇವರ ಜಾತಕದಲ್ಲಿ ಅನೇಕ ರಾಜಯೋಗಗಳಿದ್ದು, ಅನೇಕ ಗ್ರಹಗಳು ಸ್ವಗೃಹ ಹಾಗೂ ಉಚ್ಚ ರಾಶಿಯಲ್ಲಿರುವುವು.

ರಾಶಿ : ನ್ಯಾಯಾಧೀಶರಾಗಲು ಇಂಥ ರಾಶಿಯ ಜನರೇ ಇರಬೇಕೆಂಬ ನಿಯಮವಿಲ್ಲ.

## ಮುಖ್ಯ ನ್ಯಾಯಾಧೀಶ
## (Principal Judge)

ನ್ಯಾಯಾಧೀಶರಲ್ಲಿ ಪ್ರಿನ್ಸಿಪಲ್ ನ್ಯಾಯಾಧೀಶ ಮತ್ತು ಅಡಿಷನಲ್ ನ್ಯಾಯಾಧೀಶ ಎಂಬುದಾಗಿ ಎರಡು ಭಾಗಗಳಿವೆ. ರಾಶಿ-ಬಲ ಸ್ಥಾನ-ಬಲ, ಗ್ರಹ-ಬಲ, ಗ್ರಹ-ಯೋಗ— ಈ ಎಲ್ಲವೂ ಈರ್ವರಲ್ಲಿ ಸಮಾನವಿದ್ದರೂ ಮುಖ್ಯ ನ್ಯಾಯಾಧೀಶರ ಜಾತಕದಲ್ಲಿ ರವಿಯು ಸ್ವಲ್ಪ ಹೆಚ್ಚು ಬಲಾಢ್ಯ ನಿರುವನು, ಅಥವಾ ಗ್ರಹಗಳ ರಾಶಿ ಬಲಕ್ಕಿಂತ ಸ್ಥಾನ ಬಲವೂ ಹೆಚ್ಚಿರುತ್ತದೆ. ಮುಖ್ಯ ನ್ಯಾಯಾಧೀಶನು ನ್ಯಾಯದಾನದ ಜೊತೆಗೆ ಆಡಳಿತೆಯ ಕಾರ್ಯವನ್ನೂ ನೋಡುವದರಿಂದ ಆಡಳಿತಕಾರಕ ಗ್ರಹಗಳೂ, ಆಡಳಿತ ಕಾರಕ ಯೋಗಗಳೂ, ಜಾತಕದಲ್ಲಿದ್ದು ಅನೇಕ ಗ್ರಹಗಳು ಪುರುಷರಾಶಿ ಯಲ್ಲಿರುತ್ತವೆ.

## ಪಬ್ಲಿಕ್ ಪ್ರಾಸಿಕ್ಯೂಟರ್, ಅಡ್ವೊಕೇಟ್ ಜನರಲ್,
## ಅಟರ್ನಿ ಜನರಲ್ ಮತ್ತು ಸರ್ಕಾರೀ ವಕೀಲ :

ಈ ತರಹದ ಸ್ಥಾನಗಳನ್ನು ಪಡೆಯಲು ಜಾತಕದಲ್ಲಿ ಗುರುವಿಗಿಂತ ರವಿ-ಮಂಗಳರೇ ಬಲಾಢ್ಯರಿರುವುದನ್ನು ಕಾಣಬಹುದಾಗಿದೆ. ಇಂತಹವರ ಜಾತಕದಲ್ಲಿ ಭಾಗ್ಯಸ್ಥಾನಕ್ಕಿಂತ ದಶಮ ಸ್ಥಾನವೇ ಹೆಚ್ಚು ಬಲಾಢ್ಯವಿರುತ್ತದೆ. ಅನೇಕ ಗ್ರಹಗಳು ಅಗ್ನಿ ರಾಶಿಯಲ್ಲಿಯೂ ಇಲ್ಲವೆ ಜಲ ರಾಶಿಯಲ್ಲಿಯೂ ಇದ್ದು ಅನೇಕ ಗ್ರಹಗಳು ಹೆಚ್ಚಾಗಿ ಅನುದಿತ ಗೋಲಾರ್ಧದಲ್ಲಿ ಇರುತ್ತವೆ. ಇವರ ಜಾತಕದಲ್ಲಿ ಶನಿಯು ರಾಶಿಬಲದವನೂ ಹಾಗೂ ಸ್ಥಾನಬಲದವನೂ ಇರುತ್ತಾನೆ.

## ಶಿರಸ್ತೆದಾರ, ನಾಜಿರ, ಅಸಿಸ್ಟಂಟ ರಜಿಸ್ಟ್ರಾರ, ಡೆಪ್ಯುಟಿ ರಜಿಸ್ಟ್ರಾರ, ರಜಿಸ್ಟ್ರಾರ :

ಈ ತರಹದ ಸ್ಥಾನವನ್ನು ಪಡೆಯಲು ರವಿ-ಗುರುಗಳ ಬಲಾಬಲದ ಅವಶ್ಯಕತೆಯಿರುವುದಿಲ್ಲ. ಇವರ ಜಾತಕದಲ್ಲಿ ರವಿ-ಮಂಗಳರು ಹೆಚ್ಚಾಗಿ ದುರ್ಬಲ ಇದ್ದುದು ಕಂಡುಬರುತ್ತದೆ. ಗುರು ಬಲಾಢ್ಯನಿರದಿದ್ದರೂ ದುರ್ಬಲನಿರಲಾರ.

ಈ ತರಹದ ಸ್ಥಾನವನ್ನು ಪಡೆಯಲು ಬುಧ, ಶನಿಯರೇ ಕಾರಕರು, ಹಾಗು ಯೋಗಕಾರಕರು ಇರುತ್ತಾರೆ.

ಇವರು ಹೆಚ್ಚಾಗಿ ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮೀನ ಈ ರಾಶಿಯವರೇ ಇದ್ದುದು ಕಂಡುಬರುತ್ತದೆ.

## ಬೆಂಚ್ ಕ್ಲಾರ್ಕ
## (Bench Clerk)

ಇವರ ಜಾತಕದಲ್ಲಿಯ ಯೋಗಗಳು ಸಾಮಾನ್ಯ ಕಾರಕೂನರಂತೆಯೇ ಇದ್ದು ಕೆಲವು ವಿಶಿಷ್ಟ ಯೋಗಗಳು ಈ ಕೆಳಕಂಡಂತೆ ಇರುತ್ತವೆ.

(೧) ಶನಿ, ಹಾಗೂ ಬುಧರು ಜಾತಕದ ಎಲ್ಲ ಗ್ರಹಗಳಿಗಿಂತಲೂ ಬಲಾಢ್ಯರಿದ್ದು ಶುಭ ಸಂಬಂಧ ಯೋಗವಿರುತ್ತದೆ.

(೨) ಅಷ್ಟಮಸ್ಥಾನ ಹಾಗೂ ಅಷ್ಟಮಸ್ಥಾನದಲ್ಲಿಗುವ ಗ್ರಹವು ಬಲಾಢ್ಯವಿರುತ್ತವೆ.

(೩) ಅಷ್ಟಮೇಶ ಹಾಗೂ ಶನಿಯರ ಮತ್ತು ಅಷ್ಟಮೇಶ-ಬುಧರ ಶುಭಯೋಗವಿರುತ್ತವೆ.

## ಬೇಲೀಫ್

ನ್ಯಾಯ ಖಾತೆಯಲ್ಲಿ ಪ್ರಮುಖ ನೌಕರದಾರರೊಂದಿಗೆ ಈ ಹುದ್ದೆಯವರ ಹೆಸರು ಇದ್ದುದು ಕಂಡುಬರುತ್ತದೆ. ನಾಲ್ಕನೆಯ ದರ್ಜೆಯ

ನೌಕರದಾರರಾದ ಇವರು ತುಂಬ ಪ್ರಭಾವಿಕರಿರುವರಲ್ಲದೆ ಸಂಬಳಕ್ಕಿಂತ ಗಿಂಬಳವೇ ಹೆಚ್ಚಾಗಿದ್ದು ಇವರ ಜಾತಕದಲ್ಲಿಯ ಯೋಗಗಳು ಈ ಕೆಳಕಂಡಂತೆ ಇರುತ್ತವೆ.

(೧) ಖಾತೆಯ ಕಾರಕನೂ ವೃತ್ತಿಯ ಕಾರಕನೂ ಆದ ಶನಿಯು ಸ್ಥಾನಬಲವಿಲ್ಲದೆ ರಾಶಿಬಲದದನಿರುತ್ತಾನೆ.

(೨) ಅಷ್ಟಮಸ್ಥಾನವೂ ಹಾಗೂ ಅಷ್ಟಮ ಸ್ಥಾನದಲ್ಲಿರುವ ಗ್ರಹವೂ ಅಷ್ಟಮೇಶನೂ ಬಲಾಢ್ಯರಿರುತ್ತಾರೆ.

(೩) ಅಷ್ಟಮೇಶ ಹಾಗೂ ಶನಿ ಇವರ ಶುಭ ಸಂಬಂಧ ಯೋಗ ವಿರುತ್ತದೆ.

(೪) ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿದ್ದು ಚಂದ್ರಮ ಪುರುಷ ರಾಶಿಯಲ್ಲಿರುತ್ತಾನೆ.

(೫) ಅಷ್ಟಮೇಶ ಹಾಗೂ ಲಾಭೇಶರ ಶುಭಯೋಗವಿರುತ್ತವೆ.

(೬) ಅಷ್ಟಮೇಶ ಹಾಗೂ ಪಂಚಮೇಶರ ಶುಭಯೋಗವಿರುತ್ತವೆ.

(೭) ಮೂರನೇ ಪ್ರಕರಣದ ೪೪ ನೆಯ ಪುಟದಲ್ಲಿರುವ ಜವಾನರ ಹಾಗೂ ನಾಲ್ಕನೇ ದರ್ಜೆಯ ನೌಕರದಾರರ ಯೋಗಗಳು ಇವರ ಜಾತಕದಲ್ಲಿರುತ್ತವೆ.

## ೨೦ ಪೋಲೀಸ ಖಾತೆ

(Police Department)

ಸಮಾಜದಲ್ಲಿ ಶಾಂತಿ ಮತ್ತು ಶಿಸ್ತು ಪರಿಪಾಲನೆಗಳನ್ನು ಕಾಯ್ದು ಕೊಳ್ಳಬಲ್ಲ ವ್ಯಕ್ತಿಗಳೆಂದರೆ ಪೋಲೀಸರು. ಕಾನೂನುಗಳ ರಕ್ಷಣೆಗಾಗಿ ಹಗಲಿರಳೂ, ಮಳೆ, ಗಾಳಿ,ಬಿಸಿಲು,ಹಸಿವು,ನಿದ್ದೆ, ನೀರಡಿಕೆಗಳ ಪರಿಯಿಲ್ಲದೆ ಯಂತ್ರಗಳಂತೆ ಕೆಲಸ ಮಾಡುವ ಪೋಲೀಸರು ಒಂದು ರೀತಿಯಲ್ಲಿ ಶ್ರಮ ಜೀವಿಗಳೆಂದೇ ಹೇಳಬಹುದು.

ಇವರು ಕಾರ್ಯಕಾರೀ ಜನರಿದ್ದು ಇವರ ಕೆಲಸದಲ್ಲಿ ಓಡಾಟ (ಫಿರ್ತಿ) ಬಹಳವಿದೆ. ( Outdoor executive work ). ಕ್ರೌರ್ಯ, ದರ್ಪ, ನಿಷ್ಠುರತೆ, ಸತತೋದ್ಯೋಗ, ಸಾಹಸ ಮೊದಲಾದ ಗುಣಧರ್ಮ ಹಾಗೂ ಸ್ವಭಾವ ಗಳಿದ್ದು, ಉತ್ತಮ ಈಜು, ಸೈಕಲ್, ಸ್ಕೂಟರ್, ಮೋಟಾರ ಮೊದಲಾದ ಯಂತ್ರಗಳನ್ನು ಚಲಿಸಬಲ್ಲ ಸಾಹಸವಿರುವ ವ್ಯಕ್ತಿಗಳಿರುತ್ತಾರೆ.

ಕಾರಕ ಗ್ರಹ : ಮೇಲೆ ತೋರಿಸಿದ ಎಲ್ಲ ಗುಣಧರ್ಮಗಳು ಮಂಗಳನ ಗುಣಧರ್ಮಗಳಂತಿರುವುದರಿಂದ ಪೋಲೀಸ್ ಖಾತೆಗೆ ಮಂಗಳನೇ ಕಾರಕ ನಾಗುವನು.

ಎಷ್ಟೋ ಜ್ಯೋತಿಷಿಗಳು ಹಾಗೂ ಗ್ರಂಥಕಾರರು ಪೋಲೀಸ ಖಾತೆಗೆ ಶನಿಯೇ ಕಾರಕನೆಂಬ ಅಭಿಪ್ರಾಯವುಳ್ಳವರಿದ್ದಾರೆ. ಅವರ ಅಭಿಪ್ರಾಯ ವೆಂದರೆ, ಕಾನೂನನ್ನು ಉಲ್ಲಂಘಿಸುವವರಿಗೆ ಶಿಕ್ಷೆಯಾಗಬೇಕೆಂಬ ನ್ಯಾಯ ನಿಷ್ಠುರತೆಯ ಧರ್ಮವು ಶನಿಗ್ರಹದಲ್ಲಿರುತ್ತದೆ.

ಗುರುಗ್ರಹದಲ್ಲಿರುವ ಭೂತದಯೆ, ಪರೋಪಕಾರ ವೃತ್ತಿ ಶನಿಯ ಗುಣಧರ್ಮದಲ್ಲಿರದೆ, ದೊಡ್ಡವರು ಸಣ್ಣವರು, ಕಲಿತವರು ಕಲಿಯ ದಿದ್ದವರು, ಶ್ರೀಮಂತರು, ಬಡವರು ಎಂಬ ಭೇದ ಮಾಡದೆ ಯೋಗ್ಯ ನ್ಯಾಯ ಸಿಗಲೇಬೇಕು. ಈ ಎಲ್ಲ ಗುಣಗಳೂ ಶನಿಯ ಗುಣಧರ್ಮವಾಗಿರು ವುದರಿಂದ, ಪೋಲೀಸ ಖಾತೆಗೆ ಶನಿಯೇ ಕಾರಕನೆಂಬ ಅಭಿಪ್ರಾಯ ಅವರದು.

ಆದರೆ ನಮ್ಮ ಅನುಭವದ ಪ್ರಕಾರ, ಪೋಲೀಸ ಖಾತೆಗೆ ಮಂಗಳನೇ ಕಾರಕ. ಏಕೆಂದರೆ, ನ್ಯಾಯ ಸಿಗಲಿ, ಸಿಗದೆ ಇರಲಿ, ನ್ಯಾಯವನ್ನು ಸರಿಯಾಗಿ ಕೊಡುವುದು ನ್ಯಾಯಾಧೀಶರ ಅಧಿಕಾರ ಕಕ್ಷೆಗೆ ಸೇರಿದ ವಿಷಯ. ಕಾನೂನನ್ನು ಕಟ್ಟುನಿಟ್ಟಾಗಿ ಅಮಲಿನಲ್ಲಿ ತರುವುದರಲ್ಲಿ ಸಹಾಯಕವಾಗುವ ಕಾರ್ಯ ಮಂಗಳನ ಗುಣಧರ್ಮವಿರುವುದರಿಂದ ಪೋಲೀಸ್ ಖಾತೆಗೆ ಮಂಗಳನೇ

ಕಾರಕನು, ಆದರೆ ಒಂದು ಮಾತ್ರ ನಿಜ; ಮಂಗಳ ಹಾಗು ಶನಿ, ಈರ್ವರೂ ಬಲಾಢ್ಯರಿರುವ ವ್ಯಕ್ತಿಗಳು ಯಶಸ್ವೀ ಪೋಲೀಸ ಅಧಿಕಾರಿ ಆಗಬಲ್ಲರೆಂದು ಹೇಳಬಹುದು.

ಮಂಗಳನು ಅಗ್ನಿ ರಾಶಿಗಳಾದ ಮೇಷ, ಸಿಂಹ, ಧನು, ಮಕರ, ಹಾಗೂ ವೃಶ್ಚಿಕ ಈ ರಾಶಿಯವನಿದ್ದು ಬಲಾಢ್ಯನೂ ಯೋಗಕಾರಕನೂ ಇರಬೇಕು. ಮಂಗಳನ ತರುವಾಯ ರಾಹುಗ್ರಹವೂ ಕೂಡ ಪೋಲೀಸ ಖಾತೆಗೆ ಪೂರಕ ವಿರುತ್ತದೆ. ರಾಹುವಿನ ಗುಣಧರ್ಮವು ಹೆಚ್ಚುಕಡಿಮೆ ಮಂಗಳನ ಗುಣ ಧರ್ಮದಂತೆಯೇ ಇರುತ್ತದೆ. ವೃಷಭ, ಮಿಥುನ, ಕನ್ಯಾ, ಸಿಂಹ, ಮೇಷ ಈ ರಾಶಿಗಳ ರಾಹು ಜಾತಕದ ತೃತೀಯ, ಹಾಗೂ ಷಷ್ಠಸ್ಥಾನದಲ್ಲಿರುವುದು ಪೋಲೀಸ ಅಧಿಕಾರಿಗಳ ಪ್ರಗತಿಗೆ ಸಹಾಯಕವಾಗುತ್ತದೆ.

ಲಗ್ನ : ದಕ್ಷ ಪೋಲೀಸ ಅಧಿಕಾರಿಯ ಜಾತಕದಲ್ಲಿ ಹೆಚ್ಚಾಗಿ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನಗಳೇ ಇರುವುದು ಕಂಡು ಬರುತ್ತದೆ.

ಸ್ಥಾನ : ಹೊಡೆದಾಟ, ಬಡಿದಾಟ, ತಂಟೆ ಇತ್ಯಾದಿ ಫೌಜದಾರಿ (Criminal) ಕೆಲಸಗಳಿಗೋಸ್ಕರ ಸಾಮಾನ್ಯವಾಗಿ ತೃತೀಯ, ಷಷ್ಠ, ವ್ಯಯ ಸ್ಥಾನಗಳನ್ನು ಪರಿಶೀಲಿಸಬೇಕಾಗುವುದರಿಂದ ಪೋಲೀಸ ಅಧಿಕಾರಿಗಳ ಜಾತಕದಲ್ಲಿ ಈ ಸ್ಥಾನಾಧೀಶರು ಬಲಾಢ್ಯರಿದ್ದು, ಭಾಗ್ಯೇಶ, ದಶಮೇಶ ರೊಂದಿಗೆ ಶುಭ ಸಂಬಂಧವಿರಬೇಕು.

ಲಗ್ನ, ತೃತೀಯ, ದಶಮ, ಈ ಸ್ಥಾನಗಳಲ್ಲಿ ಬಲಾಢ್ಯ ಮಂಗಳನಿದ್ದ ವ್ಯಕ್ತಿಗಳು ದಕ್ಷ ಪೋಲೀಸ ಅಧಿಕಾರಿಗಳಾಗಬಲ್ಲರು.

ರಾಶಿ : ರಾಶಿದೃಷ್ಟಿಯಿಂದ ಪರಿಶೀಲಿಸಿದರೆ, ಪುರುಷ ರಾಶಿಗಳೇ ಪೋಲೀಸ ಖಾತೆಗೆ ಪೂರಕ ರಾಶಿಗಳು.

## ಇನ್ಸ್‌ಪೆಕ್ಟರ ಹಾಗೂ ಸಬ್–ಇನ್ಸ್‌ಪೆಕ್ಟರ

ಪೋಲೀಸ ಸಬ್–ಇನ್ಸ್‌ಪೆಕ್ಟರ, ಇನ್ಸ್‌ಪೆಕ್ಟರ ಇವರ ಜಾತಕದಲ್ಲಿ ಮಂಗಳನಂತೂ ಬಲಾಢ್ಯನಾಗಿ ಹೆಚ್ಚಾಗಿ ಲಗ್ನ, ತೃತೀಯ, ಷಷ್ಠ, ದಶಮ ಈ ಸ್ಥಾನದಲ್ಲಿ ಇರುವುದು ಕಂಡುಬರುತ್ತದೆ. ತೃತೀಯೇಶ ಹಾಗೂ ಷಷ್ಠಾಧೀಶರೂ ಕೂಡ ಬಲಾಢ್ಯರಿರುತ್ತಾರೆ. ಇವರಿಗೆ ಯಾವಾಗಲೂ ಓಡಾಡುವ ಕೆಲಸವಿರುವುದರಿಂದ ಅನೇಕ ಗ್ರಹಗಳು ಲಗ್ನ, ತೃತೀಯ, ಸಪ್ತಮ, ಭಾಗ್ಯ, ವ್ಯಯ ಈ ಸ್ಥಾನದಲ್ಲಿರುವವು.

ಇವರ ಜಾತಕದಲ್ಲಿ ಮಂಗಳನ ಹಾಗೆ ರಾಹುವೂ ಕೂಡ ಬಲಿಷ್ಠನಿದ್ದು, ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುತ್ತವೆ.

## ಜಿಲ್ಹಾ ಪೋಲೀಸ ಸೂಪರಿಂಟೆಂಡೆಂಟ, ಡಿ. ಐ. ಜಿ., ಹಾಗೂ ಇನ್ಸ್‌ಪೆಕ್ಟರ ಜನರಲ್

ಈ ವರಿಷ್ಠ ಪೋಲೀಸ ಅಧಿಕಾರಿಗಳ ಜಾತಕದಲ್ಲಿ ಐ. ಪಿ. ಎಸ್. ಯೋಗಗಳು ಇರುತ್ತವೆ. ಇವರ ಜಾತಕದಲ್ಲಿ ಮಂಗಳನಿಗಿಂತ ರವಿ ಹಾಗೂ ಗುರು ಗ್ರಹಗಳು ಬಲಿಷ್ಠರಿದ್ದು ಪಂಚಮ ಸ್ಥಾನ ಹಾಗೂ ಪಂಚಮಾಧೀಶರು ಬಲಾಢ್ಯರಿರುತ್ತಾರೆ; ಮತ್ತು ರಾಜಯೋಗಗಳೇ ಹೆಚ್ಚಾಗಿರುತ್ತವೆ.

ಕೆಳಗೆ ಕಾಣಿಸಿದ ಯೋಗಗಳಿದ್ದವರು ಪೋಲೀಸ ವರಿಷ್ಠ ಅಧಿಕಾರಿಗಳಾಗುವರು.

(೧) ಕರ್ಕ ಲಗ್ನದ ದಶಮದಲ್ಲಿ ಮಂಗಳನೂ ದ್ವಿತೀಯದಲ್ಲಿ ರವಿಯೂ ಇದ್ದು, ಭಾಗ್ಯ ಇಲ್ಲವೆ ದಶಮದಲ್ಲಿ ಗುರು ಇದ್ದರೆ.

(೨) ಸಿಂಹ ಲಗ್ನದ ಲಗ್ನ, ಪಂಚಮ, ಭಾಗ್ಯ, ಚತುರ್ಥ ಈ ಯಾವುದೇ ಸ್ಥಾನದಲ್ಲಿ ಮಂಗಳನಿದ್ದು ಲಗ್ನ, ಪಂಚಮ, ಭಾಗ್ಯ—ಈ ಯಾವುದೊಂದು ಸ್ಥಾನದಲ್ಲಿ ಗುರು ಇದ್ದರೆ,

(೩) ಮೇಷ ಲಗ್ನದ ಲಗ್ನ, ಭಾಗ್ಯ, ದಶಮದಲ್ಲಿ ಮಂಗಳನಿದ್ದು ರವಿಯು ಲಗ್ನ, ಪಂಚಮ, ಭಾಗ್ಯ ಈ ಯಾವುದೊಂದು ಸ್ಥಾನದಲ್ಲಿದ್ದು, ಗುರುವು ಚತುರ್ಥದಲ್ಲಿದ್ದರೆ.

## ಪೋಲೀಸ ಪ್ರಾಸಿಕ್ಯೂಟರ :

ಇವರ ಜಾತಕದಲ್ಲಿ ಕಾಯಿದೆಯ ಕಾರಕನಾದ ಶನಿಯೂ ಪೋಲೀಸ ಖಾತೆಯ ಕಾರಕನಾದ ಮಂಗಳನೂ ಬಲಾಢ್ಯರಿದ್ದು, ದ್ವಿತೀಯ ಸ್ಥಾನವೂ ಪಂಚಮಸ್ಥಾನವೂ ಹಾಗೂ ಈ ಪಂಚಮ-ದ್ವಿತೀಯ ಸ್ಥಾನಾಧೀಶರೂ ಬಲಾಢ್ಯರಿರುತ್ತಾರೆ.

## ಬ್ಯಾಂಡ ಮಾಸ್ಟರ ಹಾಗೂ ಇತರ ಬ್ಯಾಂಡ ವಿಭಾಗದವರು

ಇವರ ಜಾತಕದಲ್ಲಿ ಸಂಗೀತ-ವಾದ್ಯಕಾರಕನಾದ ಶುಕ್ರನೇ ಸಂಗೀತ ಸ್ಥಾನವಾದ ದ್ವಿತೀಯ ಸ್ಥಾನ, ದ್ವಿತೀಯಾಧೀಶರು ಬಲಾಢ್ಯರಿದ್ದು, ಪೋಲೀಸ ಖಾತೆಯ ಕಾರಕನಾದ ಮಂಗಳನು ರಾಶಿಬಲವಿಲ್ಲದೆ ಯೋಗ ಕಾರಕನೂ ಸ್ಥಾನಬಲವುಳ್ಳವನೂ ಇರುವನು.

## ಜಮಾದಾರ, ಹವಾಲ್ದಾರ, ಹೆಡ್ ಕಾನ್ಸ್‌ಟೇಬಲ್ :

ಇವರ ಜಾತಕದಲ್ಲಿ ಮಂಗಳನೇನೋ ರಾಶಿಬಲವುಳ್ಳವನಿದ್ದರೂ, ಅಸ್ತ, ವಕ್ರನಿದ್ದು ಯೋಗಕಾರಕಗ್ರಹಗಳು ದುರ್ಬಲರಿರುವವು. ಇವರ ಜಾತಕದಲ್ಲಿ ಚಂದ್ರನು ಪುರುಷರಾಶಿಯುಳ್ಳವನಿದ್ದು ಪಂಚಮಸ್ಥಾನ ಹಾಗೂ ಪಂಚಮಾಧೀಶರು ದುರ್ಬಲರಿರುತ್ತಾರೆ.

ಅನೇಕ ಗ್ರಹಗಳು ಹೆಚ್ಚಾಗಿ ಶತ್ರುಕ್ಷೇತ್ರ, ಪಾಪದೃಷ್ಟ, ದುರ್ಬಲರೂ ಇದ್ದು ಅನುದಿತ ಗೋಲಾರ್ಧದಲ್ಲಿಯೇ ಗ್ರಹಗಳು ಇರುತ್ತವೆ.

## ಕಾರಕೂನರು ಹಾಗೂ ಮೇನೇಜರರು (ಮಿನಿಸ್ಟೀರಿಯಲ್)

ಇವರ ಜಾತಕದಲ್ಲಿ ಕಾರಕೂನಕಿ ಕಾರಕಗ್ರಹಗಳೇ ಬಲಾಢ್ಯವಿದ್ದು ಈ ಖಾತೆಯ ಕಾರಕನಾದ ಮಂಗಳನು ರಾಶಿಬಲದವನಿದ್ದರೂ ಸ್ಥಾನಬಲ

ಹಾಗೂ ಯೋಗಕಾರಕನೂ ಇರುವುದಿಲ್ಲ. ಇವರ ಜಾತಕದಲ್ಲಿ ಚಂದ್ರನು ಹೆಚ್ಚಾಗಿ ಸ್ಥಿರರಾಶಿಯಲ್ಲಿರುವುದು ಕಂಡುಬರುತ್ತದೆ.

ಸಿ. ಐ. ಡಿ. ಇನ್ಸ್‌ಪೆಕ್ಟರ್ಸ್ ಹಾಗೂ ಸಬ್-ಇನ್ಸ್‌ಪೆಕ್ಟರ್ಸ್ :

ಇವರ ಜಾತಕದಲ್ಲಿ ಪೋಲೀಸ್ ಸಬ್ ಇನ್ಸ್‌ಪೆಕ್ಟರ, ಇನ್ಸ್‌ಪೆಕ್ಟರ್ ಮತ್ತು ಪೋಲೀಸ ಖಾತೆಯಲ್ಲಿರುವ ಎಲ್ಲ ಯೋಗಗಳೂ ಯೋಗಕಾರಕ ಗ್ರಹಗಳೂ ಇರುವುವಲ್ಲದೆ ಚಂದ್ರನು ವಾಯುರಾಶಿಗಳಾದ ಮಿಥುನ, ತುಲಾ, ಕುಂಭ ಈ ರಾಶಿಗಳಲ್ಲಿಯೂ ಅಥವಾ ಕರ್ಕ, ವೃಶ್ಚಿಕ, ಮೀನ ಈ ಜಲರಾಶಿಯಲ್ಲಿಯೂ ಇರುವನು.

ಇವರ ಜಾತಕದಲ್ಲಿ ಬುಧನೂ ವಾಯು ಭೂ ರಾಶಿಯಲ್ಲಿರುವುದಲ್ಲದೆ ಗುರುವು ದುರ್ಬಲನಿರುವುದಿಲ್ಲ.

## ೨೧ ಸ್ಟೇಟ ಅಕೌಂಟ್ಸ್ ಕಂಟ್ರೋಲ ಖಾತೆ

ಸರಕಾರದ ಆರ್ಥಿಕ ನೆರವನ್ನು ಪಡೆದಿರುವಂಥ ಅನೇಕ ಖಾಸಗಿ ಮತ್ತಿತರ ಸ್ವಯಂ ಆಡಳಿತ ಸಂಸ್ಥೆಗಳು ಇವೆ. ಇವುಗಳಲ್ಲಿ ವಿಶ್ವವಿದ್ಯಾಲಯಗಳು, ಖಾಸಗಿ ಶಾಲೆಗಳು, ಪುರಸಭೆ, ನಗರಸಭೆಗಳು, ಪಂಚಾಯಿತಿಗಳು ಮುಂತಾದವುಗಳಿವೆ. ಈ ಸಂಸ್ಥೆಗಳ ಲೆಕ್ಕಪತ್ರಗಳ ಪರಿಶೀಲನೆ ಮತ್ತು ವಿಶೇಷವಾಗಿ ಸರಕಾರದಿಂದ ಪಡೆದ ನೆರವಿನ ಹಣದ ವಿನಿಯೋಗದ ಕ್ರಮಬದ್ಧತೆಯ ತಪಾಸಣೆ ಇವುಗಳು ಸ್ಟೇಟ ಕಂಟ್ರೋಲ ಖಾತೆಯ ಮುಖ್ಯ ಕಾರ್ಯಗಳಾಗಿವೆ. ಈ ತರಹದ ಕೆಲಸಗಳಿಗೆ ಫಲಜ್ಯೋತಿಷ್ಯದಲ್ಲಿ ಕಾರಕ ಗ್ರಹಗಳಾವವು ಎಂಬುದನ್ನು ವಿವೇಚಿಸೋಣ.

ಕಾರಕಗ್ರಹ : ಆರ್ಥಿಕ ಖಾತೆಗಳ ಸಂಬಂಧವಿರುವದರಿಂದಲೂ ಲೆಕ್ಕಪತ್ರಗಳನ್ನು ತಪಾಸಿಸುವ ಕಾರ್ಯವಿರುವದರಿಂದಲೂ ಈ ಖಾತೆಗಳ ಕಾರಕಗ್ರಹವೆಂದರೆ ಬುಧನು.

ಬುಧನು ಭೂ ಇಲ್ಲವೆ ವಾಯು ರಾಶಿಗಳಲ್ಲಿದ್ದು ಯೋಗಕಾರಕನೂ ಬಲಾಢ್ಯನೂ ಇರಬೇಕು.

ಸರಕಾರಿ ಕಾರಕಗ್ರಹಗಳಾದ ರವಿ–ಗುರುಗಳು ಬಲಾಢ್ಯರಿದ್ದಷ್ಟು ವರಿಷ್ಠ ಅಧಿಕಾರಿಗಳಾಗುವರು.

ಲಗ್ನ : ಲಗ್ನ ದೃಷ್ಟಿಯಿಂದ ವಿಚಾರಿಸಿದರೆ ವೃಷಭ, ಮಿಥುನ, ಕನ್ಯಾ, ಧನು, ಮಕರ, ಮೀನ ಈ ಲಗ್ನಗಳೇ ಪೂರಕವಾಗಿರುವವು.

ರಾಶಿ : ರಾಶಿ ದೃಷ್ಟಿಯಿಂದ ವಿಚಾರಿಸಿದರೆ ಭೂರಾಶಿ ಇಲ್ಲವೆ ವಾಯು ರಾಶಿಗಳೇ ಹೆಚ್ಚು ಪೂರಕವಾಗುವವು.

ಸ್ಥಾನ : ಲೆಕ್ಕ ತಪಾಸಿಸುವ ಕಾರ್ಯವಿರುವದರಿಂದ ಹಾಗು ಪಂಚಮ ಸ್ಥಾನವೇ ಈ ಖಾತೆಯ ಸ್ಥಾನವಿರುವದರಿಂದ ಪಂಚಮಾಧೀಶನೂ ಪಂಚಮ ಸ್ಥಾನದಲ್ಲಿರುವ ಗ್ರಹಗಳೂ ಬಲಾಢ್ಯವಿರಬೇಕು.

## ಆಡಿಟ್ ಸುಪರಿಂಟೆಂಡೆಂಟ್ಸ, ಆಡಿಟರ್ಸ, ಹಾಗೂ ಕ್ಲಾರ್ಕ್ಸ

ಖಾಸಗಿ ಸಂಘ-ಸಂಸ್ಥೆಗಳ ಲೆಕ್ಕಪತ್ರಗಳನ್ನು ತಪಾಸಿಸುವ ಗುರುತರವಾದ ಹೊಣೆಗಾರಿಕೆಯು ಇವರ ಮೇಲೆಯೇ ಹೆಚ್ಚು ಇರುವದು, ಅಮಲ್ದಾರರೇನೋ ಸಹಿ ಮಾತ್ರಕ್ಕೆ ಇರುವರು. ಸಂಪೂರ್ಣವಾಗಿ, ಕೂಲಂಕಷವಾಗಿ ತಪಾಸಿಸುವ ಕಾರ್ಯ ಇವರದೇ ಇರುವದರಿಂದ ಇವರ ಜಾತಕದಲ್ಲಿ ಯೋಗಗಳು ಹೀಗಿರುತ್ತವೆ.

ಬುಧನು ಬಲಾಢ್ಯನಾಗಿಯೂ ಯೋಗಕಾರಕನಾಗಿಯೂ ಇವರ ಜಾತಕದಲ್ಲಿ ಇದ್ದೇ ಇರುತ್ತಾನೆ. ಕಾರಕೂನಿಕೆಯ ಕೆಲಸವಿರುವದರಿಂದ ಕಾರಕೂನಿಕೆಯ ಯೋಗಗಳೂ ಇವರ ಜಾತಕದಲ್ಲಿ ಹೆಚ್ಚಾಗಿರುತ್ತವೆ.

ಚಂದ್ರನೂ ಹೆಚ್ಚಾಗಿ ಸ್ತ್ರೀರಾಶಿಯಲ್ಲಿಯೇ ಇರುವವನ್ನು ಕಾಣುತ್ತೇವೆ.

ಪುರುಷ ರಾಶಿಗಳೇ ಬಲಾಢ್ಯವಿದ್ದು ರವಿಯೂ ಬಲಾಢ್ಯನಿದ್ದ ಆಡಿಟರ್ಸ, ಸುಪರಿಂಟೇಡೆಂಟ್ಸರು ಕಾರಕೂನಿಕೆ ಜೀವನನಿಂದ ಮುಕ್ತರಾಗಿ ಬೇಗ ಅಮಲ್ದಾರರಾಗುವರು.

ಇವರಿಗೆ ಯಾವಾಗಲೂ ಪ್ರವಾಸವಿರುವದರಿಂದ ತೃತೀಯ, ಸಪ್ತಮ, ಭಾಗ್ಯ, ಲಗ್ನ ಈ ಸ್ಥಾನಗಳಲ್ಲಿ ಅನೇಕ ಗ್ರಹಗಳಿರುವವು.

ಕಂಟ್ರೋಲರ, ಡೆಪ್ಯುಟಿ ಕಂಟ್ರೋಲರ, ಆಸಿಸ್ಟಂಟ ಕಂಟ್ರೋಲರ

ಈ ಮೊದಲಾದ ಖಾತೆಯ ವರಿಷ್ಠ ಅಧಿಕಾರಿಗಳಾಗಲು ಜಾತಕದಲ್ಲಿ ಖಾತೆಯ ಕಾರಕನಾದ ಬುಧನಲ್ಲದೆ ಆಡಳಿತೆಯ ಕಾರಕ ಗ್ರಹಗಳೂ ಆಡಳಿತೆ ಕಾರಕ ರಾಶಿಗಳೂ ಆಡಳಿತೆ ಕಾರಕ ಸ್ಥಾನಗಳೂ ಬಲಾಢ್ಯ ವಿರಬೇಕು.

ಈ ತರದ ಮೇಲಿನ ಹುದ್ದೆಗಳನ್ನು ಪಡೆಯಲು ಎರಡು ಪ್ರಕಾರಗಳಿವೆ.

(೧) ನೇರವಾದ ಅಮಲ್ದಾರರಾಗುವಿಕೆ.

(೨) ಸುಪರಿಂಟೆಂಡೆಂಟರ ಮೇಲಿಂದ ಅಮಲ್ದಾರರಾಗುವಿಕೆ.

(ಈ ವಿಷಯವಾಗಿ ವಿವರಗಳನ್ನು ಇದೇ ಪುಸ್ತಕದ ಹಿನೆಯ ಪ್ರಕರಣ ದಲ್ಲಿ ಕೊಡಲಾಗಿದೆ.)

ಎರವಲು ಕೆಲಸಗಾರರು ( ಡೆಪ್ಯೂಟೇಶನ್ ವರ್ಕರ್ಸ )

ಈ ಖಾತೆಗಳಿಂದ ಬೇರೆ ಬೇರೆ ಖಾತೆಗಳಿಗೆ ಡೆಪ್ಯೂಟೇಶನ್ ಮೇಲೆ ಹೋಗುವ ಇಲ್ಲವೆ ಕಳಿಸಿಕೊಡುವ ಪರಿಪಾಠ ಹೆಚ್ಚಾಗಿದೆ.

ಇಂಥ ನೌಕರದಾರರ ಮೇಲೆ ಈರ್ವರು ಅಧಿಕಾರಿಗಳಾಗುವರು.

(೧) ಕೆಲಸವನ್ನು ತೆಗೆದುಕೊಳ್ಳುವ ಹಾಗೂ ಕಾನ್ಫಿಡೆನ್ಸಲ್ ರಿಪೋರ್ಟ ಬರೆಯುವ ಅಧಿಕಾರಿಗಳು.

(೨) ನೇಮಣೂಕಿಯನ್ನು ಮಾಡುವ, ಬಡತಿ, ಬದಲಿ ಮಾಡುವ, ಕೆಲಸದಿಂದ ಕಡಿಮೆ ಮಾಡುವ ಇನ್ನೊಬ್ಬ ಅಧಿಕಾರಿ.

ವಿಚಿತ್ರ ಯೋಗಗಳು : ಇಂಥ ಜನರ ಜಾತಕಗಳು ನಿರ್ದಿಷ್ಟ ಯೋಗ ಗಳುಳ್ಳವಿರುತ್ತವೆ. ಇವರ ಜಾತಕದಲ್ಲಿ ಖಾತೆಯ ಕಾರಕ ಗ್ರಹವೂ ಉದ್ಯೋಗ ಕಾರಕ ಗ್ರಹವೂ ಹೀಗೆ ಎರಡೂ .ಗ್ರಹಗಳು ಬಲಾಢ್ಯವಿರುತ್ತವೆ. ಉದಾಹರಣೆಗಾಗಿ: ಲೋಕೋಪಯೋಗಿ ಖಾತೆ (P.W.D.)ಯಲ್ಲಿ ಅಕೌಂಟ್ಸ ಡಿಪಾರ್ಟಮೆಂಟಿನ ಕೆಲಸಗಾರರಿದ್ದಾರೆಂದು ತಿಳಿಯಿರಿ. ಇಲ್ಲಿ ಸ್ಟೇಟ ಅಕೌಂಟ್ಸ ಉದ್ಯೋಗದ ಕಾರಕನಾದ ಬುಧನ ಸಂಗಡ ಶನಿಯೂ ಬಲಾಢ್ಯನೂ ಯೋಗ ಕಾರಕನೂ ಇರಲೇಬೇಕು.

(೧) ಇಬ್ಬರು ಅಮಲ್ದಾರರು ಇವರ ಮೇಲೆ ಇದ್ದರೂ ಇವರೇ ಒಂದು ಬಗೆಯ ಅಮಲ್ದಾರರಂತೆ ಇರುವದರಿಂದ ಇವರ ಜಾತಕದಲ್ಲಿ ಹೆಚ್ಚಾಗಿ ದ್ವಿಸ್ವಭಾವ ರಾಶಿಯ ಗ್ರಹಗಳೇ ಇರುತ್ತವೆ.

(೨) ಬುಧನು ರಾಶಿಬಲದವನಿದ್ದು ಸ್ಥಾನಬಲ ಇರದೆ ಇತರ ಖಾತೆಯ ಕಾರಕ ಗ್ರಹಗಳೇ ಸ್ಥಾನ ಬಲದವೂ ಯೋಗ ಕಾರಕವೂ ಇರುತ್ತವೆ.

(೩) ಬುಧನು ಸ್ಥಾನಬಲದವನೂ ರಾಶಿಬಲದವನೂ ಇದ್ದರೂ ಅಸ್ತ, ವಕ್ರ, ಪಾಪಗ್ರಹದೃಷ್ಟ, ಪಾಪಗ್ರಹಮಧ್ಯ, ಬಾಲ್ಯಾವಸ್ಥೆಯಲ್ಲಿ ವೃದ್ಧಾಪ್ಯದಲ್ಲಿ ಇರುವನು.

## ೨೨ ಅರಣ್ಯ ಖಾತೆ

(Forest Department)

ಕಾರಕಗ್ರಹ : ಈ ಖಾತೆಯಲ್ಲಿ ಫಾರೆಸ್ಟ್ ಆಫೀಸರ್, ಕಾಂಜರ್ವೇಟರ್ ಮೊದಲಾದ ಅಧಿಕಾರಿಯಾಗಲು ಅಭ್ಯರ್ಥಿಗಳು ಬಿ. ಎಸ್‌ಸಿ. ಆದವರೇ

ಇರಬೇಕಾಗುತ್ತದೆ. ವಿಶೇಷವಾಗಿ ಬಿ.ಎಸ್‌ಸಿ.ಯಲ್ಲಿ Botany (ಸಸ್ಯಶಾಸ್ತ್ರ) ವಿಷಯವನ್ನು ತೆಗೆದುಕೊಂಡವರೇ ಇರಲೇಬೇಕೆಂಬ ನಿಯಮವಿದ್ದು, ಈ ಖಾತೆಗಳಲ್ಲಿ ತಮ್ಮದೆ ಆದ ಅರಣ್ಯ ಖಾತೆಯ ಶಿಕ್ಷಣದ ೨-೩ ವರ್ಷಗಳ ಕೋರ್ಸನ್ನೂ ಮುಗಿಸಲೇಬೇಕೆಂಬ ನಿಯಮವಿರುವುದರಿಂದ ಸಸ್ಯಕಾರಕನಾದ ಚಂದ್ರನೇ ಈ ಖಾತೆಯ ಕಾರಕನೆಂದು ಹೇಳಬಹುದು.

ಶಿಕ್ಷಣ ಸ್ಥಾನವಾದ ಪಂಚಮ ಸ್ಥಾನವು ಹಾಗೂ ಪಂಚಮೇಶನೂ ಬಲಾಢ್ಯರಿದ್ದು ಚಂದ್ರನೊಂದಿಗೆ ಹಾಗೂ ಗುರುವಿನನೊಂದಿಗೆ ಶುಭ ಸಂಬಂಧ ಹೊಂದಿರಬೇಕು.

**ಲಗ್ನ :** ಅರಣ್ಯ ಖಾತೆಯ ನೌಕರರು ಹೆಚ್ಚಾಗಿ ಚರಲಗ್ನದವರಿರುತ್ತಾರೆ.

**ರಾಶಿ :** ಪೃಥ್ವಿರಾಶಿಗಳಾದ ವೃಷಭ, ಕನ್ಯಾ, ಮಕರ ಈ ರಾಶಿಗಳೇ ಈ ಖಾತೆಗಳ ಪೋಷಕರಾಶಿಗಳಿದ್ದು ಅನೇಕ ಗ್ರಹಗಳು ಈ ರಾಶಿಯಲ್ಲಿರುತ್ತವೆ.

**ಚೀಫ್ ಕಾಂಜರ್ವೇಟರ್ ಹಾಗೂ ಡಿವ್ಹಿಜನಲ್ ಫಾರೆಸ್ಟ್ ಅಧಿಕಾರಿ :**

ಇಂತಹ ವರಿಷ್ಠ ಸ್ಥಾನವನ್ನು ಪಡೆಯಲು ಖಾತೆಯ ಕಾರಕನಾದ ಚಂದ್ರನೂ ಖಾತೆಗೆ ಪೂರಕವಾದ ಪಂಚಮ ಸ್ಥಾನವೂ ಬಲಾಢ್ಯವಿದ್ದು ಆಡಳಿತೆಯ ಕಾರಕಗ್ರಹಗಳಾದ ರವಿ-ಮಂಗಳರೂ ಬಲಾಢ್ಯರಿರುವುದು ಕಂಡುಬರುತ್ತದೆ.

**ಕಾಂಜರ್ವೇಟರ್ ಆಫ್ ಫಾರೆಸ್ಟ್ ಹಾಗೂ**
**ಅಸಿಸ್ಟಂಟ್ ಡಿವ್ಹಿಜನಲ್ ಆಫೀಸರ್ :**

ಇಂತಹವರ ಜಾತಕದಲ್ಲಿ ರವಿಯು ಅಷ್ಟೊಂದು ಬಲಾಢ್ಯನಿರುವದಿಲ್ಲ, ಅಥವಾ ರಾಶಿಬಲದವನಿದ್ದು ಸ್ಥಾನಬಲದವನಿರುವುದಿಲ್ಲ. ರವಿಗಿಂತ ಚಂದ್ರನೇ

ಹೆಚ್ಚು ಬಲಾಢ್ಯನೂ ಯೋಗಕಾರಕನೂ ಇರುವುದು ಕಂಡುಬರುತ್ತದೆ. ಇವರ ಜಾತಕದಲ್ಲಿ ಲಗ್ನವು ಹೆಚ್ಚಾಗಿ ದ್ವಿಸ್ವಭಾವ ರಾಶಿಯದಿರುವುದು ಕಂಡು ಬರುತ್ತದೆ.

### ರೇಂಜ್ ಫಾರೆಸ್ಟ್ ಆಫೀಸರ್ :

ಅರಣ್ಯ ಖಾತೆಯಲ್ಲಿ ರೇಂಜ್ ಫಾರೆಸ್ಟ ಅಮಲ್ದಾರರ ಮಹತ್ವ ಬಹಳವಿದೆ. ಇವರೇನೂ ಖಾತೆಯ ಮುಖ್ಯ ಅಧಿಕಾರಿಗಳಲ್ಲದಿದ್ದರೂ (Non -Gaztted Officer) ಸಾರ್ವಜನಿಕ ಸಂಪರ್ಕ ಸಂಬಂಧ ಬಹಳವಿದ್ದು ಸ್ಥಾನಿಕ ಅಧಿಕಾರಿ ಇರುತ್ತಾರೆ. ಇವರ ಕೆಲಸಗಳು ಯಾವಾಗಲೂ (ಫಿರಿF) ತಿರುಗಾಟದವು (Outdoor Executive Work) ಇರುತ್ತವೆ.

ಇವರ ಜಾತಕದಲ್ಲಿ ಲಗ್ನ, ತೃತೀಯ ಸ್ಥಾನದಲ್ಲಿಯೇ ಅನೇಕ ಗ್ರಹ ಗಳಿದ್ದು ಲಗ್ನ ಇಲ್ಲವೆ ತೃತೀಯ ಸ್ಥಾನವು ಚರರಾಶಿಯುಳ್ಳದ್ದಿದ್ದು ಅನೇಕ ಗ್ರಹಗಳೂ ಚರರಾಶಿಯಲ್ಲಿರುತ್ತವೆ. ಇಲ್ಲವೆ ಅನೇಕ ಗ್ರಹಗಳು ಲಗ್ನ, ತೃತೀಯ, ಭಾಗ್ಯ, ವ್ಯಯ ಈ ಸ್ಥಾನದಲ್ಲಿರುತ್ತವೆ.

ಚಂದ್ರನು ಹೆಚ್ಚಾಗಿ ಪೃಥ್ವಿ ರಾಶಿಗಳಾದ ವೃಷಭ, ಕನ್ಯಾ, ಮಕರ ಈ ರಾಶಿಗಳಲ್ಲಿಯೇ ಇರುವುದು ಕಂಡುಬರುತ್ತದೆ.

ಇವರ ಜಾತಕದಲ್ಲಿ ರವಿಗಿಂತ ಮಂಗಳನೇ ಬಲಾಢ್ಯನಿರುವುದು ಕಂಡು ಬರುತ್ತದೆ. ಏಕೆಂದರೆ ಅಮಲ್ದಾರರಿಲ್ಲದಿದ್ದರೂ ಅಮಲ್ದಾರರಿಗಿಂತ ಹೆಚ್ಚು ಮಾನ-ಸನ್ಮಾನಗಳನ್ನು ಪಡೆಯುವರಲ್ಲದೆ ಹೆಚ್ಚಿಗೆ ಅಧಿಕಾರವನ್ನೂ ಚಲಾ ಯಿಸುತ್ತಾರೆ.

### ಸರ್ವೆಯರ್, ಫಾರೆಸ್ಟ ಗಾರ್ಡ್, ನಾಕಾದಾರ್ :

ಈ ಖಾತೆಯ ಕೆಳಗಿನ ವರ್ಜೆಯ ನೌಕರದಾರರಾಗಿರುವ ಇವರ ಜಾತಕ ದಲ್ಲಿ ಚಂದ್ರನು ಬಲಾಢ್ಯನೂ, ಯೋಗಕಾರಕನೂ ಇದ್ದು, ರವಿ-ಮಂಗಳ-ಗುರುಗಳು ದುರ್ಬಲರಿರುತ್ತಾರೆ. ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿ ಇರುವು ವಲ್ಲದೆ ಲಗ್ನ, ತೃತೀಯ, ವ್ಯಯ ಈ ಸ್ಥಾನದಲ್ಲಿರುತ್ತವೆ.

ಅಕೌಂಟೆಂಟ್ಸ್ ಹಾಗೂ ಆರ್ಥಿಕ ಸಲಹೆಗಾರ

ಈ ಖಾತೆಯಲ್ಲಿ ಹೆಡ್ ಕ್ಲಾರ್ಕ್ಸ್, ಸುಪರಿಂಟೆಂಡೆಂಟ್ಸ್‌ಗಿಂತ ಹೆಚ್ಚಾಗಿ ಅಕೌಂಟ್ಸ್ ವಿಭಾಗದ ಜನರಿಗೆ ಮಹತ್ವವಿರುತ್ತದೆ.

ಕಾರಕಗ್ರಹ : ಇವರ ಜಾತಕದಲ್ಲಿ ಖಾತೆಯ ಕಾರಕನಾದ ಚಂದ್ರನೂ ಲೆಕ್ಕಪತ್ರದ ಕಾರಕನಾದ ಬುಧನೂ ಬಲಾಢ್ಯರಿದ್ದು ಅನೇಕ ಗ್ರಹಗಳು ಪೃಥ್ವಿರಾಶಿಯಲ್ಲಿರುತ್ತವೆ.

## ೨೩ ಪಶು ಸಂಗೋಪನ ಹಾಗೂ ಪಶು ವಿಜ್ಞಾನಗಳ ಖಾತೆ

(ಡೈರೆಕ್ಟೊರೇಟ ಆಫ್ ಎನಿಮಲ್ ಹಜಬಂಡರೀ ಆ್ಯಂಡ್ ವೈಟರಿನರೀ ಸಾಯಿನ್ಸ)

ಒಕ್ಕಲುತನ ಖಾತೆಯಲ್ಲಿದ್ದ ಈ ಖಾತೆಯನ್ನು ಆಡಳಿತೆಯ ಅನುಕೂಲತೆಗಾಗಿ ಹಾಗೂ ಹೆಚ್ಚಿನ ಸಂಶೋಧನೆಯ ಕಾರ್ಯಕ್ಕಾಗಿ ಇತ್ತೀಚಿಗೆ ಬೇರ್ಪಡಿಸಿ ಪ್ರತ್ಯೇಕವಾದ ಖಾತೆಯನ್ನಾಗಿ ಮಾಡಲಾಗಿದೆ.

ಕಾರಕಗ್ರಹ : ಒಕ್ಕಲುತನ ಖಾತೆಯ ಕಾರಕವಾದ ಶನಿಗ್ರಹವೇ ಈ ಖಾತೆಯ ಕಾರಕನಲ್ಲದೆ ಪಶು-ಕಾರಕನಾದ ಚಂದ್ರನೂ ಈ ಖಾತೆಯ ಕಾರಕನಾಗುವನು.

ಸ್ಥಾನ : ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಒಕ್ಕಲುತನ ಖಾತೆಯ ಸ್ಥಾನವಾದ ಸುಖ ಸ್ಥಾನದ ಹೊರತಾಗಿ ಪಶುಪೋಷಕ ಸ್ಥಾನಗಳಾದ ಷಷ್ಠ ಹಾಗೂ ದ್ವಾದಶ ಸ್ಥಾನಗಳನ್ನೂ ಹಾಗೂ ಷಷ್ಠೇಶ, ದ್ವಾದಶೇಶ ಇವರನ್ನೂ ಪರಿಶೀಲಿಸಬೇಕು.

ಲಗ್ನ : ಒಕ್ಕಲುತನ ಖಾತೆಯ ಲಗ್ನಗಳೇ ಈ ಖಾತೆಯ ಕಾರಕ ಲಗ್ನಗಳಿರುವವು.

## ವೆಟರಿನರೀ ಅಧಿಕಾರಿ ಹಾಗೂ ವೆಟರಿನರೀ ಡಾಕ್ಟರ :

ವೆಟರಿನರೀ ಅಧಿಕಾರಿ ಹಾಗೂ ಇತರ ನೌಕರದಾರರ ಜಾತಕದಲ್ಲಿ ಶನಿಯ ಜೊತೆಗೆ ಷಷ್ಠ ಹಾಗೂ ದ್ವಾದಶ ಸ್ಥಾನಗಳನ್ನೂ ಮತ್ತು ಈ ಸ್ಥಾನಾಧೀಶರನ್ನೂ ಪರಿಶೀಲಿಸಬೇಕು.

ಕೋಳಿ, ಕುರಿ, ಆಡು, ಹಂದಿ ಇತ್ಯಾದಿ ಸಣ್ಣ ಪ್ರಾಣಿಗಳಿಗಾಗಿ ಷಷ್ಠ ಸ್ಥಾನವನ್ನೂ ಒಕಳು, ಎಮ್ಮೆ, ಎತ್ತು, ಕೋಣ ಇತ್ಯಾದಿ ದೊಡ್ಡ ಪ್ರಾಣಿಗಳಿಗಾಗಿ ದ್ವಾದಶ ಸ್ಥಾನವನ್ನೂ ನೋಡಬೇಕಾಗುವದರಿಂದ ಈ ಸ್ಥಾನಾಧೀಶರನ್ನೂ ಪರಿಶೀಲಿಸಬೇಕಾಗುತ್ತದೆ.

## ವೆಟರಿನರಿ ಡಾಕ್ಟರ :

ಇತರ ಡಾಕ್ಟರರ ಜಾತಕದಲ್ಲಿರುವ ಯೋಗಗಳ ಹೊರತಾಗಿ ಕೆಲ ವಿಶಿಷ್ಟ ಯೋಗಗಳು ಇವರ ಜಾತಕದಲ್ಲಿರುವದು ಕಂಡುಬರುತ್ತದೆ.

ಪಶು ಕಾರಕನಾದ ಚಂದ್ರನೂ ಖಾತೆಯ ಕಾರಕನಾದ ಶನಿಯೂ ಬಲಾಢ್ಯರಿದ್ದು ಡಾಕ್ಟರ ವೃತ್ತಿಯ ಕಾರಕನಾದ ಮಂಗಳನು ಸ್ಥಾನಬಲದವನೂ, ಯೋಗಕಾರಕನೂ ಇದ್ದು ಪಶುಪೋಷಕ ಸ್ಥಾನಗಳಾದ ಷಷ್ಠ, ದ್ವಾದಶ ಸ್ಥಾನ ಹಾಗೂ ಈ ಸ್ಥಾನಾಧೀಶರೂ ಬಲಾಢ್ಯರಿರುತ್ತಾರೆ.

## ವಿಶಿಷ್ಟ ಪಶುಸಂಪತ್ತು ಅಭಿವೃದ್ಧಿ ಅಧಿಕಾರಿಗಳು :

ಶೀಪ ಡೆವ್ಹಲಪ್‌ಮೆಂಟ ಆಫೀಸರ (S. D. O.), ಪೌಲ್ಟ್ರಿ ಡೆವ್ಹಲಪ್‌ಮೆಂಟ ಆಫೀಸರ (P. D. O.). ಡೇರಿ ಡೆವ್ಹಲಪ್‌ಮೆಂಟ ಆಫೀಸರ (D. D. O.), ಫಾಡರ್ ಡೆವ್ಹಲಪ್‌ಮೆಂಟ ಆಫೀಸರ (F. D. O.), ಹೀಗೆ ಪಶು-ಪಕ್ಷಿಗಳ ಸಂಬಂಧಿಸಿದ ಅಧಿಕಾರಿಗಳ ಹಾಗೂ ನೌಕರದಾರರ ಜಾತಕಗಳಲ್ಲಿ ಖಾತೆಯ ಕಾರಕನಾದ ಶನಿಯೂ ಪಶುಪೋಷಕ ಕಾರಕನಾದ ಚಂದ್ರನೂ ಬಲಾಢ್ಯರಿರುವರಲ್ಲದೆ ಪಶುಪಕ್ಷಿಗಳ ಸ್ಥಾನಗಳಾದ ಷಷ್ಠ, ದ್ವಾದಶ ಸ್ಥಾನಗಳೂ ಈ ಸ್ಥಾನಾಧೀಶರೂ ಬಲಾಢ್ಯರಿರಬೇಕು.

## ೨೪. ತೋಟಗಾರಿಕೆ ಖಾತೆ

( Department of Horticulture )

ತೋಟಗಾರಿಕೆ ಖಾತೆಗೆ ಇತ್ತೀಚೆಗೆ ಬಹಳ ಮಹತ್ವ ಬಂದಿದೆ. (Progressive Department) ಆಹಾರ ಸಮಸ್ಯೆಯ ಜಟಿಲತೆಯನ್ನು ಕಡಿಮೆ ಮಾಡಲು ಜನರು ಹಣ್ಣುಹಂಪಲ, ಕಾಯಿಪಲ್ಲೆಗಳನ್ನು ಹೆಚ್ಚಾಗಿ ಬೆಳೆಯಬೇಕೆಂದೂ ಹೆಚ್ಚು ಉಪಯೋಗಿಸಬೇಕೆಂದೂ ಸರಕಾರ ಸಮಾಜಕ್ಕೆ ಸಲಹೆಯನ್ನೀಯುತ್ತಿದೆ. ಅಂತೆಯೇ ಹಣ್ಣುಹಂಪಲಗಳನ್ನು, ಕಾಯಿಪಲ್ಲೆಗಳನ್ನು ಹೆಚ್ಚೆಚ್ಚು ಬೆಳೆಯಲು ವೈಜ್ಞಾನಿಕವಾಗಿ ಸಂಶೋಧನೆ ಕಾರ್ಯಕೈಕೊಂಡಿದ್ದು ಒಕ್ಕಲುತನ ಖಾತೆಯಲ್ಲಿದ್ದ ಈ ಖಾತೆಯನ್ನು ಬೇರ್ಪಡಿಸಿ ಸ್ವತಂತ್ರವಾದ ಖಾತೆಯನ್ನಾಗಿ ಮಾಡಿದ್ದಾರೆ.

ಹಾಗೆ ನೋಡಿದರೆ ಈ ತೋಟಗಾರಿಕೆ ಖಾತೆ ಬಹಳ ಪುರಾತನ ಕಾಲದಿಂದಲೂ ನಮ್ಮಲ್ಲಿ ಬಳಕೆಯಲ್ಲಿ ಬಂದಿದೆ ಎನ್ನುವದಕ್ಕೆ ಅನೇಕ ಆಧಾರಗಳಿವೆ. ಹೈದರ ಅಲಿ, ಟೀಪೂ ಸುಲ್ತಾನರ ಕಾಲದಲ್ಲಿ ಈ ಖಾತೆಗೆ ಬಹಳ ಮಹತ್ವ ಬಂದಿತ್ತು. ನಾಲ್ಮಡಿ ಕೃಷ್ಣರಾಜರು ಲಂಡನ್ನಿನ ಶೋ ಗಾರ್ಡನ್‌ದಲ್ಲಿದ್ದ ಜರ್ಮನಿಯ ಡೈರೆಕ್ಟರರಾದ 'ಕುಂಬಿಗಾಲ' ರನ್ನು ಮೈಸೂರ ಆಸ್ಥಾನಕ್ಕೆ ಕರೆತಂದು ತೋಟಗಾರಿಕೆಯ ಅಭಿವೃದ್ಧಿಗಾಗಿ ಸಲಹೆಯನ್ನು ಪಡೆದಿದ್ದರೆಂದು ತಿಳಿದುಬಂದಿದೆ. 'ಹೂವಿನ ತೋಟವೇ ದೇವಾಲಯ' ಈ ಉಕ್ತಿ ಅವರ ಕಾಲದಿಂದಲೇ ಬಂದಿದೆ.

ಫಲ ಜ್ಯೋತಿಷ್ಯದಲ್ಲಿ ಈ ಖಾತೆಗೆ ಕಾರಕರಾರು, ಜಾತಕ ಹೇಗಿರಬೇಕು ಎಂಬುದನ್ನು ನೋಡುವಾ.

**ಕಾರಕಗ್ರಹ :** ಈ ಖಾತೆಗೆ ಮೂರು ಗ್ರಹಗಳು ಕಾರಕವಿರುತ್ತವೆ. ಸಸ್ಯ ಕಾರಕನೂ ಖಾದ್ಯಕಾರಕನೂ ಆದ ಚಂದ್ರನೂ, ತೋಟಗಾರಿಕೆ ಕಾರಕನಾದ ಶುಕ್ರನೂ ಒಕ್ಕಲುತನ ( ಬೇಸಾಯ ) ಖಾತೆಯ ಕಾರಕನಾದ

ಶನಿಯೂ ಕಾರಕನಿರಬೇಕಲ್ಲದೆ ಈ ಮೂರೂ ಗ್ರಹಗಳು ಬಲಾಢ್ಯವಿರಬೇಕು.

**ಸ್ಥಾನ:** ಒಕ್ಕಲುತನ ಖಾತೆಯ ಸ್ಥಾನವಾದ ಚತುರ್ಥ ಸ್ಥಾನವೇ ಈ ಖಾತೆಯ ಸ್ಥಾನವೆಂದು ಹೇಳಬಹುದು.

**ಲಗ್ನ:** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ತುಲಾ, ವೃಶ್ಚಿಕ, ಮಕರ, ಕುಂಭ ಈ ಲಗ್ನಗಳೇ ಈ ಖಾತೆಗೆ ಪೂರಕವೆಂದು ಹೇಳಬಹುದು.

### ಡೈರೆಕ್ಟರ ಆಫ್ ಹಾರ್ಟಿಕಲ್ಚರ, ಅಸಿಸ್ಟಂಟ ಡೈರೆಕ್ಟರ, ಡಿಸ್ಟ್ರಿಕ್ಟ ಆಫೀಸರ

ಈ ಮೊದಲಾದ ವರಿಷ್ಠ ಅಧಿಕಾರಿಗಳಾಗಲು ಆಡಳಿತೆಯ ಕಾರಕ ಗ್ರಹಗಳು ಬಲಾಢ್ಯವಿರಬೇಕಲ್ಲದೆ ಖಾತೆಯ ಕಾರಕ ಗ್ರಹಗಳಾದ ಚಂದ್ರ-ಶುಕ್ರ-ಶನಿಯರು ಸ್ಥಾನಬಲದವರೂ ರಾಶಿಬಲದವರೂ ಇದ್ದು ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುವವಲ್ಲದೆ ಚಂದ್ರನಂತೂ ಪುರುಷ ರಾಶಿಯಲ್ಲಿಯೇ ಇರುವನು.

### ಹಾರ್ಟಿಕಲ್ಚರಲ್ ಇನ್ಸಪೆಕ್ಟರ, ಪ್ಲಾಂಟ ಪ್ರೊಪೆಗೇಟರ, ಅಗ್ರಿಕಲ್ಚರಲ್ ಡೆಮೊನ್‌ಸ್ಟ್ರೇಟರ, ಟೆಕ್ನಿಕಲ್ ಅಸಿಸ್ಟಂಟ, ಓವ್ಹರಸೀಯರ

ಈ ಮೊದಲಾದ ಹುದ್ದೆಗಳನ್ನು ಪಡೆಯಲು ಜಾತಕದಲ್ಲಿ ತೋಟಗಾರಿಕೆ ಕಾರಕರಾದ ಶುಕ್ರ-ಚಂದ್ರ-ಶನಿಯರ ಜೊತೆಗೆ ಔಟಡೋರ (ಫಿರ್ತಿ)

ಎಕ್ಸಿಕ್ಯೂಟಿವ್ಹ್ ವರ್ಕ್ಸ್ ಕಾರಕನಾದ ಮಂಗಳನೂ ಬಲಾಢ್ಯನಿರಬೇಕಲ್ಲದೆ ಪುರುಷ ರಾಶಿಯಲ್ಲಿಯೇ ಚಂದ್ರನಿರಬೇಕು.

### ಸ್ಕೀಮ ಸ್ಪೆಶಾಲಿಸ್ಟರು

ಫ್ರುಟ್ ಡೆವಲಪ್‌ಮೆಂಟ ಆಫೀಸರ, ಗೇರುಬೀಜ ಡೆವಲಪ್‌ಮೆಂಟ ಆಫೀಸರ ಮೊದಲಾದ ಹಣ್ಣುಗಳ ಸಂಶೋಧನಾ ಹಾಗೂ ಅಭಿವೃದ್ಧಿ ಅಮಲ್ದಾರರೆಂದು ಕೆಲಸ ಮಾಡುವವರ ಜಾತಕದಲ್ಲಿ ಚಂದ್ರ, ಶುಕ್ರರು ಯೋಗಕಾರಕರೂ ಬಲಾಢ್ಯರೂ ಇರುವರಲ್ಲದೆ ಚತುರ್ಥ ಸ್ಥಾನವೂ, ಚತುರ್ಥಾಧೀಶನೂ ಬಲಾಢ್ಯರಿರುತ್ತಾರೆ.

### ಲ್ಯಾಂಡಸ್ಕೇಪ ಆಫೀಸರ

ಇವರದು ಕೇವಲ ಡಿಜಾಯಿನ್ ಪಾಸುಮಾಡುವ ಕೆಲಸವಿರುವದಲ್ಲದೆ ರಾಜ್ಯದ ಯಾವದೆ ಸಂಘ-ಸಂಸ್ಥೆಗಳ ಹಾಗೂ ಸರಕಾರಿ ತೋಟಗಾರಿಕೆಯ ಮೇಲ್ವಿಚಾರಣೆ ಇರುವದರಿಂದ ಇವರ ಜಾತಕದಲ್ಲಿ ಕೇವಲ ಶುಕ್ರ-ಚಂದ್ರರೇ ಬಲಾಢ್ಯರೂ ಯೋಗಕಾರಕರೂ ಇರುತ್ತಾರೆ.

## ೨೫. ಕಮರ್ಷಿಯಲ್ ಟ್ಯಾಕ್ಸ ಖಾತೆ

ಕಮರ್ಶಿಯಲ್ ಟ್ಯಾಕ್ಸ ಖಾತೆಗೆ ಸೇಲ್ಸಟ್ಯಾಕ್ಸ ಖಾತೆ ಎಂದೂ ಕರೆಯುವ ರೂಢಿ ಇದೆ. ಮಾರಾಟ ಕರ, ಮನರಂಜಕ ಕರ, ವೃತ್ತಿಕರ, ಮೋಟಾರ ಸೇಲ್ ಹಾಗೂ ಸ್ಪಿರಿಟ್ ಈ ಎಲ್ಲ ಕರಗಳಿಗಿಂತಲೂ ಮಾರಾಟಕರವೇ ಹೆಚ್ಚು ಪ್ರಮುಖವಿರುವದರಿಂದ ಖಾತೆಗೂ ಕೂಡ ಸೇಲ್ಸ ಟ್ಯಾಕ್ಸ ಎಂದು ಕರೆಯುವು ದರಲ್ಲಿ ಔಚಿತ್ಯವಿದೆ ಎನ್ನಬಹುದು. ಇನ್ನು ಮುಂದಾದರು ಶೇತಕಿ ಕರ- ವನ್ನಾಗಲಿ ಕಟ್ಟಡಗಳ ಮೇಲಿನ ಕರವನ್ನಾಗಲಿ ಕೂಡ ಈ ಖಾತೆಗೆ ಜೋಡಿಸು ವರಂತೆ. ಏನೇ ಇರಲಿ, ಫಲಜ್ಯೋತಿಷ್ಯದಲ್ಲಿ ಈ ಕರ ಖಾತೆಗೆ ಕಾರಕ

ಗ್ರಹಗಳಾವುವು, ಜಾತಕದಲ್ಲಿ ಗ್ರಹಯೋಗಗಳು ಎಂತಿರಬೇಕು ಎಂಬುದನ್ನು ನೋಡುವಾ.

**ಕಾರಕಗ್ರಹ:** ವ್ಯಾಪಾರ ತೆರಿಗೆಯೇ ಮೂಲ ಹಾಗೂ ಮುಖ್ಯ ವಿರುವ ಈ ಖಾತೆಗೆ ವ್ಯಾಪಾರಿ ಹಾಗೂ ಹಣಕಾಸಿನ ಮತ್ತು ಕರಕಾರಕ ಗ್ರಹವಾದ ಬುಧ ಗ್ರಹವೇ ಈ ಖಾತೆಯ ಕಾರಕ ಗ್ರಹವೆಂದು ಹೇಳಬಹುದು.

ಆಡಳಿತ ಹಾಗೂ ಅಧಿಕಾರಿ ಕಾರಕನೂ ಮತ್ತು ಸರಕಾರಿ ನೌಕರಿ ಕಾರಕನೂ ಆದ ರವಿಯು ಕೆಲಮಟ್ಟಿಗೆ ಕಾರಕನಾಗಿರುವನು.

**ಕಾರಕಸ್ಥಾನ:** ವ್ಯಾಪಾರ, ಉದ್ಯೋಗದ ಮೇಲಿಂದ ಕರಾಕರಣೆ ಮಾಡುವುದೇ ಈ ಖಾತೆಯ ಮೂಲ ಹಾಗೂ ಮುಖ್ಯ ಕೆಲಸವಿರುವದರಿಂದ ನೈಸರ್ಗಿಕ ವ್ಯಾಪಾರ, ಉದ್ಯೋಗ ಸ್ಥಾನವಾದ ದಶಮಸ್ಥಾನವೇ ಈ ಖಾತೆಯ ಕಾರಕಸ್ಥಾನವೆಂದೆನ್ನಬಹುದು. ಆದುದರಿಂದ ದಶಮೇಶನೂ ಮತ್ತು ಬುಧನೂ ಬಲಾಢ್ಯರಿರುವ ನೌಕರದಾರರಿಗೆ ಈ ಖಾತೆಯಲ್ಲಿ ಏರಿಕೆ ಬೇಗ ಸಿಗುವುದು.

**ಲಗ್ನ:** ಧನು, ಕನ್ಯಾ, ಮಕರ, ಮಿಥುನ, ವೃಷಭ ಈ ಲಗ್ನಗಳು ಈ ಖಾತೆಗೆ ಅನುಕ್ರಮವಾಗಿ ಕಾರಕ ಹಾಗೂ ಪೂರಕ ಲಗ್ನಗಳಾಗುವವು.

**ರಾಶಿ:** ರಾಶಿ ದೃಷ್ಟಿಯಿಂದ ನೋಡಿದರೆ, ಇಂತಹ ರಾಶಿಯವರೇ ಈ ಖಾತೆಗೆ ಯೋಗ್ಯರು ಎಂದು ಹೇಳಲುಬಾರದು.

### ಕಮೀಷನರ್

ಈ ಖಾತೆಯಲ್ಲಿಯ ಅತ್ಯುನ್ನತ ಹುದ್ದೆಯು ಅಧಿಕಾರಿಗಳಾದ ಇವರು ಐ. ಎ. ಎಸ್. ದವರಿರುವದರಿಂದ ಐ. ಎ. ಎಸ್. ಯೋಗದವರಿರಬೇಕು.

### ಕಮರ್ಷಿಯಲ್ ಟ್ಯಾಕ್ಸ್ ಡೆಪ್ಯೂಟಿ ಕಮೀಷನರ್ :

ಇವರು ಆಡಳಿತಕಾರರೂ ನ್ಯಾಯಾಧೀಶರೂ ಅಧಿಕಾರಿಗಳೂ ಇರುವದರಿಂದ ಆಡಳಿತ ಹಾಗೂ ಅಧಿಕಾರಿ ಕಾರಕಗ್ರಹಗಳ ಯೋಗಗಳೇ ಇವರ

ಜಾತಕದಲ್ಲಿರುವವು. ಖಾತೆಯ ಕಾರಕಗ್ರಹವಾದ ಬುಧನು ಕೇವಲ ರಾಶಿ ಬಲದವನಿದ್ದು, ಸ್ಥಾನಬಲದವನೂ ಯೋಗಕಾರಕನೂ ಇರದೆ, ಆಡಳಿತ ಕಾರಕ ಗ್ರಹಗಳು ಆಡಳಿತಕಾರಕ ಲಗ್ನಗಳು ಇವರ ಜಾತಕಗಳಲ್ಲಿದ್ದು ಅನೇಕ ಗ್ರಹಗಳು ಪುರುಷ ರಾಶಿಯಲ್ಲಿ ವಿಶೇಷವಾಗಿ ಚಂದ್ರನು ಪುರುಷರಾಶಿಯಲ್ಲಿರುವನು.

ಆಡಳಿತ ಕಾರಕ ಗ್ರಹವಾದ ರವಿಯೂ, ನ್ಯಾಯಕಾರಕ ಗ್ರಹವಾದ ಗುರುವೂ ಕಾಯಿದೇ ಕಾರಕಗ್ರಹವಾದ ಶನಿಯೂ ಇವರು ಸ್ಥಾನ ಬಲದವರೂ ರಾಶಿಬಲದವರೂ ಯೋಗಕಾರಕರೂ ಇರುತ್ತಾರೆ.

## ಕಮರ್ಷಿಯಲ್ ಟ್ಯಾಕ್ಸ್ ಆಫೀಸರ್ ಹಾಗೂ ಅಸಿಸ್ಟೆಂಟ್ ಕಮರ್ಷಿಯಲ್ ಟ್ಯಾಕ್ಸ್ ಆಫೀಸರ್

ಈ ಅಮಲ್ದಾರರೇ ಈ ಖಾತೆಯ ಬೆನ್ನೆಲುವುಗಳಂತಿರುವರು. ಇವರ ಜಾತಕದಲ್ಲಿ ದಶಮೇಶನೂ ಮತ್ತು ಬುಧನು ಇವರು ಸ್ಥಾನಬಲದವರೂ ರಾಶಿಬಲದವರೂ ಯೋಗಕಾರಕರೂ ಇರುತ್ತಾರೆ. ಖಾತೆಯ ಕಾರಕ ಲಗ್ನಗಳೇ ಇವರ ಜಾತಕದಲ್ಲಿ ಪೋಷಕವಾಗಿರುತ್ತವೆ. ಇವರ ಜಾತಕಗಳಲ್ಲಿರುವ ವೈಶಿಷ್ಟ್ಯವೆಂದರೆ ಅಷ್ಟಮ ಸ್ಥಾನ ಹಾಗೂ ಅಷ್ಟಮೇಶರು ಬಲಾಢ್ಯರಿದ್ದು ಅಷ್ಟಮೇಶನ ಶುಭ ಸಂಬಂಧ ಯೋಗವು ಬುಧನೊಂದಿಗೆ ಹಾಗೂ ದಶಮೇಶನೊಂದಿಗೆ ಇರುತ್ತದೆ. ಇವರದು ಆಫೀಸಿನ ಹಾಗೂ ಫಿರ್ತಿ (ಓಡಾಡುವ) ಕೆಲಸ ( Exeuctive work ) ಇರುವುದರಿಂದ ಎಕ್ಸಿಕ್ಯೂಟಿವ್ ಕಾರಕ ಗ್ರಹವಾದ ಮಂಗಳನು ರಾಶಿಬಲದವನಿರುತ್ತಾನೆ.

ಇವರದು ತಪಾಸಣೆಯ ಹಾಗೂ ಪರಿಶೀಲಿಸುವ ಮತ್ತು ಕರಾಕರಣೆಯು ಮತ್ತು ಕರ ವಸೂಲ ಮಾಡುವ ಕೆಲಸವಿರುವದರಿಂದ ವೃಷಭ, ಮಿಥುನ, ತುಲಾ, ಕುಂಭ, ಕರ್ಕ, ವೃಶ್ಚಿಕ, ಮಕರ, ಮೀನ ಈ ರಾಶಿಯ ಜನರೇ ಗುಣಾನುಕ್ರಮವಾಗಿ ಯಶಸ್ವೀ ಅಧಿಕಾರಿಗಳಾಗಬಲ್ಲರು.

## ಕಮರ್ಷಿಯಲ್ ಟ್ಯಾಕ್ಸ್ ಇನ್‌ಸ್ಪೆಕ್ಟರ್ ಹಾಗೂ ಇತರ ಕಾರಕೂನರು

ರೆವಿನ್ಯೂ ಖಾತೆಯಂತೆ ಈ ಖಾತೆಯಲ್ಲಿಯೂ ಕಾರಕೂನರಿಗೆ ಅಧಿಕಾರಿಗಳಾಗುವ ಸೌಲಭ್ಯವಿರುವದರಿಂದ ಕಾರಕೂನಿಕೆಯಿಂದ ಅಮಲ್ದಾರರಾಗುವ ಯೋಗವಿರುವವರು ಅಮಲ್ದಾರರಾಗಬಹುದಾಗಿದೆ. ಇದಕ್ಕಾಗಿ ಇದೇ ಗ್ರಂಥದ ೩ನೇ ಪ್ರಕರಣ ನೋಡಬಹುದು.

ಕಮರ್ಷಿಯಲ್ ಟ್ಯಾಕ್ಸ್ ಇನ್‌ಸ್ಪೆಕ್ಟರ್ ಇವರದು ಎಕ್ಸಿಕ್ಯೂಟಿವ್ ಕೆಲಸವೇ ವಿಶೇಷವಿರುವುದರಿಂದ ಈ ವೃತ್ತಿಯ ಕಾರಕ ಗ್ರಹವಾದ ಮಂಗಳನು ಬಲಾಢ್ಯನಿದ್ದು ಖಾತೆಯ ಕಾರಕಗ್ರಹವಾದ ಬುಧನೊಂದಿಗೆ ಶುಭ ಯೋಗವನ್ನು ಮಾಡುವನು.

ಅನೇಕ ಗ್ರಹಗಳು ಪುರುಷರಾಶಿಯಲ್ಲಿ, ವಿಶೇಷವಾಗಿ ಚಂದ್ರನು ಪುರುಷರಾಶಿಯಲ್ಲಿ ಇರುವನು.

ಅನೇಕ ಗ್ರಹಗಳು ತೃತೀಯ, ಸಪ್ತಮ, ಲಗ್ನ, ಭಾಗ್ಯ, ಈ ಸ್ಥಾನದಲ್ಲಿಯೂ ಚರರಾಶಿಗಳಲ್ಲಿಯೂ ಇರುವವು.

## ೨೬ ಸಹಕಾರಿ ಹಾಗೂ ಮಾರ್ಕೆಟಿಂಗ್ ಖಾತೆ

(Co-operative & Marketing Department)

ಈ ಸಹಕಾರಖಾತೆ ಜಗತ್ತಿನಲ್ಲಿ ಪ್ರಥಮವಾಗಿ ಇಂಗ್ಲೆಂಡಿನಲ್ಲಿ ೧೮೪೦ ರಲ್ಲಿ ಉದಯಿಸಿತೆಂದು ಕಂಡುಬಂದಿದೆ. ಭಾರತದಲ್ಲಿ ೧೯೦೪ ರಲ್ಲಿ ಉದಯವಾಯಿತು. ಮೊದಲು ಈ ಖಾತೆಯನ್ನು ಒಕ್ಕಲುತನ ಖಾತೆಯಲ್ಲಿ ಸೇರಿಸಲಾಗಿತ್ತು. ಮುಂದೆ ನಾಡಿನಲ್ಲಿ ಬ್ಯಾಂಕುಗಳು, ಸೊಸೈಟಿಗಳು ಅಧಿಕ ಪ್ರಮಾಣದಲ್ಲಿ ಬೆಳೆದಹಾಗೆ ಪ್ರತ್ಯೇಕವಾದ ಖಾತೆಯನ್ನಾಗಿ ಮಾಡಲಾಗಿದೆ.

ಕಾರಕಗ್ರಹ: ಈ ಖಾತೆಯಲ್ಲಿ ಪ್ರಮುಖವಾಗಿ ಎರಡು ಭಾಗಗಳಿವೆ.

(i) ಮಾರ್ಕೆಟಿಂಗ್, (ii) ಬ್ಯಾಂಕಿಂಗ್.

ಈ ಮಾರ್ಕೆಟಿಂಗಿನಲ್ಲಿ ಹೆಚ್ಚಾಗಿ ಬೇಸಾಯಗಾರರ ಸಂಬಂಧವೇ ಹೆಚ್ಚು ಇರುವದರಿಂದ ಶನಿಯು ಕಾರಕನಾಗುವನು. ಬ್ಯಾಂಕಿಂಗ್ ವಿಭಾಗದಲ್ಲಿ ಹಣದ ಸಂಬಂಧವಿರುವದರಿಂದ ಬುಧನು ಕಾರಕನಾಗುವನು. ಒಟ್ಟಿನಲ್ಲಿ ಈ ಖಾತೆಗೆ ಬುಧ, ಶನಿಯರು ಕಾರಕರಾಗುತ್ತಾರೆ.

ಸ್ಥಾನ : ಸ್ಥಾನದೃಷ್ಟಿಯಿಂದ ನೋಡಿದರೆ ಹಣದ ವ್ಯವಹಾರಕ್ಕೆ ವಿಶೇಷವಾಗಿ ಬ್ಯಾಂಕ, ಸೊಸೈಟಿ ಇವುಗಳ ವ್ಯವಹಾರಕ್ಕಾಗಿ ಪಂಚಮ ಸ್ಥಾನ ವನ್ನು ಪರಿಶೀಲಿಸಬೇಕು. ಆದುದರಿಂದ ಪಂಚಮಸ್ಥಾನ, ಪಂಚಮೇಶ, ಹಾಗು ಬುಧ ಬಲಾಢ್ಯರಿರಬೇಕು.

ಲಗ್ನ : ಲಗ್ನದದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ಲಗ್ನಗಳು ಹೆಚ್ಚು ಪೂರಕ ವಿರುತ್ತವೆ.

ರಾಶಿ : ರಾಶಿದೃಷ್ಟಿಯಿಂದ ನೋಡಿದರೆ ಇಂತಹ ರಾಶಿಯವರೇ ಈ ಖಾತೆಗೆ ಯೋಗ್ಯರೆಂದು ಹೇಳಲು ಬಾರದಿದ್ದರೂ ಹೆಚ್ಚಾಗಿ ವೃಷಭ, ಕನ್ಯಾ, ಮಿಥುನ, ತುಲಾ, ಸಿಂಹ, ಮಕರ, ಕುಂಭ ರಾಶಿಯವರು ಇರುವದು ಕಂಡು ಬರುತ್ತದೆ.

ವಿಚಿತ್ರ ಯೋಗಗಳು : ಸರಕಾರದ ಇತರ ಖಾತೆಗಳಲ್ಲಿ ಸರಕಾರೀ ನೌಕರವರ್ಗದವರ ಮಾತಿಗೆ ಹೆಚ್ಚು ಮಹತ್ವವಿರುತ್ತದೆ. ಆದರೆ ಈ ಖಾತೆಯ ನೌಕರದಾರರು ಇದಕ್ಕೆ ಅಪವಾದವೆನಿಸುವರು. ಇಲ್ಲಿ ಬ್ಯಾಂಕ-ಸೊಸೈಟಿಗಳ ಚುನಾಯಿತ ಪ್ರತಿನಿಧಿಗಳಿಗೆ ಹಾಗು ಗೌರವಸ್ಥಾನವನ್ನು ಹೊಂದಿರುವ ಜನರಿಗೆ ವಿಶೇಷ ಮಹತ್ವವಿರುತ್ತದೆ. ಅಂತೆಯೆ ಈ ಖಾತೆಯು ನೌಕರದಾರರ ಜಾತಕದಲ್ಲಿ ರವಿ, ಗುರು, ಮಂಗಳರು ದುರ್ಬಲರಿದ್ದು ಬುಧ, ಶನಿ, ಶುಕ್ರರು ಬಲಾಢ್ಯರಿದ್ದು, ಚಂದ್ರನು ಸ್ತ್ರೀರಾಶಿಯಲ್ಲಿರುತ್ತಾನೆ.

ರಿಜಿಸ್ಟ್ರಾರ್, ಜಾಯಿಂಟ್ ರಿಜಿಸ್ಟ್ರಾರ, ಚೀಫ್ ಮಾರ್ಕೆಟಿಂಗ್ ಆಫೀಸರ್, ಅಸಿಸ್ಟಂಟ್ ರಿಜಿಸ್ಟ್ರಾರ್, ಸಹಾಯಕ ರಿಜಿಸ್ಟ್ರಾರ್, ಅಳತೆ ಮತ್ತು ತೂಕದ ಅಧಿಕಾರಿ,

ಈ ಮೊದಲಾದ ಆಡಳಿತೆಯ ಅಧಿಕಾರೀ ವರ್ಗದವರಲ್ಲಿಯೂ, ಆಡಳಿತ ಕಾರಕಗ್ರಹಗಳಾದ ರವಿ, ಮಂಗಳ, ಗುರು ಈ ಗ್ರಹಗಳು ರಾಶಿಬಲದವರಿದ್ದಾಗ್ಯೂ ಸ್ಥಾನಬಲದವರಿರುವುದಿಲ್ಲ.

ಇವರ ಜಾತಕದಲ್ಲಿ ಅನೇಕ ಗ್ರಹಗಳು ಪುರುಷರಾಶಿಯಲ್ಲಿರುವವು. ಹಾಗೂ ಅನೇಕ ಗ್ರಹಗಳು ಹೆಚ್ಚಾಗಿ ಲಗ್ನ, ತೃತೀಯ, ಸಪ್ತಮ, ಭಾಗ್ಯದಲ್ಲಿ ಇರುವವು.

ಸಹಕಾರೀ ಸಂಘಗಳ ಸ್ಪೆಶಲ್ ಆಡಿಟರ್ಸ್, ಮಾರ್ಕೆಟಿಂಗ್ ಆಫೀಸರ್, ಸುಪರಿಂಟೆಂಡೆಂಟರುಗಳು,

ಈ ಮೊದಲಾದ ನೌಕರ ವರ್ಗದವರಲ್ಲಿ ರವಿ, ಮಂಗಳರು ದುರ್ಬಲರಿದ್ದು ಬುಧ, ಶುಕ್ರ, ಶನಿಯರು ಯೋಗಕಾರಕರೂ, ಬಲಾಢ್ಯರೂ ಇರುವರಲ್ಲದೆ ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿಯೂ, ಲಗ್ನ, ತೃತೀಯ, ಭಾಗ್ಯ, ಸಪ್ತಮ ಸ್ಥಾನಗಳಲ್ಲಿಯೂ ಇರುವವು.

## ೨೭ ಕೂಲಿಕಾರ ಖಾತೆ

**ಕಾರಕಗ್ರಹ :** ಈ ಖಾತೆಗೆ ಕಾರಕಗ್ರಹವೆಂದರೆ ಶ್ರಮಜೀವಿ ಕಾರಕ ಗ್ರಹವಾದ ಶನಿಯೇ ಖಾತೆಯ ಕಾರಕನಾಗುವನು.

ಸ್ಥಾನ : ಶನಿಯ ನೈಸರ್ಗಿಕ ಸ್ಥಾನವೂ, ಉದ್ಯೋಗದ ನೈಸರ್ಗಿಕ ಸ್ಥಾನವೂ ಆದ ದಶಮ ಸ್ಥಾನವೇ ಈ ಖಾತೆಯ ಕಾರಕಸ್ಥಾನ.

ಭಾವ : ದಶಮೇಶನೂ ಹಾಗೂ ಶನಿಯು ಬಲಾಢ್ಯನಿರುವ ಜಾತಕನು ಈ ಖಾತೆಯಲ್ಲಿ ಉತ್ಕರ್ಷಹೊಂದುವನು.

ಲಗ್ನ : ಲಗ್ನದ ದೃಷ್ಟಿಯಿಂದ ನೋಡಿದರೆ ವೃಷಭ, ಮಿಥುನ,ತುಲಾ, ವೃಶ್ಚಿಕ, ಮಕರ, ಕುಂಭ, ಮೇಷ ಈ ಲಗ್ನಗಳೇ ಹೆಚ್ಚು ಪೂರಕ ವಾಗಿರುವವು.

ರಾಶಿ : ರಾಶಿದೃಷ್ಟಿಯಿಂದ ನೋಡಿದರೆ ಇಂತಹ ರಾಶಿಯವರೇ ಈ ಖಾತೆಯಲ್ಲಿರುವರೆಂದು ಹೇಳಲುಬಾರದು.

### ಲೇಬರ್ ಕಮೀಷನರ್

ಈ ಹುದ್ದೆಯನ್ನು ಪಡೆಯುವವರು ಸಾಮಾನ್ಯವಾಗಿ, ಐ. ಎ. ಎಸ್. ಅಧಿಕಾರಿ ಇರುವುದರಿಂದ, ಐ. ಎ. ಎಸ್. ಯೋಗವಿದ್ದು, ಜಾತಕದಲ್ಲಿ ವಿಶೇಷವಾಗಿ, ಶನಿಯು ಬಲಾಢ್ಯನಿರುವ ಜಾತಕಗಳು ಪೂರಕವೆಂದು ಹೇಳ ಬಹುದು.

### ಡೆಪ್ಯೂಟಿ ಲೇಬರ್ ಕಮೀಷನರ್, ಅಸಿಸ್ಟಂಟ್ ಲೇಬರ್ ಕಮೀಷನರ್, ಲೇಬರ್ ಆಫೀಸರ್, ಪ್ರಿಸೈಡಿಂಗ್ ಆಫೀಸರ್

ಈ ಮೊದಲಾದ ಹುದ್ದೆಯನ್ನು ಪಡೆಯುವವರ ಜಾತಕದಲ್ಲಿ ಖಾತೆಯ ಕಾರಕಗ್ರಹವೂ, ಖಾತೆಯ ಕಾರಕಸ್ಥಾನವೂ, ಖಾತೆಯ ಕಾರಕ ಲಗ್ನವೂ ಇರುವುದರ ಜೊತೆಗೆ ಆಡಳಿತ ಕಾರಕಗ್ರಹಗಳಾದ ರವಿ, ಮಂಗಳ, ಗುರು ಗಳು ಬಲಾಢ್ಯರಿದ್ದು, ಅನೇಕ ಗ್ರಹಗಳು ಪುರುಷರಾಶಿಯಲ್ಲಿ ಇರುವುವಲ್ಲದೆ ಆಡಳಿತ ಕಾರಕಯೋಗಗಳು ಇವರ ಜಾತಕದಲ್ಲಿರುತ್ತವೆ. ವಿಶೇಷವಾಗಿ ಮೇಷ, ಮಿಥುನ, ವೃಶ್ಚಿಕ, ಸಿಂಹ, ಧನು, ಕುಂಭ, ಮಕರ ಈ ಲಗ್ನಗಳೇ ಹೆಚ್ಚಾಗಿರುವುದಲ್ಲದೆ ನವಮೇಶನೂ, ನವಮಸ್ಥಾನವೂ ಬಲಾಢ್ಯನಿದ್ದು ಚಂದ್ರನು ಪುರುಷರಾಶಿಯಲ್ಲಿರುತ್ತಾನೆ.

### ಲೇಬರ್ ಇನ್ಸ್‌ಪೆಕ್ಟರ್, ಸಹಾಯಕ ಲೇಬರ್ ಇನ್ಸ್‌ಪೆಕ್ಟರ್, ಲೇಬರ್ ಸೂಪರ್‌ವೈಸರ್

ಈ ಮೊದಲಾದ ಹುದ್ದೆಯನ್ನು ಪಡೆಯುವವರ ಜಾತಕದಲ್ಲಿ ಈ ಕೆಳಗೆ ಕಾಣಿಸಿದ ಯೋಗಗಳು ಇರುವವು.

(i) ಖಾತೆಯ ಕಾರಕನಾದ ಶನಿಯು ರಾಶಿಬಲದವನಿದ್ದು ಸ್ಥಾನ ಬಲದವನಿರುವುದಿಲ್ಲ.

(ii) ಇನ್ಸ್‌ಪೆಕ್ಟರ್ ಹಾಗೂ ಸುಪರ್‌ವೈಸರ್ ಹುದ್ದೆಗಳ ಪೋಷಕ ಗ್ರಹವೂ ಫೀಲ್ಡ್ (ಓಡಾಡಿ) ಕೆಲಸಮಾಡುವ ಪ್ರವೃತ್ತಿಯ ಗ್ರಹವೂ ಆದ ಮಂಗಳನು ಇವರ ಜಾತಕದಲ್ಲಿ ಬಲಾಢ್ಯನಿರುವನು.

(iii) ಅನೇಕ ಗ್ರಹಗಳು ರಾಶಿ ಬಲದವಿದ್ದರೂ ಸ್ಥಾನಬಲದ ವಿರುವುದಿಲ್ಲ.

(iv) ಚಂದ್ರನು ಪುರುಷ ರಾಶಿಯಲ್ಲಿದ್ದರೂ ಇತರ ಗ್ರಹಗಳು ಹೆಚ್ಚಾಗಿ ಸ್ತ್ರೀರಾಶಿಯಲ್ಲಿರುವವು.

(v) ಅನೇಕ ಗ್ರಹಗಳು ಲಗ್ನ, ತೃತೀಯ, ಸಪ್ತಮ, ಭಾಗ್ಯ ಸ್ಥಾನಗಳಲ್ಲಿರುವವು.

(vi) ಭಾಗ್ಯಸ್ಥಾನಕ್ಕಿಂತ (ಭಾಗ್ಯೇಶನಗಿಂತ) ದಶಮಸ್ಥಾನವೂ ಹಾಗೂ ದಶಮೇಶನೂ ಹೆಚ್ಚು ಬಲಾಢ್ಯರಿರುತ್ತಾರೆ.

### ಈ ಖಾತೆಯ ಮಿನಿಸ್ಟೀರಿಯಲ್ ಕೆಲಸಗಾರರು

ಈ ಖಾತೆಯ ಇತರ ಕಾರಕೂನರ ಜಾತಕದಲ್ಲಿ ಖಾತೆಯ ಕಾರಕನಾದ ಶನಿಯು ಹಾಗೂ ಕಾರಕೂನಿಕೆ ಕಾರಕಗ್ರಹವಾದ ಬುಧನೂ ಬಲಾಢ್ಯರಿದ್ದು (ಸ್ಥಾನಬಲವಿಲ್ಲದೆ ರಾಶಿಬಲದವರು) ಕಾರಕೂನಿಕೆಕಾರಕ ಲಗ್ನಗಳು ಇರು ವುವಲ್ಲದೆ ಅನೇಕ ಗ್ರಹಗಳು ಹೆಚ್ಚಾಗಿ ಸ್ತ್ರೀರಾಶಿಯಲ್ಲಿರುವುವು.

## ೨೮ ಸಮಾಜ ಕಲ್ಯಾಣ ಹಾಗೂ ವಿಕಾಸ ಖಾತೆ

(Departments of Social Welfare and Community Development)

ಸ್ವಾತಂತ್ರ್ಯ ಬಂದನಂತರ ಭಾರತ ಸರಕಾರವು ಪಂಚವಾರ್ಷಿಕ ಯೋಜನೆಗಳನ್ನು ಕೈಕೊಂಡನಂತರ ಈ ಖಾತೆಯು ಉದಯಿಸಿದೆ. ಹಿಂದಳಿ ದವರ ಅಭ್ಯುದಯವೇ ಈ ಖಾತೆಯ ಕಾರ್ಯವಿರುವುದು.

**ಕಾರಕಗ್ರಹ :** ಹಿಂದುಳಿದ ವರ್ಗದವರ ಪೋಷಕ ಹಾಗು ಪೂರಕ ಗ್ರಹವಾದ ಶನಿಯೇ ಈ ಖಾತೆಯ ಕಾರಕಗ್ರಹವೆನ್ನಬಹುದು.

ಸಮಾಜ ವಿಕಾಸ ಯೋಜನೆಯ ಹಾಗೂ ಸಮಾಜ ಕಲ್ಯಾಣ ಖಾತೆಯ ಕಾರ್ಯದ ಸಂಬಂಧವು ರೆವಿನ್ಯೂ ಖಾತೆಯ ನೌಕರರೊಂದಿಗೆ ಬರುವುದರಿಂದ ರೆವಿನ್ಯೂ ಖಾತೆಯ ಕಾರಕಗ್ರಹವಾದ ಬುಧನೂ ಈ ಖಾತೆಯ ಕಾರಕ ನಾಗುವನು.

ಶನಿ, ಬುಧರ ನಂತರ ಅಂತ್ಯಜ ಜಾತಿಯವನಾದ ರಾಹುವೂ ಕೂಡ ಈ ಖಾತೆಯ ಕಾರಕನಾಗುವನು ರಾಹು ಮಿಥುನ, ಕನ್ಯಾ, ವೃಷಭ, ಮಕರ, ಕುಂಭ, ತುಲಾ ಈ ರಾಶಿಯವನಿರಬೇಕು.

**ಲಗ್ನ :** ಲಗ್ನದದೃಷ್ಟಿಯಿಂದ ವಿಚಾರಿಸಿದರೆ ಹೆಚ್ಚಾಗಿ ವೃಷಭ, ತುಲಾ, ವೃಶ್ಚಿಕ, ಮಿಥುನ ಧನು, ಕನ್ಯಾ, ಮಕರ, ಕುಂಭ, ಮೇಷ ಈ ಲಗ್ನಗಳೇ ಇರುವುದು ಕಂಡುಬರುತ್ತದೆ.

**ಸ್ಥಾನ :** ಶನಿಯ ನೈಸರ್ಗಿಕ ಸ್ಥಾನವೂ ಉದ್ಯೋಗದ ನೈಸರ್ಗಿಕ ಸ್ಥಾನವೂ ಆದ ದಶಮಸ್ಥಾನವೇ ಈ ಖಾತೆಯ ಕಾರಕಸ್ಥಾನ.

**ರಾಶಿ :** ಈ ಖಾತೆಯಲ್ಲಿ ಕೆಲಸ ಮಾಡಲು ಇಂತಹ ರಾಶಿಯವರೇ ಇರಬೇಕೆಂಬ ನಿಯಮವಿರದಿದ್ದರೂ ಹೆಚ್ಚಾಗಿ ಸ್ತ್ರೀರಾಶಿಯವರೇ ಇರುವದು ಕಂಡುಬರುತ್ತದೆ.

**ಡೈರೆಕ್ಟರ್ ಆಫ್ ಸೋಷಿಯಲ್ ವೆಲ್‌ಫೇಅರ್,**
**ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಸೋಷಿಯಲ್ ವೆಲ್‌ಫೇಅರ್**

ಈ ಮೊದಲಾದ ಹುದ್ದೆಗಳನ್ನು ಪಡೆದವರು ಐ. ಎ. ಎಸ್. ಅಧಿಕಾರಿಗಳಿರುವುದರಿಂದ ಐ. ಎ. ಎಸ್. ಯೋಗವಿದ್ದು ಜಾತಕನಲ್ಲಿ ವಿಶೇಷವಾಗಿ ಶನಿ, ಬುಧ, ರಾಹುಗಳು ಬಲಾಢ್ಯರಿರುವ ಜಾತಕಗಳು ಪೂರಕವೆಂದು ಹೇಳಬಹುದು.

## ಡಿಸ್ಟ್ರಿಕ್ಟ್ ವೆಲ್‌ಫೇಅರ್ ಆಫೀಸರ್
## Special Officer for Nomadic and cther Tribes

ಈ ಮೊದಲಾದ ಅಧಿಕಾರಿಗಳೇ ಈ ಖಾತೆಯ ಜೆನ್ನಿಲಬಾಗಿರುವುದ ರಿಂದ ಇವರ ಜಾತಕದಲ್ಲಿ ಶನಿ, ರಾಹು, ಬುಧ ಈ ಗ್ರಹಗಳು ಕ್ರಮವಾಗಿ ಬಲಾಢ್ಯರೂ (ಸ್ಥಾನಬಲ ಹಾಗೂ ರಾಶಿಬಲ) ಯೋಗಕಾರಕರೂ ಇದ್ದು ದಶಮೇಶವೂ ಬಲಾಢ್ಯನಿರುತ್ತಾನೆ.

ಇವರ ಜಾತಕದಲ್ಲಿ ಹೆಚ್ಚಾಗಿ ವೃಷಭ, ತುಲಾ, ಮಿಥುನ, ಧನು, ಕನ್ಯಾ, ಮಕರ, ಕುಂಭ ಈ ಲಗ್ನಗಳೇ ಇರುತ್ತವೆ.

ಇವರ ಜಾತಕದಲ್ಲಿ ದಶಮಸ್ಥಾನದ ನಂತರ ಚತುರ್ಥಸ್ಥಾನವೂ ಪೂರಕವಾಗಿರುವದರಿಂದ ದಶಮೇಶ ಹಾಗೂ ಸುಖೇಶರ ಬಲಾಬಲವನ್ನು ಪರಿಶೀಲಿಸಬೇಕು.

ಈ ತರಹದ ಹುದ್ದೆಯನ್ನು ಪಡೆಯುವವರು ಹೆಚ್ಚಾಗಿ ವೃಷಭ, ಕನ್ಯಾ, ಕರ್ಕ, ವೃಶ್ಚಿಕ, ಮಕರ ಈ ರಾಶಿಯವರೇ ಇರುವುದು ಕಂಡುಬರುತ್ತದೆ.

## ಅಸಿಸ್ಟಂಟ್ ವಿಮೆನ್ ವೆಲ್‌ಫೇಅರ್ ಆಫೀಸರ್ ಹಾಗೂ ವಿಮೆನ್ ವೆಲ್‌ಫೇಅರ್ ಆರ್ಗನೈಸರ್

ಈ ಮೊದಲಾದ ಕಾರ್ಯ ಮಹಿಳೆಯರ ಕಲ್ಯಾಣಕ್ಕಾಗಿ ಇರುವದ ರಿಂದಲೂ ಈ ಕಾರ್ಯವನ್ನು ಮಹಿಳೆಯರೇ ನಿರ್ವಹಿಸುತ್ತಿದ್ದರೂ ಇವರ ಜಾತಕಗಳು ಬಹಳ ವಿಚಿತ್ರವಿರುತ್ತವೆ.

೧. ಮಹಿಳೆಯರು ಪುರುಷರಂತೆ ಕಾರ್ಯ ಮಾಡಬೇಕಾಗುವದ ರಿಂದ ಇವರ ಜಾತಕದಲ್ಲಿ ಅನೇಕ ಗ್ರಹಗಳು ಪುರುಷರಾಶಿಯಲ್ಲಿಯೂ ವಿಶೇಷ ವಾಗಿ ಚಂದ್ರನು ಪುರುಷರಾಶಿಯಲ್ಲಿಯೂ ಲಗ್ನವು ಪುಂರಾಶಿಯದೂ ಇರುತ್ತವೆ.

೨. ಇವರ ಕಾರ್ಯ ಹೊರವಲಯದಲ್ಲಿ ಓಡಾಡಿ ಮಾಡುವ (Executive wcrk) ಪ್ರವೃತ್ತಿ ಗ್ರಹವಾದ ಮಂಗಳನೇ ಇವರ ಜಾತಕದಲ್ಲಿ ಬಲಾಢ್ಯನು (ಸ್ಥಾನಬಲ ಹಾಗೂ ರಾಶಿಬಲ).

೩. ಖಾತೆಯ ಕಾರಕಗ್ರಹವಾದ ಶನಿಯು ಸ್ಥಾನಬಲವಿಲ್ಲದೆ ರಾಶಿ ಬಲದವನಿರುತ್ತಾನೆ.

೪. ಸಪ್ತಮಸ್ಥಾನವೂ ಸಪ್ತಮೇಶನೂ ದೂಷಿತವಿರುತ್ತಾರೆ.

೫. ಭಾಗ್ಯೇಶನೂ ಹಾಗೂ ದ್ವಿತಿಯೇಶನೂ ಬಲಾಢ್ಯರಿರುತ್ತಾರೆ.

### ಸೋಷಿಯಲ್ ವೆಲ್‌ಫೇಅರ್ ಇನ್ಸ್‌ಪೆಕ್ಟರ್

ಸೋಷಿಯಲ್ ವೆಲ್‌ಫೇಅರ್ ಕಾರಕನೂ ಖಾತೆಯ ಕಾರಕನೂ ಆದ ಶನಿಯು ಇನ್ಸಪೆಕ್ಟರ ಹುದ್ದೆಯ ಕಾರಕನೂ ಹಾಗೂ ಓಡಾಡಿ ಕೆಲಸ ಮಾಡುವ ಪ್ರವೃತ್ತಿಯ ಕಾರಕನಾದ ಮಂಗಳನೂ ಬಲಾಢ್ಯರಿರುವದಲ್ಲದೆ ಅನೇಕ ಗ್ರಹಗಳು ಪುರುಷರಾಶಿಯಲ್ಲಿಯೂ (ವಿಶೇಷವಾಗಿ ಚಂದ್ರನು ಪುರುಷರಾಶಿಯಲ್ಲಿಯೂ) ಲಗ್ನ, ತೃತಿಯಾ, ಸಪ್ತಮ, ಭಾಗ್ಯ ಈ ಸ್ಥಾನ ಗಳಲ್ಲಿಯೂ ಇರುತ್ತಾನೆ.

ಶಿಕ್ಷಕ : ಈ ಖಾತೆಯಲ್ಲಿ ಕೆಲಸ ಮಾಡುವ ಶಿಕ್ಷಕರಲ್ಲಿ, ಖಾತೆಯ ಕಾರಕನಾದ ಶನಿಯು ವೃತ್ತಿಕಾರಕನಾದ ಗುರುವೂ ಖಾತೆಯ ಸ್ಥಾನವಾದ ದಶಮವೂ ವೃತ್ತಿಯ ಸ್ಥಾನಗಳಾದ ಪಂಚಮ, ದ್ವಿತೀಯ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಬಲಾಢ್ಯರಿರುತ್ತಾರೆ.

### ಸುಪರಿಂಟೆಂಡೆಂಟ, ಮ್ಯಾನೇಜರ ಹಾಗೂ ಇತರ ಕಾರಕೂನರು

ಈ ತರಹದ ಹುದ್ದೆಯನ್ನು ಪಡೆಯಲು ಜಾತಕದಲ್ಲಿ ಖಾತೆಯ ಕಾರಕ ನಾದ ಶನಿಯೂ ವೃತ್ತಿ ಕಾರಕನಾದ ಬುಧನೂ ಸ್ಥಾನಬಲವಿಲ್ಲದೆ ರಾಶಿ ಬಲದವರಿದ್ದು ದಶಮ ಸ್ಥಾನ ಹಾಗೂ ದಶಮಾಧೀಶನೂ ಶುಭದಾಯಕ ರಿದ್ದು ಚಂದ್ರನು ಸ್ತ್ರೀರಾಶಿಯಲ್ಲಿರುವನು.

# ೨೯ ಮೀನುಗಾರಿಕೆ ಖಾತೆ

(Department of Fisheries)

ಮೀನುಗಾರಿಕೆ ಖಾತೆಗೆ ಇತ್ತೀಚಿಗೆ ಬಹಳ ಮಹತ್ವಬಂದಿದೆ. (Progressive department) ೧೯೪೭ರಲ್ಲಿ ಸ್ವಾತಂತ್ರ್ಯ ಪ್ರಾಪ್ತಿಯಾದನಂತರ ಭಾರತವು ಈ ಖಾತೆಯ ಬಗ್ಗೆ ಹೆಚ್ಚಿನ ಗಮನವನ್ನು ಕೊಟ್ಟಿದೆ. ಹಾಗೆ ನೋಡಿದರೆ ೧೯೪೪ ರಲ್ಲಿಯೇ ಇದರ ಬಗ್ಗೆ ಹೆಚ್ಚಿನ ಗಮನವನ್ನೀಯಲಾಗಿತ್ತು. ಹೆಚ್ಚು ಉತ್ಪಾದನೆಗಾಗಿ ವೈಜ್ಞಾನಿಕ ಸಂಶೋಧನೆ ಕಾರ್ಯವನ್ನು ಕೈಕೊಂಡಿದ್ದು ಮದ್ರಾಸ್, ಕೊಚ್ಚಿ, ಬಾಂಬೆ, ಬಟ್ಯಾಕ್‌ಪೂರ ಮುಂತಾದ ಕಡೆಗಳಲ್ಲಿ ಸಂಶೋಧನಾ ಕೇಂದ್ರಗಳನ್ನು ತೆರೆಯಲಾಗಿದೆ.

ನಮ್ಮ ದೇಶದಲ್ಲಿ ಕರಾವಳಿ ಪ್ರದೇಶವು ೩,೫೩೫ ಮೈಲು (Coastline) ಗಳಷ್ಟು ಇದ್ದು, ಕೆರೆ, ಕಾಲುವೆ, ನಾಲಿ, ಕುಂಟೆ, ಸರೋವರ ಮುಂತಾದವುಗಳನ್ನೊಳಗೊಂಡು ೧,೧೦,೦೦೦ ಚ. ಮೈಲುಗಳಷ್ಟು ಪ್ರದೇಶವು ಮೀನು ಹಿಡಿಯಲು ಅನುಕೂಲವಾಗಿದೆ (Fishable area of 1,10,000 sq. miles).

ಭಾರತದಲ್ಲಿ ಶೇಕಡಾ ೫೦ರಷ್ಟು ಮಂದಿ ಮೀನವನ್ನು ಪ್ರತಿನಿತ್ಯ ಉಪಯೋಗಿಸುತ್ತಾರೆ. ವಿಶೇಷವಾಗಿ ಬಂಗಾಳ, ಮುಂಬಯಿ, ಓರಿಸ್ಸಾ, ಮದ್ರಾಸ್ ಹಾಗೂ ಕೇರಳ ಈ ಪ್ರಾಂತಗಳ ಜನರಿಗೆ ಇದು ಮುಖ್ಯಾಹಾರವಾಗಿದೆ.

ಪಾಶ್ಚಿಮಾತ್ಯ ರಾಷ್ಟ್ರಗಳ ಮೀನು ಉತ್ಪಾದನೆ ಮಟ್ಟಕ್ಕೆ ಭಾರತದ ಉತ್ಪಾದನೆಯನ್ನು ಹೋಲಿಸಿದಲ್ಲಿ ಭಾರತ ಬಹಳಷ್ಟು ಹಿಂದುಳಿದಿದೆ ಎಂದು ಗೋಚರವಾಗುತ್ತದೆ. ಉದಾಹರಣೆಗಾಗಿ : ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಒಬ್ಬ ಮೀನುಗಾರನ ಒಂದು ವರುಷದ ಉತ್ಪಾದನೆ ೮೦,೦೦೦ ಕಿಲೋಗ್ರಾಂನಷ್ಟು ಇದ್ದರೆ, ಭಾರತದಲ್ಲಿಯ ಮೀನುಗಾರನೊಬ್ಬನ ಉತ್ಪಾದನೆ ಕೇವಲ ೨,೦೦೦–೨,೫೦೦ ಕಿ. ಗ್ರಾಂನಷ್ಟು ಮಾತ್ರ ಇದೆ.

೧೯೬೧ ಮಾರ್ಚ್ ಜನಗಣತಿ ಪ್ರಕಾರ ಸುಮಾರು ೧೦ ಲಕ್ಷಕ್ಕೂ ಮಿಕ್ಕಿ ಮಂದಿ ಈ ಉದ್ಯೋಗದಲ್ಲಿರುವರು ಎಂದು ತಿಳಿದುಬಂದಿತ್ತು. ಇದಲ್ಲದೆ ಮೀನುಗಾರಿಕೆ ಸಹಕಾರಿ ಸಂಘಗಳು ಸುಮಾರು ೨,೦೦೦ ದಷ್ಟಿದ್ದು ಅಲ್ಲಿಯ ಸದಸ್ಯರ ಸಂಖ್ಯೆಯು ಸುಮಾರು ೨,೫೦,೦೦೦ ದಷ್ಟಿತ್ತು, ಸದ್ಯಕ್ಕಂತೂ ಈ ಅಂಕಿಸಂಖ್ಯೆಗಳಲ್ಲಿ ವಿಪರೀತ ಬೆಳವಣಿಗೆಯಾಗಿದೆ.

ಫಲಜ್ಯೋತಿಷ್ಯದಲ್ಲಿ ಈ ಖಾತೆಯಲ್ಲಿ ಸೇರಲು, ನೌಕರಿ ದೊರಕಿಸಲು ಅಥವಾ ಈ ಉದ್ಯೋಗದಿಂದ ಧನಾರ್ಜನೆ ಗಳಿಸಲು ಕಾರಕಗ್ರಹಗಳಾವವು, ಜಾತಕ ಹೇಗಿರಬೇಕು ಎಂಬುದನ್ನು ವಿಚಾರಿಸೋಣ.

ಕಾರಕಗ್ರಹ : ಈ ಖಾತೆಯ ಸಂಬಂಧವು ನೀರಿನೊಂದಿಗೆ ಇರುವುದರಿಂದಲೂ ಜಲಚರ ಪ್ರಾಣಿಗಳ ಸಂಬಂಧ ಬರುವುದರಿಂದಲೂ ಜಲಚರ ಪ್ರಾಣಿಕಾರಕನೂ ನೀರಿನಕಾರಕನೂ ಆದ ಚಂದ್ರನೇ ಕಾರಕನೆಂದು ಹೇಳಬಹುದು. ಚಂದ್ರನ ತರುವಾಯ ರಾಹು, ಶನಿ ಗ್ರಹಗಳು ಕೆಲಮಟ್ಟಿಗೆ ಕಾರಕರಾಗುವರು.

ಈ ಖಾತೆಯಲ್ಲಿ ಸೇರಬಯಸುವವರಿಗೆ ಪ್ರಾಣಿಶಾಸ್ತ್ರದ (Zoology) ಈ ವಿಷಯಕ್ಕೆ ಹೆಚ್ಚಿನ ಪ್ರಾಶಸ್ತ್ಯವಿರುವದರಿಂದಲೂ ಪ್ರಾಣಿಶಾಸ್ತ್ರ ವಿಷಯ ಕಾರಕನಾದ ಚಂದ್ರನೇ ಮೂಲ ಹಾಗೂ ಮುಖ್ಯ ಕಾರಕಗ್ರಹನಾಗುವನು.

ರಾಶಿ : ರಾಶಿದೃಷ್ಟಿಯಿಂದ ವಿಚಾರಿಸಿದರೆ ನಿರ್ದಿಷ್ಟವಾದ ರಾಶಿಯವರೇ ಈ ಖಾತೆಯಲ್ಲಿ ಉತ್ಕರ್ಷ ಹೊಂದುವರೆಂಬ ನಿಯಮವಿದೆ. ಪ್ರಾಮುಖ್ಯವಾಗಿ, ಮೀನರಾಶಿಯ ಜನರಿಗೆ ಈ ಖಾತೆಯಲ್ಲಿ ಹೆಚ್ಚಿನ ಉತ್ಕರ್ಷ ಹಾಗೂ ಅಭ್ಯುದಯ ಇದೆಯೆಂದು ನಿಸ್ಸಂದೇಹವಾಗಿ ಹೇಳಬಹುದು.

ಮೀನರಾಶಿಯ ತರುವಾಯ ಜಲಚರ ರಾಶಿಗಳಾದ ಕರ್ಕ ಹಾಗೂ ವೃಶ್ಚಿಕ, ಈ ರಾಶಿಯ ಜನರಿಗೂ, ಭೂರಾಶಿಗಳಾದ ವೃಷಭ, ಕನ್ಯಾ ಮತ್ತು ಮಕರ ಈ ರಾಶಿಯ ಜನರಿಗೂ ಹೆಚ್ಚಿನ ಅವಕಾಶವಿದೆಯೆಂದು ಹೇಳಬಹುದು.

**ಲಗ್ನ :** ಲಗ್ನದ ದೃಷ್ಟಿಯಿಂದ ವಿಚಾರಿಸಿದರೆ, ನಿರ್ದಿಷ್ಟವಾದ ಲಗ್ನ ವಿರಬೇಕೆಂಬ ನಿಯಮವಿಲ್ಲದಿದ್ದರೂ ಹೆಚ್ಚಾಗಿ ಮೇಷ, ಸಿಂಹ, ಕರ್ಕ, ತುಲಾ, ವೃಶ್ಚಿಕ, ಮಕರ, ಮೀನ ಈ ಲಗ್ನದವರೇ ಇರುವುದು ಕಂಡುಬರುತ್ತದೆ.

**ಸ್ಥಾನ :** ಸ್ಥಾನದೃಷ್ಟಿಯಿಂದ ವಿಚಾರಿಸಿದರೆ, ಮೀನರಾಶಿಯ ನೈಸರ್ಗಿಕ ಸ್ಥಾನವಾದ ದ್ವಾದಶ ಸ್ಥಾನವೇ ಈ ಉದ್ಯೋಗದ ಕಾರಕಸ್ಥಾನವೆಂದು ಹೇಳಬಹುದಾಗಿದ್ದರೂ ಚಂದ್ರನ ನೈಸರ್ಗಿಕ ಸ್ಥಾನವಾದ ಚತುರ್ಥ ಸ್ಥಾನವೂ ಕಾರಕವಾಗುವುದರಿಂದ ಸುಖೇಶ, ದ್ವಾದಶೇಶರ ಬಲಾಬಲವನ್ನು ಪರಿಶೀಲಿಸ ಬೇಕು.

**ಮೀನುಗಾರಿಕೆಯ ಡೈರಕ್ಟರ್, ಸಹಾಯಕ ಮೀನುಗಾರಿಕೆ ಡೈರಕ್ಟರ್, ಮೀನುಗಾರಿಕೆಯ ಅಧಿಕಾರಿ, ಮೀನುಗಾರಿಕೆಯ ಸುಪರಿಂಟೆಂಡೆಂಟ್ಸ್**

ಈ ಮೊದಲಾದ ಅಧಿಕಾರಿಗಳಾಗಲು ಆಡಳಿತ ಕಾರಕಗ್ರಹಗಳಾದ ರವಿ, ಮಂಗಳ, ಗುರು ಗ್ರಹಗಳು ಬಲಾಢ್ಯರಿದ್ದು, ಖಾತೆಯ ಕಾರಕನಾದ ಚಂದ್ರನು ಜಲರಾಶಿ ಇಲ್ಲವೆ ಭೂರಾಶಿಯವನಾಗಿದ್ದು ಸ್ಥಾನಬಲದವನಿರ ಬೇಕು, ಹಾಗೂ ಪಾಪಗ್ರಹ ದೃಷ್ಟ ಇಲ್ಲವೆ ದುರ್ಬಲನಿರಕೂಡದು.

**ಶಿಕ್ಷಕ :** ಈ ಖಾತೆಯಲ್ಲಿ ಶಿಕ್ಷಕನೆಂದು ಕೆಲಸ ಮಾಡಲು ಶಿಕ್ಷಕ ಕಾರಕನಾದ ಗುರುವೂ ಖಾತೆಯ ಕಾರಕನಾದ ಚಂದ್ರನೂ ಶಿಕ್ಷಣಸ್ಥಾನವಾದ ಪಂಚಮ, ದ್ವಿತೀಯವೂ ಖಾತೆಯ ಸ್ಥಾನವಾದ ದ್ವಾದಶ ಸುಖಸ್ಥಾನವೂ ಹಾಗೂ ಈ ಸ್ಥಾನಾಧೀಶರೂ ಬಲಾಢ್ಯರಿರಬೇಕು.

**ಅಸಿಸ್ಟಂಟ್ ಇಂಜನಿಯರ್ಸ್, ಜೂನಿಯರ್ ಇಂಜನಿಯರ್ಸ್, ಮೆಕ್ಯಾನಿಕಲ್ ಫೋರ್‌ಮನ್, ಯಾರ್ಡ ಆಫೀಸರ್, ಮೀನುಗಾರಿಕೆ ಇನ್ಸಪೆಕ್ಟರ್ ಮೊದಲಾದ ತಾಂತ್ರಿಕ ಕೆಲಸಗಾರರು**

ಈ ಮೊದಲಾದ ಹುದ್ದೆಗಳನ್ನು ಪಡೆಯಲು ಖಾತೆಯ ಕಾರಕನಾದ ಚಂದ್ರನೂ ಇಂಜನಿಯರ್ ಕಾರಕನಾದ ಮಂಗಳನೂ ಬಲಾಢ್ಯರಿರಬೇಕು.

ಸಹಕಾರಿ ಸಂಘದ ನೌಕರದಾರರು ಹಾಗೂ ಇತರ ಕಾರಕೂನರು (Ministerial)

ಈ ಮೊದಲಾದ ಹುದ್ದೆಗಳನ್ನು ಪಡೆಯಲು ಖಾತೆಯ ಕಾರಕನಾದ ಚಂದ್ರನೂ ವೃತ್ತಿ ಕಾರಕನಾದ ಬುಧನೂ ಬಲಾಢ್ಯರಿದ್ದು, ಅನೇಕ ಗ್ರಹಗಳು ಹೆಚ್ಚಾಗಿ ಸ್ಥಿರರಾಶಿಯಲ್ಲಿ ಇರುವುವು.

## ೩೦ ಚಾರಿಟಿ ಕಮಿಶನರ್ ಖಾತೆ

(Endowment Department)

ಸಾರ್ವಜನಿಕ ಗುಡಿಗೋಪುರಗಳ ರಕ್ಷಣೆ, ಧರ್ಮಶಾಲೆಗಳ ವ್ಯವಸ್ಥೆ, ದೇವಸ್ಥಾನ ಕಮೀಟಿಗಳ, ಸಂಘ-ಸಂಸ್ಥೆಗಳ ಮೇಲ್ವಿಚಾರಣೆ, ಟ್ರಸ್ಟುಗಳನ್ನು ರಿಜಿಸ್ಟರ್ ಮಾಡುವುದು,ಸಂಸ್ಕೃತ ಪಾಠಶಾಲೆ, ಕಾಲೇಜುಗಳ ಮೇಲ್ವಿಚಾರಣೆ ಈ ಎಲ್ಲ ಸಂಗತಿಗಳು ಈ ಖಾತೆಯ ಅಧಿಕಾರಿಗಳ ಕಕ್ಷೆಯಲ್ಲಿ ಬರುವುದರಿಂದ ಖಾತೆಯಕಾರಕ ಗ್ರಹ, ಲಗ್ನ, ಸ್ಥಾನಾದಿಗಳನ್ನು ನೋಡುವಾ.

ಕಾರಕಗ್ರಹ : ಧರ್ಮ, ಆಚಾರ, ವಿಚಾರ, ದೇವಸ್ಥಾನ, ದೇವ ಭಾಷೆಯಾದ ಸಂಸ್ಕೃತ ಈ ಎಲ್ಲ ವಿಷಯಗಳ ಕಾರಕಗ್ರಹವೆಂದರೆ ಗುರು. ಆದುದರಿಂದ ಗುರುವೇ ಈ ಖಾತೆಯ ಕಾರಕಗ್ರಹವಾಗುವನು.

ಸ್ಥಾನ : ಗುಡಿ, ಗುಂಡಾರ, ದಾನ-ಧರ್ಮ, ಧಾರ್ಮಿಕ ಈ ಎಲ್ಲವು ಗಳ ಕಾರಕಸ್ಥಾನವೆಂದರೆ ನವಮಸ್ಥಾನವಿರುವುದರಿಂದ ನವಮಸ್ಥಾನವೇ ಈ ಖಾತೆಯ ಕಾರಕಸ್ಥಾನ. ಆದುದರಿಂದ ನವಮೇಶ ಹಾಗೂ ಗುರು ಬಲಾಢ್ಯ ರಿರುವ ಜಾತಕನು ಈ ಖಾತೆಯಲ್ಲಿ ಅಭಿವೃದ್ಧಿ ಹೊಂದುವನು.

ಲಗ್ನ : ಮೇಷ, ಕರ್ಕ ಈ ಲಗ್ನಗಳು ತದನಂತರ ಧನು, ಮೀನ, ಸಿಂಹ, ಮಿಥುನ, ಕನ್ಯಾ ಈ ಲಗ್ನಗಳು ಅನುಕ್ರಮವಾಗಿ ಖಾತೆಯಕಾರಕ ಲಗ್ನಗಳಾಗುವುವು.

**ರಾಶಿ :** ರಾಶಿದೃಷ್ಟಿಯಿಂದ ನೋಡಿದರೆ ಇಂತಹ ರಾಶಿಯವರೇ ಈ ಖಾತೆಯಲ್ಲಿರಬೇಕೆಂಬ ನಿಯಮವಿಲ್ಲದಿದ್ದರೂ ಹೆಚ್ಚಾಗಿ ವೃಷಭ, ಕನ್ಯಾ, ಕರ್ಕ, ಮಕರ, ಮೀನ, ಸಿಂಹ. ಧನು ಈ ರಾಶಿಯವರೇ ಇರುವುದು ಕಂಡುಬರುತ್ತದೆ.

**ಚಾರಿಟಿ ಕಮೀಷನರ್, ಸಹಾಯಕ ಚಾರಿಟಿ ಕಮೀಷನರ್**

ಈ ಮೊದಲಾದ ಉಚ್ಚ ಅಧಿಕಾರಿಗಳ ಜಾತಕದಲ್ಲಿ ಈ ಕೆಳಗೆ ಕಾಣಿಸಿದ ಯೋಗಗಳು ಇರುತ್ತವೆ.

(i) ಹೆಚ್ಚಾಗಿ ಮೇಷ, ಕರ್ಕ, ಸಿಂಹ, ಮೀನ, ಮಿಥುನ ಈ ಲಗ್ನಗಳೇ ಇರುತ್ತವೆ.

(ii) ಅನೇಕ ಗ್ರಹಗಳು ಪುರುಷರಾಶಿಯಲ್ಲಿರುತ್ತವೆ.

(iii) ಆಡಳಿತ ಕಾರಕಗ್ರಹಗಳು (ಮಂಗಳನ ಹೊರತಾಗಿ) ಬಲಾಢ್ಯವಿರುತ್ತವೆ.

(iv) ಭಾಗ್ಯೇಶ, ಲಗ್ನೇಶ, ಹಾಗೂ ಗುರು ಇವರ ಶುಭಯೋಗ ವಿರುತ್ತದೆ.

**ಕಾರಕೂನ :** ಈ ಖಾತೆಯ ಕಾರಕೂನ ವರ್ಗದವರಿಗೆ ಈ ಕೆಳಗೆ ಕಾಣಿಸಿದ ಯೋಗಗಳಿರುತ್ತವೆ.

(i) ಇತರ ಖಾತೆಗಳ ಕಾರಕೂನಿಕೆಯ ಯೋಗಗಳಂತಿರುತ್ತವೆ.

(ii) ಖಾತೆಯ ಕಾರಕಗ್ರಹವಾದ ಗುರುವು ಕೇವಲ ರಾಶಿಬಲದವನಿದ್ದು ಸ್ಥಾನಬಲದವನಾಗಲಿ ಯೋಗಕಾರಕನಾಗಲಿ ಇರುವುದಿಲ್ಲ.

(iii) ಭಾಗ್ಯೇಶನೂ ಕೂಡ ರಾಶಿಬಲದವನಿದ್ದು ಸ್ಥಾನಬಲದವನಿರುವುದಿಲ್ಲ.

ಇಂಜನಿಯರ್ಸ್ ಹಾಗೂ ಇನ್ಸಪೆಕ್ಟರುಗಳು

ಈ ಖಾತೆಯಲ್ಲಿ ಇಂಜನಿಯರ್ಸ್ ಹಾಗೂ ಇನ್ಸಪೆಕ್ಟರ್ ಎಂಬ ಹುದ್ದೆಗಳಿವೆ. ಈ ಇಂಜನಿಯರ್ಸ್ ಹಾಗೂ ಇನ್ಸಪೆಕ್ಟರ್ಸ್ ವೃತ್ತಿಕಾರಕ ಗ್ರಹವಾದ ಮಂಗಳನು ಕೇವಲ ರಾಶಿಬಲದವನಿದ್ದು ಸ್ಥಾನಬಲದವನಿರುವು ದಿಲ್ಲ. ಇದರಂತೆಯೇ ಗುರುವೂ ಕೂಡ ರಾಶಿಬಲದವನು ಇದ್ದು ಸ್ಥಾನಬಲ ವಿರುವುದಿಲ್ಲ. ಈ ಎರಡೂ ಗ್ರಹಗಳ ಶುಭಯೋಗವು ಇವರ ಜಾತಕ ದಲ್ಲಿರುವುದು ಕಂಡುಬರುತ್ತದೆ.

## ೩೧ ಪಾನನಿರೋಧ ಹಾಗೂ ಅಬಕಾರಿ ಖಾತೆ

(Prohibition and Excise Dept.)

ಈ ಎರಡೂ ಖಾತೆಗಳು ಭಿನ್ನ ಭಿನ್ನ ವಿದ್ದರೂ ಜ್ಯೋತಿಷ್ಯದಲ್ಲಿ ಕಾರಕ ಗ್ರಹ ಒಂದೇ ಇರುವುದರಿಂದ ಎರಡನ್ನೂ ಕೂಡಿಸಲಾಗಿದೆ.

ಕಾರಕಗ್ರಹ : ಅಬಕಾರಿ ಖಾತೆಯ ಕಕ್ಷೆಯಲ್ಲಿ ಬರುವ ಮದ್ಯ, ಅಫು, ಗಾಂಜಿ ಮೊದಲಾದ ಮಾದಕ ಪದಾರ್ಥಗಳ ಮೇಲೆ, (ಪೋಲಿಸ್ ಖಾತೆಯು ಸಂಬಂಧವು ಈ ಖಾತೆಗೆ ಬರುವುದರಿಂದಲೂ) ಮಂಗಳನ ಪ್ರಭುತ್ವ ಇರುವುದರಿಂದಲೂ ಕಾಯ್ದೆಯನ್ನು ಕಟ್ಟುನಿಟ್ಟಾಗಿ ಅಮಲಿನಲ್ಲಿ ತರುವ ಗುಣಧರ್ಮವು ಮಂಗಳನದಿರುವುದರಿಂದಲೂ ಈ ಖಾತೆಗೆ ಮಂಗಳನೇ ಕಾರಕನಾಗುವನು.

ಇದಲ್ಲದೆ ಫೌಜದಾರಿ ಮೊಕದ್ದಮೆಗಳಿಗೂ ಮಂಗಳನೇ ಕಾರಕ ನಾಗುವುದರಿಂದಲೂ ಮಂಗಳನೇ ಈ ಖಾತೆಗೆ ಕಾರಕನೆಂದು ಹೇಳಬಹುದು.

ಮಂಗಳನ ತರುವಾಯ ಶನಿಯೂ ಕೆಲಮಟ್ಟಿಗೆ ಕಾರಕನಾಗುವನು. ಏಕೆಂದರೆ ಸಮಾಜ ವಿಕಾಸಯೋಜನೆ ಹಾಗೂ ಸಮಾಜ ಕಲ್ಯಾಣ ಖಾತೆಗಳ ಕಾರಕನೂ (ಅಬಕಾರಿ ಖಾತೆಯು ಸಂಬಂಧವು ಸಮಾಜ ವಿಕಾಸ ಖಾತೆಗೆ

ಇರುತ್ತದೆ) ಅಬಕಾರಿ–ರೆವ್ವಿನ್ಯೂಗಳ ಕಾರಕನೂ ಹಾಗು ಕಾಯ್ದೆಯ ಕಾರಕನೂ ಆಗಿರುವ ಶನಿಯೂ ಈ ಖಾತೆಗೆ ಕಾರಕನಾಗುವನು.

ಸ್ಥಾನ : ಫೌಜದಾರಿ ಮೊಕದ್ದಮೆಗಳ ಕಾರಕ ಸ್ಥಾನವಾದ ದ್ವಾದಶ ಸ್ಥಾನವೇ ಈ ಖಾತೆಗೆ ಕಾರಕ ಸ್ಥಾನವಿರುತ್ತದೆ.

ಲಗ್ನ : ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮಕರಲಗ್ನವೇ ಹೆಚ್ಚು ಪೂರಕವಿರುತ್ತದೆ. ಮಕರ ಲಗ್ನದ ತರುವಾಯ ಹೆಚ್ಚಾಗಿ ಮೇಷ, ಕರ್ಕ, ಸಿಂಹ, ಧನು, ವೃಶ್ಚಿಕ ಈ ಲಗ್ನದವರು ಇರುವುದು ಕಂಡುಬರುತ್ತದೆ.

ರಾಶಿ : ಈ ಖಾತೆಯಲ್ಲಿ ಕಾರ್ಯ ಮಾಡಲು ಇಂತಹ ರಾಶಿಯವರೇ ಇರಬೇಕೆಂಬ ನಿಯಮವಿಲ್ಲದಿದ್ದರೂ ಹೆಚ್ಚಾಗಿ ಸಿಂಹ, ಮಕರ, ಕುಂಭ, ವೃಶ್ಚಿಕ, ಮಿಥುನ ಈ ರಾಶಿಯವರೇ ಅಧಿಕ ಪ್ರಮಾಣದಲ್ಲಿರುವುದು ಕಂಡು ಬರುತ್ತದೆ.

### ಕಮೀಷನರ್, ಅಸಿಸ್ಟಂಟ್ ಕಮೀಷನರ್, ಡೈರೆಕ್ಟರ್

ಈ ಮೊದಲಾದ ಅಧಿಕಾರಿಗಳು ಐ. ಎ. ಎಸ್.ದವರು ಇರುವ ಕಾರಣ ಇವರ ಜಾತಕದಲ್ಲಿ ಐ. ಎ. ಎಸ್. ಯೋಗಗಳ ಹೊರತಾಗಿ, ಮಂಗಳನು ಬಲಾಢ್ಯನಿರುವ ದ್ವಾದಶ ಸ್ಥಾನವು ದೂಷಿತವಿರದ ಜಾತಕನು ಇಂತಹ ಹುದ್ದೆಯನ್ನು ಪಡೆಯಬಲ್ಲರು.

### ಎಕ್ಸೈಸ್ ಸುಪರಿಂಟೆಂಡೆಂಟ್, ಜಿಲ್ಲಾ ಅಬಕಾರಿ ಅಧಿಕಾರಿಗಳು, ಅಬಕಾರಿ ಇನ್ಸಪೆಕ್ಟರ್ ಹಾಗೂ ಸಬ್‌ಇನ್ಸಪೆಕ್ಟರ್ ಪಾನಪ್ರತಿಬಂಧ ಅಧಿಕಾರಿ

ಈ ಮೊದಲಾದ ಹುದ್ದೆಯನ್ನು ಪಡೆಯಲು ಜಾತಕದಲ್ಲಿ ಖಾತೆಯ ಕಾರಕನೂ ವಸ್ತುಗಳ ಕಾರಕನೂ ಹುದ್ದೆಯ ಕಾರಕನೂ ಆದ ಮಂಗಳನು ಸ್ಥಾನಬಲದವನೂ ರಾಶಿಬಲದವನೂ ಇದ್ದು ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುತ್ತವೆ.

ಇವರ ಜಾತಕದಲ್ಲಿ ಭಾಗ್ಯೇಶ, ಪಂಚಮೇಶರು ದುರ್ಬಲರಿದ್ದು ಲಗ್ನೇಶ, ಷಷ್ಠೇಶ, ದ್ವಾದಶೇಶರು ಬಲಾಢ್ಯರಿರುತ್ತಾರೆ.

ದಶಮೇಶನು ಬಲಾಢ್ಯನಿಲ್ಲದಿದ್ದರೂ ದುರ್ಬಲನಿರುವುದಿಲ್ಲ. ಇವರದು ಯಾವಾಗಲೂ ಫಿರ್ತಿ ಕೆಲಸವಿರುವುದರಿಂದ ಅನೇಕ ಗ್ರಹಗಳು ಲಗ್ನ, ಭಾಗ್ಯ, ಸಪ್ತಮ, ತೃತೀಯ, ದ್ವಾದಶದಲ್ಲಿರುವುವು. ವಿಶೇಷವಾಗಿ ದ್ವಾದಶ, ತೃತೀಯ, ಲಗ್ನ ಈ ಸ್ಥಾನಗಳಲ್ಲಿರುವುದು ಹೆಚ್ಚಾಗಿ ಕಂಡುಬರುತ್ತದೆ.

### ಇತರ ಮಿನಿಸ್ಟೀರಿಯಲ್

ಈ ಖಾತೆಯ ಇತರ ಕೆಲಸಗಾರರ ಜಾತಕದಲ್ಲಿ ಮಂಗಳನು ಸ್ಥಾನ ಬಲವಿಲ್ಲದೆ ರಾಶಿಬಲದವನೂ ಅಥವಾ ಅಸ್ತ, ವಕ್ರ, ಬಾಲ್ಯಾವಸ್ಥೆಯ, ವೃದ್ಧಾಪ್ಯದ ಶನಿದೃಷ್ಟಿತನಿರುವನು.

ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿರುವುವು. ಇದಲ್ಲದೆ ಯೋಗ ಕಾರಕ ಗ್ರಹಗಳು ದುರ್ಬಲವಿರುತ್ತವೆ.

## ೩೨ ಲಂಚನಿರ್ಮೂಲನ ಇಲ್ಲವೆ ಲಂಚನಿರೋಧ ಖಾತೆ

( Anti Corruption Department )

ಲಂಚ ನಿರ್ಮೂಲನೆ ಇಲ್ಲವೆ ನಿರೋಧಕ್ಕಾಗಿ ದೇಶದಲ್ಲಿ ಸಾಕಷ್ಟು ಚರ್ಚೆಯಾಗಹತ್ತಿದೆ. ಸರಕಾರವು ಕೂಡ ವಿಶ್ವಪ್ರಯತ್ನ ಮಾಡಹತ್ತಿದೆ. ಇದಕ್ಕಾಗಿ ಪ್ರತ್ಯೇಕವಾದ ಖಾತೆಯನ್ನೇ ನಿರ್ಮಿಸಿದ್ದಾರೆ. ಇಷ್ಟಾದರೂ ನಿರೀಕ್ಷಿಸಿದಷ್ಟು ಫಲವೂ ಪರಿಣಾಮವೂ ಆದುದು ಕಂಡುಬಂದಿಲ್ಲ.

ಎಷ್ಟೋ ಜನರು ವಿನಾಕಾರಣ ತೊಂದರೆಯನ್ನು ಎದುರಿಸುತ್ತಿದ್ದರೆ ಕೆಲ ಜನ ಲಂಚ ತೆಗೆದುಕೊಂಡರೂ ಕಾಯಿದೆಯ ಕಣ್ಣಿಗೆ ಮಣ್ಣೆರಚಿ ಕೈಕೊಡುವವರೂ ಇದ್ದಾರೆ.

ಫಲಜ್ಯೋತಿಷ್ಯವನ್ನು ಹೇಳುವ ಜ್ಯೋತಿಷಿಗಳು ಇಂಥ ಸಮಸ್ಯೆಗಳನ್ನು ಮೇಲಿಂದ ಮೇಲೆ ಬಿಡಿಸಬೇಕಾಗುತ್ತದೆ. ಲಂಚ ತೆಗೆದುಕೊಳ್ಳುವ ವ್ಯಕ್ತಿಗಳ ಜಾತಕದ ಯೋಗಗಳು ಹೇಗಿರುವವು, ಯಾರು ಪಾರಾಗುವರು, ಯಾರು ದಕ್ಕಿಸಿಕೊಳ್ಳುವರು, ಯಾರು ಸಿಕ್ಕುಬೀಳುವರು, ಯಾರು ವಿನಾ ಕಾರಣ ಸಿಕ್ಕುಬೀಳುವರು ಎಂಬುದನ್ನು ಕೂಡ ಹೇಳಬಲ್ಲ ಸಮರ್ಥರು ಇವರಿರುವದರಿಂದ ಸರಕಾರವು ಕೂಡ, ಇಂಥ ಸಮಾಜಕ್ಕೆ ಉಪಯುಕ್ತ ಬೀಳುವ ಜನರನ್ನು ನಿರ್ಲಕ್ಷಿಸದೆ ಇವರಿಗೆ ಲಂಚ ನಿರೋಧ ಖಾತೆಯ ಉಚ್ಚ ಅಧಿಕಾರಿಯನ್ನಾಗಲಿ, ಗುಪ್ತ ಪೋಲೀಸ ಖಾತೆಯಲ್ಲಿ ಅಧಿಕಾರಿಗಳನ್ನಾಗಲಿ ನಿಯಮಿಸಿ ಇವರ ಸೆರವನ್ನು ಪಡೆಯುವದರಲ್ಲಿ ದೇಶಕ್ಕೂ ಸಮಾಜಕ್ಕೂ ಕಲ್ಯಾಣವಾಗಬಹುದೆಂಬ ಮಾತಿನಲ್ಲಿ ಸಂದೇಹವಿಲ್ಲವೆಂದು ಸರಕಾರಕ್ಕೆ ಸೂಚಿಸಬಯಸುತ್ತೇವೆ.

ಇದು ಏನೇ ಇರಲಿ, ಪ್ರಸ್ತುತ ಈ ಪ್ರಕರಣದಲ್ಲಿ ಲಂಚ ನಿರ್ಮೂಲನೆ ಅಥವಾ ನಿರೋಧಕ ಖಾತೆಯಲ್ಲಿ ಕೆಲಸ ಮಾಡುವವರ ಜಾತಕದಲ್ಲಿಯ ಗ್ರಹಯೋಗಗಳು ಎಂತಿರಬೇಕು, ಜ್ಯೋತಿಷ್ಯದ ಭಾಷೆ ಏನು ಎಂಬುದನ್ನು ನೋಡುವಾ.

ಸ್ಥಾನ : ಈ ಖಾತೆಯಲ್ಲಿ ನೌಕರಿ ಮಾಡುವವರಲ್ಲಿರುವ ಯೋಗದ (ಜಾತಕದ) ವೈಶಿಷ್ಟ್ಯವೆಂದರೆ ಕಾರಕ ಗ್ರಹ, ಕಾರಕ ಲಗ್ನ, ಕಾರಕ ರಾಶಿ, ಇವುಗಳಿಗಿಂತ ಕಾರಕ ಸ್ಥಾನವೇ ಪ್ರಾಮುಖ್ಯವಿರುತ್ತದೆ.

ಈ ಖಾತೆಯಲ್ಲಿ ಕೆಲಸ ಮಾಡಲು ಕಾರಕಸ್ಥಾನ ಯಾವದು ಎಂಬುದು ಕ್ಲಿಷ್ಟಕರವಾದ, ಕಠಿಣವಾದ ಸಮಸ್ಯೆಯಾಗಿದ್ದರೂ ತೀರ ಮಹತ್ವದ್ದು ಇರುತ್ತದೆ. ಜಾತಕದ ಅಷ್ಟಮಸ್ಥಾನವೇ ಕಾರಕಸ್ಥಾನವೆಂದು ಕೆಲ ಜ್ಯೋತಿಷಿಗಳ ಅಭಿಪ್ರಾಯವಿದ್ದರೆ, ಜಾತಕದ ದ್ವಾದಶ ಸ್ಥಾನವೇ ಕಾರಕ ಸ್ಥಾನವೆಂದು ಮತ್ತೆ ಕೆಲ ಜ್ಯೋತಿಷಿಗಳ ಅಭಿಪ್ರಾಯವಿದೆ.

ಜಾತಕದ ಅಷ್ಟಮಸ್ಥಾನವೆಂದರೆ ಸಟ್ಟಾ, ಲಾಟರಿ, ಗುಪ್ತಧನ, ಮೃತ್ಯುಪತ್ರ, ವರದಕ್ಷಿಣೆ, ವಾರಸಾ, ಕಾಳಾಬಜಾರ, ಜೂಜು, ಪಂದ್ಯ,

ಲಂಚದಿಂದ ಹಣ ಮೊದಲಾದ ವಿಷಯಗಳನ್ನು ಪರಿಶೀಲಿಸಬೇಕಾಗುತ್ತದೆ. ಆದುದರಿಂದ ಈ ಸ್ಥಾನವನ್ನೇ ಈ ಖಾತೆಯ ಕಾರಕಸ್ಥಾನವೆಂದು ಒಂದು ವರ್ಗದ ಜ್ಯೋತಿಷಿಗಳ ಅಭಿಪ್ರಾಯ.

ಜಾತಕದ ದ್ವಾದಶಸ್ಥಾನವೆಂದರೆ ಶಿಕ್ಷೆ, ದಂಡ, ಲಂಚದಲ್ಲಿ ಸಿಕ್ಕು ಬೀಳುವಿಕೆ, ಇಲ್ಲವೆ ಪಾರಾಗುವಿಕೆ, ಕಾಲಾಬಜಾರ ಹಾಗೂ ಫೌಜದಾರೀ ಮೊಕದ್ದಮೆಗಳಲ್ಲಿ ಸಿಕ್ಕು ಬೀಳುವಿಕೆ ಮತ್ತು ಜೇಲು, ಕೈದಿ ಈ ಮೊದಲಾದ ವಿಷಯಗಳನ್ನು ಈ ಸ್ಥಾನದಿಂದಲೇ ಪರಿಶೀಲಿಸಬೇಕಾಗುತ್ತದೆ.

ಇನ್ನು ನಮ್ಮ ಅನುಭವದ ಪ್ರಕಾರ ದ್ವಾದಶಸ್ಥಾನವೇ ಈ ಖಾತೆಯ 'ಕಾರಕ' ಸ್ಥಾನವೆನ್ನಬಹುದು. ಹೇಗೆ ರೋಗಿಗಳ ರೋಗವನ್ನು ಶಮನ ಗೊಳಿಸಲು ರೋಗಸ್ಥಾನವಾದ ಷಷ್ಠಮಸ್ಥಾನವೇ ಡಾಕ್ಟರ ಇಲ್ಲವೆ ವೈದ್ಯರಿಗೆ ಪೂರಕವೂ ಬಲಾಢ್ಯವೂ ಕಾರಕವೂ ಆಗುವದೋ ಹಾಗೆಯೆ ಲಂಚದಲ್ಲಿ ಸಿಕ್ಕು ಬೀಳುವಂತೆ ಮಾಡಲು ಲಂಚನಿರೋಧಕ ಅಧಿಕಾರಿಗಳಿಗೆ ಇಲ್ಲವೆ ಲಂಚ ನಿರೋಧಕ ನೌಕರ ವರ್ಗದವರಿಗೆ ಲಂಚದಲ್ಲಿ ಸಿಕ್ಕುಬೀಳುವಂತೆ ಮಾಡುವ ಸ್ಥಾನವಾದ 'ದ್ವಾದಶ'ಸ್ಥಾನವೇ ಪೂರಕವೂ ಕಾರಕವೂ ಆಗುತ್ತದೆ. ಆದುದರಿಂದ 'ದ್ವಾದಶ'ಸ್ಥಾನವೂ ದ್ವಾದಶೇಶನೂ ಬಲಾಢ್ಯನಿರಬೇಕು. ಇವರ ಸಂಗಡ ಅಷ್ಟಮೇಶನೂ ಕೂಡ ಬಲಾಢ್ಯನಿದ್ದ ಜಾತಕನು ಒಳ್ಳೇ ದಕ್ಷ ಅಧಿಕಾರಿಯಾಗಬಲ್ಲ.

ಕಾರಕಗ್ರಹ : ಕಾನೂನನ್ನು ಕಟ್ಟುನಿಟ್ಟಾಗಿ ಅಮಲಿನಲ್ಲಿ ತರುವದಕ್ಕೆ ಸಹಾಯಕವಾಗುವ ಕಾರ್ಯವು 'ಮಂಗಳ'ನ ಗುಣಧರ್ಮವಿರುವದರಿಂದ, ಈ ಖಾತೆಗೆ ಮಂಗಳನೇ ಕಾರಕನಾಗುವನು.

ಕಾಯದೆ ಕಾರಕ ಗ್ರಹವಾದ 'ಶನಿ'ಯೂ ಕೆಲಮಟ್ಟಿಗೆ ಕಾರಕ ನಾಗುವನು.

ಲಗ್ನ : ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮಕರ ಹಾಗೂ ವೃಶ್ಚಿಕ ಲಗ್ನಗಳು ಕಾರಕವಿರುವವು. ಇವುಗಳ ನಂತರ ಮೇಷ, ಕಕ, ಸಿಂಹ, ಧನು ಈ ಲಗ್ನಗಳು ಕಾರಕವಾಗುವವು.

ರಾಶಿ : ಲಂಚ ನಿರೋಧಕ ಖಾತೆಯಲ್ಲಿಯ ಕೆಲಸ ಬಹಳ ಸೂಕ್ಷ್ಮವೂ ಚಾಣಾಕ್ಷತನದ್ದೂ ಇದ್ದು ಕೆಲವೊಮ್ಮೆ ಈ ಅಧಿಕಾರಿಗಳು ಸಾಹಸಿಗಳೂ ಧೈರ್ಯವಂತರೂ, ಕಠೋರರೂ ಇರಬೇಕಾಗುವದರಿಂದ ಇಂಥ ಕೆಲಸಗಳಿಗೆ ಈ ಕೆಳಗಿನ ರಾಶಿಯವರೇ ಹೆಚ್ಚು ದಕ್ಷರಿರಬಹುದೆಂದು ಹೇಳಬಹುದಾಗಿದೆ. ಮಿಥುನ, ತುಲಾ, ಕುಂಭ ಈ ರಾಶಿಯವರು, ತದನಂತರ ವೃಶ್ಚಿಕ, ಮಕರ, ಸಿಂಹ ಈ ರಾಶಿಯವರೂ ಗುಣಾನುಕ್ರಮವಾಗಿ ದಕ್ಷರಿರುವರೆಂದು ಹೇಳಬಹುದು.

## ೩೩ ಇನ್ಸಪೆಕ್ಟರ್ ಜನರಲ್ ಆಫ್ ಪ್ರಿಜನ್ಸ್ ( ಜೇಲು ಖಾತೆ )

ಕಾರಕಗ್ರಹ : ಕೈದಿಯನ್ನು ಅಮಲಿನಲ್ಲಿ ತರಲು ಸಹಾಯಕ ವಾಗುವ ಗುಣಧರ್ಮದ ಕಾರಕಗ್ರಹವಾದ ಮಂಗಳನೇ ಈ ಖಾತೆಯ ಕಾರಕಗ್ರಹವೆಂದು ಹೇಳಬಹುದು.

ಕಾರಕಸ್ಥಾನ : ಸ್ಥಾನದೃಷ್ಟಿಯಿಂದ ನೋಡಿದರೆ ಖಾತೆಯ ಕಾರಕ ಸ್ಥಾನವೆಂದರೆ ದ್ವಾದಶಸ್ಥಾನವಾಗುತ್ತದೆ. ಏಕೆಂದರೆ ಶಿಕ್ಷೆ, ದಂಡ, ಜೇಲು, ಕೈದು, ಫೌಜುದಾರಿ ಮೊಕದ್ದಮೆ ಈ ಎಲ್ಲ ಸಂಗತಿಗಳ ಕಾರಕ ಸ್ಥಾನವಾದ ದ್ವಾದಶಸ್ಥಾನವೇ ಕಾರಕಸ್ಥಾನವಾಗುವುದು. ಆದುದರಿಂದ ದ್ವಾದಶೇಶನೂ ಹಾಗೂ ಮಂಗಳನೂ ಬಲಾಢ್ಯನಿರುವ ಜಾತಕನು ಯಶಸ್ವೀ ಅಧಿಕಾರಿ ಯಾಗಬಲ್ಲನು.

ಲಗ್ನ : ಲಗ್ನದ ದೃಷ್ಟಿಯಿಂದ ನೋಡಿದರೆ ಮಕರ,ವೃಶ್ಚಿಕ, ಮೇಷ, ಕರ್ಕ, ಸಿಂಹ, ಧನು ಈ ಲಗ್ನಗಳು ಗುಣಾನುಕ್ರಮವಾಗಿ ಕಾರಕವಾಗುವವು.

ರಾಶಿ : ರಾಶಿದೃಷ್ಟಿಯಿಂದ ನೋಡಿದರೆ ಪ್ರತಿನಿತ್ಯ ಕೈದಿಗಳೊಡನೆ ಸಂಬಂಧವಿರಬೇಕಾಗುವುದರಿಂದ ನಿರ್ದಿಷ್ಟವಾದ ರಾಶಿಯವರೇ ಇರಬೇಕೆಂಬ ನಿಯಮವಿದೆ.

ಸಿಂಹ, ಧನು, ಮಿಥುನ, ತುಲಾ, ಕುಂಭ, ವೃಶ್ಚಿಕ ಮಕರ ಈ ರಾಶಿಯವರೇ ಹೆಚ್ಚಾಗಿರುವುದು ಕಂಡುಬರುತ್ತದೆ.

### ಸುಪರಿಂಟೆಂಡೆಂಟ ಹಾಗೂ ಜೇಲರ್

ಖಾತೆಯಲ್ಲಿ ಅತಿ ಮಹತ್ವದ ವ್ಯಕ್ತಿಗಳು ಸಾರ್ವಜನಿಕರ ಚಿರಪರಿಚಿತರೂ ಖಾತೆಯ ಬೆನ್ನೆಲುಬುಗಳೂ ಅಂದರೆ ಈ ಹುದ್ದೆಯ ಅಧಿಕಾರಿಗಳು. ಇವರು ಮೇಲ್ವಿಚಾರಕರೂ ಆಡಳಿತಗಾರರೂ (Cfficial and Executive) ಇರುವರಲ್ಲದೆ ಕೈದಿಗಳೊಂದಿಗೆ ನಿಕಟಸಂಬಂಧವಿರುವುದರಿಂದಲೂ ಇವರ ಜಾತಕದಲ್ಲಿಯ ಯೋಗಗಳು ಈ ಕೆಳಗೆ ಕಂಡಂತೆ ಇರುತ್ತವೆ.

೧) ಖಾತೆಯ ಕಾರಕಗ್ರಹವಾದ ಮಂಗಳನು ಬಲಾಢ್ಯನೂ ಯೋಗಕಾರಕನೂ ಇರುವನಲ್ಲದೆ ಹೆಚ್ಚಾಗಿ ಲಗ್ನ, ತೃತೀಯ, ಷಷ್ಠ, ದಶಮ ಈ ಸ್ಥಾನಗಳಲ್ಲಿಯೇ ಇರುತ್ತಾನೆ. ಇದಲ್ಲದೆ ತೃತೀಯೇಶ ಹಾಗೂ ಷಷ್ಠೇಶರು ಬಲಾಢ್ಯರಿರುತ್ತಾರೆ.

೨) ಈ ಹುದ್ದೆಯ ಜನರು ಹೆಚ್ಚಾಗಿ ಮೇಷ, ಮಿಥುನ, ಸಿಂಹ, ವೃಶ್ಚಿಕ, ಧನು, ಮಕರ ಈ ರಾಶಿಯವರಿರುತ್ತಾರೆ.

೩) ದ್ವಾದಶೇಶ ಹಾಗೂ ಮಂಗಳನ ಶುಭಸಂಬಂಧವಿರುತ್ತದೆ.

೪) ಗುರು-ರವಿಗಳಿಗಿಂತ ಮಂಗಳನೇ ಹೆಚ್ಚು ಬಲಾಢ್ಯನಿರುತ್ತಾನೆ.

೫) ಅನೇಕ ಗ್ರಹಗಳು ಹೆಚ್ಚಾಗಿ ಪುರುಷರಾಶಿಯಲ್ಲಿರುತ್ತವೆ.

೬) ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನದವರೇ ಹೆಚ್ಚಾಗಿರುತ್ತಾರೆ.

### ಶಿಕ್ಷಕ ವರ್ಗ

ಈ ಖಾತೆಯಲ್ಲಿ ಶಿಕ್ಷಕ ಇಲ್ಲವೆ ಇನ್ಸಪೆಕ್ಟರ ಎಂಬ ಹುದ್ದೆಗಳಿರುತ್ತವೆ. ಇವರ ಜಾತಕದಲ್ಲಿ ಗುರು, ಪಂಚಮೇಶ, ದ್ವಿತೀಯೇಶ ಇವರು ಕೇವಲ

ರಾಶಿಬಲದವರಿದ್ದು ಹೆಚ್ಚಾಗಿ ಮಂಗಳನು ದುರ್ಬಲನಿರುತ್ತಾನೆ. ಇಲ್ಲವೆ ಯೋಗಕಾರಕ ಮಂಗಳನಿದ್ದು ಅಸ್ತ, ವಕ್ರ, ವೃದ್ಧಾಪ್ಯದಲ್ಲಿರುತ್ತಾನೆ.

ಕಾರಕೂನ

ಇತರ ಖಾತೆಯ ಕಾರಕೂನರಂತೆಯೇ ಇವರ ಜಾತಕದಲ್ಲಿ ಯೋಗಗಳಿದ್ದು ಖಾತೆಯ ಕಾರಕ ಗ್ರಹ, ಲಗ್ನ, ರಾಶ್ಯಾದಿಗಳು ಪೂರಕವಿರುತ್ತವೆ.

## ೩೪. ರೀಜನಲ್ ಟ್ರಾನ್ಸಪೋರ್ಟ ಆಫೀಸ

( Motor-vehicle Transport Department )

ದೇಶದಲ್ಲಿಯ ಇಲ್ಲವೆ ಪ್ರಾಂತ ( ರಾಜ್ಯ ) ದಲ್ಲಿಯ ಯಾವದೇ ಮೋಟರಗಳು, ಟ್ರಕ್ಕುಗಳು, ಕಾರುಗಳು, ಸ್ಕೂಟರುಗಳು ಮೊದಲಾದ ವಾಹನಗಳ ಡ್ರೈವಿಂಗ ಲೈಸನ್ಸ ಮೊದಲಾದ ವಿಷಯಗಳ ಸಂಬಂಧ ಈ ಖಾತೆಗಿರುತ್ತದೆ.

ಮೊದಲು ಈ ಖಾತೆಯು ಪೋಲೀಸ ಹಾಗೂ ರೆವಿನ್ಯೂ ಹೀಗೆ ಇಬ್ಬಗೆಯ ಆಧೀನದಲ್ಲಿತ್ತು. ೧–೪–೧೯೫೭ ರಿಂದ ಗ್ರಹಮಂತ್ರಿ ಶಾಖೆಯ ಆಧೀನದಲ್ಲಿ ಸ್ವತಂತ್ರವಾದ ಖಾತೆಯನ್ನೇ ನಿರ್ಮಿಸಲಾಗಿದೆ. ಇದು 'ಕಮೀಶನರ ಫಾರ ಟ್ರಾನ್ಸಪೋರ್ಟ' ಎಂಬ ಅತ್ಯುನ್ನತ ಅಧಿಕಾರಿಯ ಕೈಯಲ್ಲಿರುವದು.

ಕಾರಕಗ್ರಹ : ಮೋಟಾರ ಮೊದಲಾದ ಯಂತ್ರಗಳಿಗೆ ಸಂಬಂಧಿಸಿದ ವಿಷಯವಿರುವದರಿಂದ ಮಂಗಳನೇ ಈ ಖಾತೆಗೆ ಕಾರಕಗ್ರಹವೆಂದು ಹೇಳಬಹುದು.

ಸ್ಥಾನ : ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಉದ್ಯೋಗದ ಸ್ವಾಭಾವಿಕ ಸ್ಥಾನವಾದ ದಶಮಸ್ಥಾನವೇ ಈ ಖಾತೆಯ ಕಾರಕಸ್ಥಾನವಾಗುವದು.

ಲಗ್ನ : ಲಗ್ನದ ದೃಷ್ಟಿಯಿಂದ ನೋಡಿದರೆ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಲಗ್ನಗಳೇ ಈ ಖಾತೆಯ ಕಾರಕ ಲಗ್ನಗಳೆಂದು ಹೇಳಬಹುದು.

ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಇಂಥ ರಾಶಿಯವರೇ ಇರಬೇಕೆಂಬ ನಿಯಮವಿಲ್ಲ.

### ರೀಜನಲ್ ಟ್ರಾನ್ಸಪೋರ್ಟ ಆಫೀಸರ, (R. T. O.) ಹಾಗು ಅಸಿಸ್ಟಂಟ ರೀಜನಲ್ ಟ್ರಾನ್ಸಪೋರ್ಟ ಆಫೀಸರ (A. R. T. O.)

ಇವರೇ ಈ ಖಾತೆಯ ಬೆನ್ನೆಲುಬಿನಂತಿರುವ ಈ ಅಧಿಕಾರಿಗಳ. ಇವರ ಯೋಗಗಳು ಈ ಕೆಳಗಿನಂತಿವೆ:

೧) ಆಡಳಿತಕಾರಕ ಗ್ರಹಗಳು ಬಲಾಢ್ಯವಿರುತ್ತವೆ.

೨) ಎಕ್ಸಿಕ್ಯೂಟಿವ್ಹ ಹಾಗೂ ಮಶಿನರಿ ಕಾರಕಗ್ರಹವಾದ ಮಂಗಳನು ಬಲಾಢ್ಯನಿರುತ್ತಾನೆ. (ರಾಶಿಬಲದವ ಹಾಗೂ ಸ್ಥಾನ ಬಲದವ, ಯೋಗಕಾರಕ).

೩) ಈ ಅಧಿಕಾರಿಗಳು ಹೆಚ್ಚಾಗಿ ಪುರುಷ ರಾಶಿಯವರಿರುತ್ತಾರೆ,

೪) ಇವರು ಹೆಚ್ಚಾಗಿ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನದವರಿರುತ್ತಾರೆ.

### ಮೋಟರ ವ್ಹೀಕಲ್ ಇನ್ಸಪೆಕ್ಟರ, ಟೆಕ್ನಿಕಲ್ ಅಸಿಸ್ಟಂಟ

(L. M. E.) ಟ್ರೇನಿಂಗ ಹೊಂದಿದ ವ್ಯಕ್ತಿಗಳೇ ಈ ಹುದ್ದೆಯನ್ನು ನಿರ್ವಹಿಸಬೇಕಾಗುವದರಿಂದ (L.M.E.) ವಿದ್ಯೆಯ ಕಾರಕನೂ, ಸಂಪೂರ್ಣ (Outdoor Executive work) ದ ಕಾರಕನೂ ಆದ ಮಂಗಳನೇ ಈ ಹುದ್ದೆಯ ಕಾರಕಗ್ರಹನಾಗುವನು. ಮಂಗಳ ಬಲಾಢ್ಯನಿರದೆ ಯಾರೂ ಈ ಹುದ್ದೆಯನ್ನು ಕೈಕೊಳ್ಳಲಾರರು.

ಈ ಹುದ್ದೆಯ ಲಗ್ನ, ರಾಶಿ, ಸ್ಥಾನಗಳೂ ಕೂಡ (Regional Transport) ಅಧಿಕಾರಿಗಿರುವಂತೆಯೇ ಇರುವವು. ಅನೇಕ ಗ್ರಹಗಳು ಲಗ್ನ, ಭಾಗ್ಯ, ತೃತೀಯ, ಸಪ್ತಮ, ವ್ಯಯ ಸ್ಥಾನದಲ್ಲಿರುವವು. ಹಾಗೂ ಅನೇಕ ಗ್ರಹಗಳು ಹೆಚ್ಚಾಗಿ ಚರರಾಶಿಯಲ್ಲಿರುವವು. ಚಂದ್ರ ಹಾಗೂ ಲಗ್ನವು ಕೂಡ ಚರರಾಶಿಯಲ್ಲಿರುತ್ತವೆ.

ಟ್ರಾನ್ಸ್‌ಪೋರ್ಟ ಕಮೀಶನರ,
ಅಸಿಸ್ಟಂಟ ಟ್ರಾನ್ಸ್‌ಪೋರ್ಟ ಕಮೀಶನರ

ಈ ಮೊದಲಾದ ಅಧಿಕಾರಿಗಳಿಗೆ ಅಧಿಕಾರಿ ಹಾಗೂ ಮೇಲ್ವಿಚಾರಣಾ ಕಾರಕಗ್ರಹವಾದ ರವಿ-ಗುರುಗಳು ಬಲಾಢ್ಯರಿದ್ದು (ಸ್ಥಾನಬಲ ಹಾಗೂ ಯೋಗಕಾರಕ ಮತ್ತು ರಾಶಿಬಲ) ಮಂಗಳನು ಕೇವಲ ರಾಶಿಬಲದವ ನಿರುತ್ತಾನೆ. ಆಡಳಿತಕ್ಕೆ ಇರುವ ಯೋಗಗಳು ಇವರ ಜಾತಕದಲ್ಲಿರುತ್ತವೆ.

ಮಿನಿಸ್ಟೀರಿಯಲ್

ಇವರ ಜಾತಕದಲ್ಲಿ ಕಾರಕೂನಿಕೆ ಯೋಗಗಳಿದ್ದು ಖಾತೆಯ ಕಾರಕ ಲಗ್ನ ಸ್ಥಾನಗಳಿದ್ದು ಮಂಗಳನು ಕೇವಲ ರಾಶಿಬಲದವನಿರುತ್ತಾನೆ.

## ೩೫. ರಾಷ್ಟ್ರೀಯ ಔದ್ಯೋಗಿಕ ಖಾತೆ

(ಉದ್ಯೋಗ ವಿನಿಮಯ ಖಾತೆ)

(Department of National Employment Service)

ತಾವೂ ಕೆಲಸಮಾಡುತ್ತಾ, ಮತ್ತೊಬ್ಬರಿಗೆ ಉದ್ಯೋಗದ ಅವಕಾಶ ವನ್ನು ಕಲ್ಪಿಸಿಕೊಡುವ ಕಾರ್ಯವನ್ನೇ ತಮ್ಮ ಕಾರ್ಯವನ್ನಾಗಿಟ್ಟುಕೊಂಡಿರುವ ಈ ನೌಕರದಾರರ ಜಾತಕದ ಯೋಗಗಳು ಹೇಗಿರಬೇಕೆಂದು ಪ್ರಶ್ನಿಸಿದರೆ ಇದಕ್ಕೆ ಉತ್ತರ ಈ ಕೆಳಕಂಡಂತಿರುತ್ತದೆ.

ಈ ವೃತ್ತಿಯು ನಮ್ಮಲ್ಲಿ ಬಹಳ ದಿನಗಳಿಂದಲೂ ಬೆಳೆದುಬಂದಿದೆ. ಹಿಂದೆ ರಾಜ-ಮಹಾರಾಜರುಗಳು ಮಾಡುತ್ತಿದ್ದ ಕಾರ್ಯವನ್ನು ಈಗ ಸರಕಾರದವರೇ ಮಾಡುತ್ತಿದ್ದಾರೆ.

ಎರಡನೆಯ ಮಹಾಯುದ್ಧ ಕೊನೆಗೊಂಡನಂತರ ಅಂದರೆ ದೇಶದಲ್ಲಿಯ ಸೈನ್ಯಖಾತೆಯಲ್ಲಿ ಸೇವೆಯನ್ನು ಸಲ್ಲಿಸಿದ ಕಾರ್ಮಿಕರ ಕಲ್ಯಾಣಕ್ಕೋಸ್ಕರ "ರಿ ಸೆಟಲ್‌ಮೆಂಟ್ ಸರ್ವಿಸ್" ಎಂಬ ಹೆಸರಿನಲ್ಲಿ ಕೇಂದ್ರ ಸರಕಾರದ ಕೂಲಿಕಾರ ಮಂತ್ರಿ ಶಾಖೆಯ ಕೆಳಗೆ ಈ ಖಾತೆಯು ಪ್ರಾರಂಭಿಸಲ್ಪಟ್ಟಿತು.

ಅಮೇರಿಕಾ ದೇಶವು ಎಲ್ಲಕ್ಕಿಂತಲೂ ಮೊದಲು ಈ ಖಾತೆಯ ಉಪಯೋಗ ಮಾಡಿತೆಂದೂ, ಅನಂತರ ಇಂಗ್ಲಂಡು ಇದನ್ನು ಉಪಯೋಗಿಸಿತೆಂದೂ ಕಂಡುಬಂದಿದೆ.

ಕಾರಕಗ್ರಹ: ಈ ಖಾತೆಯ ಕಾರಕಗ್ರಹವೆಂದರೆ ಸ್ವಾಭಾವಿಕವಾಗಿ ಉದ್ಯೋಗದ ಕಾರಕಗ್ರಹವಾದ ಶನಿಯೂ ನೈಸರ್ಗಿಕ ಉದ್ಯೋಗವನ್ನೊದಗಿಸುವ ಪರೋಪಕಾರ ಬುದ್ಧಿಯ ಗುಣಧರ್ಮವುಳ್ಳ ಬುಧನೂ ಕಾರಕ ಗ್ರಹಗಳು.

ಲಗ್ನ: ಲಗ್ನದ ದೃಷ್ಟಿಯಿಂದ ನೋಡಿದರೆ ವೃಷಭ, ಮಿಥುನ, ತುಲಾ, ವೃಶ್ಚಿಕ, ಮಕರ, ಕುಂಭ, ಮೇಷ, ಮೀನ ಈ ಲಗ್ನಗಳೇ ಹೆಚ್ಚು ಕಾರಕವಾಗುವವು.

ಸ್ಥಾನ: ಸ್ಥಾನದೃಷ್ಟಿಯಿಂದ ನೋಡಿದರೆ ಸ್ವಾಭಾವಿಕವಾಗಿ ಉದ್ಯೋಗದ ಸ್ಥಾನವಾದ ದಶಮಸ್ಥಾನವೇ ಈ ಖಾತೆಯ ಕಾರಕಸ್ಥಾನವಾಗುವುದು.

ರಾಶಿ: ರಾಶಿದೃಷ್ಟಿಯಿಂದ ನೋಡಿದರೆ ಈ ಖಾತೆಯಲ್ಲಿ ಇಂತಹ ರಾಶಿಯವರೇ ಇರಬೇಕೆಂಬ ನಿಯಮವಿಲ್ಲ.

ಯೋಗ: ದಶಮೇಶನೂ ಹಾಗು ದಶಮಸ್ಥಾನವೂ ಈ ನೌಕರದಾರರಲ್ಲಿರುವಷ್ಟು ಬಲಾಢ್ಯರು ಬೇರೆ ಯಾವದೇ ಖಾತೆಯ ನೌಕರದಾರರಲ್ಲಿ ಇರುವುದಿಲ್ಲ.

ಡೈರೆಕ್ಟರ್, ಡೆಪ್ಯೂಟಿ ಡೈರೆಕ್ಟರ್, ಜಿಲ್ಲಾ ಔದ್ಯೋಗಿಕ ವಿನಿಮಯ ಅಧಿಕಾರಿ (Dist. Employment Officer), ಔದ್ಯೋಗಿಕ ಅಧಿಕಾರಿ (Employment Officer), ಎಂಪ್ಲಾಯ್‌ಮೆಂಟ್ ಮಾರ್ಕೆಟಿಂಗ್, ಇನ್‌ಫರ್ಮೇಷನ್ ಆಫೀಸರ್

ಈ ಅಧಿಕಾರಿಗಳ ಜಾತಕದಲ್ಲಿ ಈ ಕೆಳಗೆ ಕಾಣಿಸಿದ ಯೋಗಗಳು ಇರುತ್ತವೆ:

(i) ಆಡಳಿತಕಾರಕ ಯೋಗ, ಲಗ್ನ, ಗ್ರಹ, ರಾಶಿಗಳು ಬಲಾಢ್ಯವಿರುತ್ತವೆ.

(ii) ಶನಿ, ಹಾಗೂ ದಶಮೇಶ ಬಲಾಢ್ಯರಿರುತ್ತಾರೆ.

(iii) ಅಷ್ಟಮೇಶ, ದಶಮೇಶ ಇಲ್ಲವೆ ಪಂಚಮೇಶ, ದಶಮೇಶ, ಇಲ್ಲವೆ ಅಷ್ಟಮೇಶ, ಲಾಭೇಶರ ಶುಭ ಸಂಬಂಧ ಅಥವಾ ಸುಯೋಗವಿರುತ್ತದೆ.

(iv) ಇವರ ಜಾತಕದಲ್ಲಿರುವ ವೈಶಿಷ್ಟ್ಯವೆಂದರೆ ದಶಮೇಶ ಹಾಗು ಅಷ್ಟಮೇಶರು ಬಲಾಢ್ಯರಿರುತ್ತಾರೆ.

ಇತರ ಕಾರಕೂನರು

ಸಾಮಾನ್ಯವಾಗಿ ಎಲ್ಲ ಖಾತೆಯ ನೌಕರರ ಯೋಗಗಳು ಇವರಲ್ಲಿದ್ದು ಕೆಲವು ವಿಶಿಷ್ಟಯೋಗಗಳು ಈ ಕೆಳಕಂಡಂತೆ ಇರುತ್ತವೆ.

೧) ದಶಮೇಶ, ಹಾಗು ಅಷ್ಟಮೇಶ ಬಹಳ ಬಲಾಢ್ಯರಿರುತ್ತಾರೆ.

೨) ಶನಿ ಹಾಗು ದಶಮೇಶರ ಶುಭ ಸಂಬಂಧವಿರುತ್ತದೆ.

೩) ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುತ್ತವೆ.

೪) ಲಾಭೇಶ-ದಶಮೇಶರ ಇಲ್ಲವೆ ಲಾಭೇಶ-ಅಷ್ಟಮೇಶರ ಶುಭ ಯೋಗವಿರುತ್ತದೆ.

# ೩೬ ಬಂದರಗಾಹ ಖಾತೆ
## (Ports Dept.)

ಕಾರಕಗ್ರಹ : ನೀರು, ಹಡಗು, ಬೋಟು ಇವುಗಳ ಕಾರಕಗ್ರಹವಾದ ಚಂದ್ರನೇ ಖಾತೆಯ ಕಾರಕಗ್ರಹವೆನ್ನಬಹುದು. ಚಂದ್ರನು ಬಲಾಢ್ಯ ನಿರದೆ ಯಾರೂ ಈ ಖಾತೆಯಲ್ಲಿ ಅಭ್ಯುದಯವನ್ನು ಹೊಂದಲಾರರು.

ಕಾರಕಸ್ಥಾನ : ಚಂದ್ರನ ನೈಸರ್ಗಿಕ ಸ್ಥಾನವಾದ ಸುಖಸ್ಥಾನವೇ ಖಾತೆಯ ಕಾರಕಸ್ಥಾನವಾಗುವುದು. ಸುಖಸ್ಥಾನದ ತರುವಾಯ ಸಮುದ್ರ ಪರ್ಯಟನ ಸ್ಥಾನವಾದ ಸಪ್ತಮಸ್ಥಾನವೂ ಕಾರಕವಾಗುತ್ತದೆ.

ಕಾರಕಲಗ್ನ : ಮೇಷ, ಕರ್ಕ, ತುಲಾ, ವೃಶ್ಚಿಕ, ಮೀನ, ಮಕರ ಈ ಲಗ್ನಗಳೇ ಖಾತೆಯ ಪೂರಕಲಗ್ನಗಳಾಗಿರುತ್ತವೆ.

ಕಾರಕರಾಶಿ : ನಿರ್ದಿಷ್ಟವಾದ ರಾಶಿಯವರೇ ಈ ಖಾತೆಯಲ್ಲಿರಬೇಕೆಂಬ ನಿಯಮವಿದೆ. ಹೆಚ್ಚಾಗಿ ಜಲರಾಶಿಗಳಾದ ಕರ್ಕ, ವೃಶ್ಚಿಕ, ಮೀನ ಈ ರಾಶಿಯವರೂ ತದನಂತರ ಭೂರಾಶಿಗಳಾದ ವೃಷಭ, ಕನ್ಯಾ, ಮಕರ ಈ ರಾಶಿಯವರೂ ಈ ಖಾತೆಯಲ್ಲಿ ಇರುವುದು ಕಂಡುಬರುತ್ತದೆ.

### ಸ್ಟೇಟ್ ಪೋರ್ಟ್ ಆಫೀಸರ್

ಇವರು ಈ ಖಾತೆಯ ಅತ್ಯುನ್ನತ ಅಧಿಕಾರಿಗಳಿದ್ದು ಇವರ ಕೆಲಸ ಆಡಳಿತ ಸಲಹೆನೀಡುವುದು, ಹಾಗೂ ಬಂದರಗಳ ಅಭಿವೃದ್ಧಿ ಕಾರ್ಯಗಳ ಮೇಲ್ವಿಚಾರಣೆ ಕೆಲಸಗಳೇ ಪ್ರಾಮುಖ್ಯವಾಗಿರುವುದರಿಂದ ಆಡಳಿತಕಾರಕ ಗ್ರಹವಾದ ರವಿಯೂ ಮೇಲ್ವಿಚಾರಣೆ ಹಾಗು ಸಲಹೆ ಕಾರಕಗ್ರಹವಾದ ಗುರುವೂ ಖಾತೆಯ ಕಾರಕಗ್ರಹವಾದ ಚಂದ್ರನೂ ಬಲಾಢ್ಯರಿದ್ದು ಅನೇಕ ಗ್ರಹಗಳು ಕೂಡಬಲಾಢ್ಯವಿರುತ್ತದೆ. (ಆಡಳಿತ ಪೂರಕ ಲಗ್ನ, ರಾಶಿ, ಸ್ಥಾನಗಳಿರುತ್ತವೆ).

## ಪೋರ್ಟ್ ಆಫೀಸರ್

ಇವರು ಆಡಳಿತೆಗಾರರೂ ಹೌದು, ಮೇಲ್ವಿಚಾರಕರೂ ಹೌದು, ಅಲ್ಲದೆ ಸ್ವತಃ ಕೆಲಸ ನಿರ್ವಹಿಸಬಲ್ಲ ವ್ಯಕ್ತಿಗಳೂ ಇರುವರಲ್ಲದೆ ಇವರ ಕೆಲಸದ ಗಾತ್ರ ವ್ಯಾಪಕವಿದೆ. ಇವರ ಸಂಬಂಧ ಹಡಗು, ಜಹಜು, ಬೋಟು, ನಾವೆ ಇವುಗಳೊಂದಿಗೂ, ಮತ್ತು ಜಲಪ್ರವಾಸದ ಪ್ರಯಾಣಿಕರ ಹಿತರಕ್ಷಣೆ, ಹಾಗೂ ಅವರಿಗೆ ಒದಗುವ ಅಪಘಾತಗಳಿಗೂ ಕೂಡ ಇವರೇ ಮುಖ್ಯಸ್ಥರು ಇರುವರಲ್ಲದೆ ಅಪಘಾತ ದುರ್ಮರಣಗಳ ಸರ್ಟಿಫಿಕೇಟು ಮತ್ತು ಜವಾಬ್ದಾರಿ ಮೊದಲಾದ ಕೆಲಸವು ಇವರದೇ ಇರುತ್ತದೆ. ( He is an Officer to grant Life Savings Appliances Certificates and a Conservator of Ports under I. P. A. 1908). He conducts Craft Survey of Steamers). ಇವರು ಬಂದರು ಕೆಲಸಗಾರರ ಹಿತರಕ್ಷಣೆಯ ಅಧಿಕಾರಿಗಳೂ ಇರುತ್ತಾರೆ. ಈ ಮೊದಲಾದ ಕೆಲಸವಿರುವುದರಿಂದಲೂ ಇವರು ಖಾತೆಯ ಅತಿಮಹತ್ವದ ಅಧಿಕಾರಿಗಳಿರುವರಲ್ಲದೆ ಯಾವುದೊಂದು ವಿಭಾಗದ ನೇರವಾದ ಅಧಿಕಾರಿಗಳೂ ಇವರು. ಒಂದು ದೃಷ್ಟಿಯಿಂದ ನೋಡಿದರೆ ಇವರೇ ಈ ಖಾತೆಯ ಬೆನ್ನೆಲೆಬು ಎಂದರೂ ಅತಿಶಯೋಕ್ತಿಯಾಗಲಾರದು. ಆದುದರಿಂದ ಇಂತಹ ಹುದ್ದೆಗಳನ್ನು ನಿರ್ವಹಿಸುವ ವ್ಯಕ್ತಿಗಳ ಜಾತಕವು ನಿರ್ದಿಷ್ಟವಾದ ಯೋಗಗಳಿಂದ ಕೂಡಿರುತ್ತದೆ.

ಕಾರಕಗ್ರಹ : ಇವರಿಗೆ ಅನೇಕ ಗ್ರಹಗಳು ಕಾರಕವಿರುತ್ತವೆ. ಹಡಗು, ಜಹಜು, ಬಂದರ ಕೆಲಸಗಾರರ ಸಂಬಂಧ ಬರುವುದರಿಂದಲೂ ಖಾತೆಯ ಮಹತ್ವದ ಅಧಿಕಾರಿಗಳಿರುವುದರಿಂದಲೂ ಖಾತೆಯ ಕಾರಕನಾದ ಚಂದ್ರನು ಬಲಾಢ್ಯನಿರಲೇಬೇಕು. (ಸ್ಥಾನಬಲ, ರಾಶಿಬಲ, ಯೋಗಕಾರಕ ಶುಭಗ್ರಹದೃಷ್ಟ), ಇವರು ಆಡಳಿತೆಗಾರರೂ ಇರುವುದರಿಂದ ರವಿಯೂ ಬಲಾಢ್ಯನಿರಬೇಕು. ಮೇಲ್ವಿಚಾರಕರೂ ಮತ್ತು ಸರ್ಕಾರಕ್ಕೆ ನಿಶ್ಚಿತವಾದ ನಿರ್ದಿಷ್ಟವಾದ ಅಂಕಿಸಂಖ್ಯೆಗಳ (ಖಾತೆಯ ವ್ಯವಹಾರದ ಬಗ್ಗೆ)ನ್ನು

ನಿವೇದಿಸುವ ಮೋಜಣಿಗಾರಿಕೆಯೂ ಇವರದೆ ಇರುವುದರಿಂದ ಮೇಲ್ವಿಚಾರಣಾ ಕಾರಕಗ್ರಹವಾದ ಗುರುವೂ ಅಂಕಿ-ಸಂಖ್ಯಾ ಕಾರಕಗ್ರಹನಾದ ಬುಧನೂ ಬಲಾಢ್ಯರಿರುತ್ತಾರೆ.

ಲಗ್ನ : ಮೇಷ, ಕರ್ಕ, ತುಲಾ, ವೃಶ್ಚಿಕ, ಮೀನ ಈ ಲಗ್ನದವರೇ ಅಧಿಕಾರಿಗಳಿರುವುದು ಕಂಡುಬರುತ್ತದೆ.

ಸ್ಥಾನ : ಲಗ್ನ, ಸುಖ, ಸಪ್ತಮ, ನವಮ ಈ ಸ್ಥಾನಗಳೂ ಸ್ಥಾನಾಧೀಶರೂ ಬಲಾಢ್ಯರಿರುವುದು ಕಂಡುಬರುತ್ತದೆ.

## ಎಕ್ಸಿಕ್ಯೂಟಿವ್ಹ ಇಂಜನಿಯರ್, ಅಸಿಸ್ಟಂಟ್ ಇಂಜಿನಿಯರ್, ಜ್ಯೂನಿಯರ್ ಇಂಜನಿಯರ್

ಈ ಮೊದಲಾದ ಇಂಜನಿಯರಿಂಗ್ ಅಧಿಕಾರಿಗಳು ಲೋಕೋಪಯೋಗಿ ಖಾತೆಯಿಂದ ಎರವಲಾಗಿ ( on Deputation from P. W. D.) ಬರುವುದರಿಂದ ಇಂಜನಿಯರ್ಸ ಹುದ್ದೆಯ ಕಾರಕ ಗ್ರಹರಾಶ್ಯಾದಿಗಳು ಇರುವುದಲ್ಲದೆ ಚಂದ್ರನು ಬಲಾಢ್ಯನೂ ಯೋಗಕಾರಕನೂ ಇರುತ್ತಾನೆ. ಮತ್ತು ಈ ಖಾತೆಯ ಕಾರಕ ಲಗ್ನಸ್ಥಾನ ರಾಶ್ಯಾದಿಗಳು ಇವರ ಜಾತಕದಲ್ಲಿರುತ್ತವೆ.

## ಪೋರ್ಟ್ ಕನ್ಸರ್‌ವೇಟರ್

ಪೋರ್ಟ್ ಆಫೀಸರ್‌ಗೆ ಹಡಗು, ಜಹಜು, ಬೋಟು ಈ ವಿಷಯವಾಗಿ (He will assist the Port Officer in MARINE work only) ಸಹಾಯ ಮಾಡುವ ಕೆಲಸವೇ ಮುಖ್ಯ. ಇಂತು ಚಂದ್ರನು ಗ್ರಹವಿರುವನು. ಮೇಷ, ಕರ್ಕ, ತುಲಾ, ವೃಶ್ಚಿಕ, ಮೀನ ಈ ಲಗ್ನದವರೇ ಈ ಹುದ್ದೆಯಲ್ಲಿ ಅಧಿಕ ಪ್ರಮಾಣದಲ್ಲಿ ಕಂಡುಬರುವರು.

ರಾಶಿ : ಹೆಚ್ಚಾಗಿ ಕರ್ಕ, ವೃಶ್ಚಿಕ, ಮೀನ, ವೃಷಭ, ಕನ್ಯಾ, ಮಕರ ಈ ರಾಶಿಯವರೇ ಈ ಹುದ್ದೆಯಲ್ಲಿ ಇರುವುದು ಕಂಡುಬರುತ್ತದೆ.

## ಅಡ್ಮಿನಿಸ್ಟ್ರೇಟಿವ್ಹ ಅಸಿಸ್ಟಂಟ್ ಟು ದಿ ಸ್ಟೇಟ್–ಪೋರ್ಟ್ ಆಫೀಸರ್
## (Administrative Assistant to the State Port Officer)

ಇವರದು ಕೇವಲ ವೃತ್ತಿಗಿಂತ ಆಡಳಿತೆಯೇ ಪ್ರಮುಖವಿರುತ್ತದೆ, ಮತ್ತು ಸ್ಟೇಟ–ಪೋರ್ಟ ಆಫೀಸರರ ಗೈರುಹಾಜರಿಯಲ್ಲಿ ಆಫೀಸಿನ ಆಡಳಿತೆಯ ಹೊಣೆಗಾರಿಕೆ ಇವರದಾಗಿರುತ್ತದೆ. ಇಂತಹ ಹುದ್ದೆಯನ್ನು ನಿರ್ವಹಿಸುವ ಜಾತಕದಲ್ಲಿಯ ಯೋಗಗಳೂ, ವಿಚಿತ್ರವಿದ್ದು ಅವು ಈ ಕೆಳಗಿನಂತೆ ಇರುತ್ತವೆ:

೧) ಆಡಳಿತಕಾರಕ ಗ್ರಹಗಳು ಕೇವಲ ರಾಶಿಬಲದವರಿದ್ದು ಸ್ಥಾನ ಬಲದವವಾಗಲಿ ಯೋಗಕಾರಕವಾಗಲಿ ಇರುವುದಿಲ್ಲ.

೨) ಖಾತೆಯ ಕಾರಕಗ್ರಹವಾದ ಚಂದ್ರನು ಕೇವಲ ರಾಶಿಬಲದವನಿದ್ದು ಸ್ಥಾನ ಬಲದವನಾಗಲಿ ಯೋಗಕಾರಕನಾಗಲಿ ಇರುವುದಿಲ್ಲ.

೩) ಚಂದ್ರ ಹಾಗೂ ಅನೇಕ ಗ್ರಹಗಳು ಪುರುಷರಾಶಿಯಲ್ಲಿದ್ದರೂ ದುರ್ಬಲವಿರುತ್ತವೆ.

೪) ಅನೇಕ ಗ್ರಹಗಳು ಹೆಚ್ಚಾಗಿ ಸ್ಥಾನಬಲಕ್ಕಿಂತ ರಾಶಿಬಲದವಿರುತ್ತವೆ.

## ಎಕ್ಸ್‌ಕೆವ್ಹೆಟರ್ ಆಪರೇಟರ್
## (Excavator Operaior)

ಇವರು ಮೆಕ್ಯಾನಿಕಲ್ ಡಿಪ್ಲೋಮಾ ಇಲ್ಲವೆ ಸರ್ಟಿಫಿಕೇಟ್‌ದವರಿದ್ದು ಇವರ ಕಾರ್ಯ ಮಶಿನರಿಗೆ ಸಂಬಂಧವಿರುವುದರಿಂದ ಮಶಿನರೀ ಕಾರಕ ಗ್ರಹವಾದ ಮಂಗಳ–ಶನಿಯರು ಕೇವಲ ರಾಶಿಬಲದವರಿರುತ್ತಾರೆ. ಖಾತೆಯ ಕಾರಕಗ್ರಹವಾದ ಚಂದ್ರನೂ ಕೂಡ ಕೇವಲ ರಾಶಿಬಲದವನಿರುತ್ತಾನೆ.

# ೩೭ ಆಹಾರ ಪೂರೈಕೆ ಹಾಗೂ ಆಹಾರ ಉತ್ಪಾದನೆ ಖಾತೆಗಳು

(Department of Food supply and Production)

ಈ ಎರಡೂ ಖಾತೆಗಳು ಭಿನ್ನಭಿನ್ನವಿದ್ದು ಕಾರಕಗ್ರಹದಲ್ಲಿಯೂ ವೈಶಿಷ್ಟ್ಯವಿದೆ.

## ಆಹಾರ ಪೂರೈಕೆ ಖಾತೆ

**ಕಾರಕಗ್ರಹ :** ಧಾನ್ಯ ಹಾಗೂ ಖಾದ್ಯಕಾರಕನಾದ ಚಂದ್ರನೇ ಈ ಖಾತೆಯ ಕಾರಕಗ್ರಹವೆಂದು ಹೇಳಬಹುದು. ಆಹಾರಪೂರೈಕೆ ಸಂಬಂಧವು ರೆವ್ಹಿನ್ಯೂ ಖಾತೆಗೆ ಬರುವುದರಿಂದಲೂ ರೆವ್ಹಿನ್ಯೂ ಖಾತೆಯ ಕಾರಕನಾದ ಬುಧನು ಕೆಲಮಟ್ಟಿಗೆ ಕಾರಕನಾಗುವನು.

**ಸ್ಥಾನ :** ಈ ಖಾತೆಗೆ ಆಹಾರ ಉತ್ಪಾದನೆಗಿಂತ ಆಹಾರ ಸಂಗ್ರಹ, ಆಹಾರ ಪೂರೈಕೆಯ ಕಾರ್ಯವೇ ಹೆಚ್ಚಾಗಿರುವುದರಿಂದ ಸಂಗ್ರಹ ಹಾಗೂ ಪೂರೈಕ ಸ್ಥಾನವಾದ ಪಂಚಮಸ್ಥಾನವೇ ಖಾತೆಯ ಕಾರಕಸ್ಥಾನವಾಗುವುದ ರಿಂದ ಪಂಚಮೇಶ ಹಾಗೂ ಚಂದ್ರ ಇವರ ಶುಭ ಸಂಬಂಧವಿರುವ ಜಾತಕನು ಯಶಸ್ವಿ ಅಧಿಕಾರಿಯಾಗಬಲ್ಲ.

**ಲಗ್ನ :** ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ಲಗ್ನದವರೇ ಇರುವುದು ಕಂಡುಬರುತ್ತದೆ.

**ರಾಶಿ :** ರಾಶಿದೃಷ್ಟಿಯಿಂದ ನೋಡಿದರೆ ವೃಷಭ, ಕನ್ಯಾ, ಮಕರ, ಕರ್ಕ, ವೃಶ್ಚಿಕ, ಮೀನ ಈ ರಾಶಿಯವರೇ ಹೆಚ್ಚಾಗಿರುವುದು ಕಂಡುಬರುತ್ತದೆ.

## ಆಹಾರ ಉತ್ಪಾದನಾ ಖಾತೆ

ಈ ಆಹಾರ ಉತ್ಪಾದನಾ ಖಾತೆಗೆ ಮೂರು ಗ್ರಹಗಳು ಕಾರಕರಾಗು ತ್ತಾರೆ. ಆಹಾರ ಕಾರಕನಾದ ಚಂದ್ರನೂ, ಆಹಾರ ಉತ್ಪಾದನಾ ಕಾರಕನಾದ

ಶನಿಯೂ, ಆಹಾರ ವೈಜ್ಞಾನಿಕ ಉತ್ಪಾದನಾ ಕಾರಕನಾದ ಮಂಗಳನೂ ಕಾರಕರಿರುತ್ತಾರೆ. ಏಕೆಂದರೆ ಆಹಾರವನ್ನು ಉತ್ಪಾದಿಸುವ ಸಂಬಂಧವು ಬೇಸಾಯಗಾರರಲ್ಲಿರುವುದರಿಂದ ಬೇಸಾಯಗಾರಿಕೆ ಕಾರಕನಾದ ಶನಿಯೂ ಕಾರಕನಾಗುವನು.

ಬಯೋಕೆಮಿಸ್ಟ್, ಹಾಗು ರಾಸಾಯನಿಕ ಗೊಬ್ಬರ, ವೈಜ್ಞಾನಿಕವಾಗಿ ಬೆಳೆಯವುದು ಮಂಗಳನ ಗುಣಧರ್ಮವಿರುವುದರಿಂದ ಮಂಗಳನು ಕಾರಕ ನಾಗುವನು.

ವೈಶಿಷ್ಟ್ಯ : ಚಂದ್ರನು ಯೋಗಕಾರಕನೂ, ಸ್ಥಾನಬಲದವನೂ ಇರುತ್ತಾನೆ. ಶನಿಯು ಕೇವಲ ಸ್ಥಾನಬಲದವನು ಇರುತ್ತಾನೆ. ಮಂಗಳನು ಕೇವಲ ರಾಶಿಬಲದವನಿದ್ದು ಸ್ಥಾನಬಲ, ಯೋಗಕಾರಕನಿರುವುದಿಲ್ಲ.

ಸ್ಥಾನ : ಸ್ಥಾನದದೃಷ್ಟಿಯಿಂದ ನೋಡಿದರೆ ಬೇಸಾಯಕಾರಕ ಸ್ಥಾನ ವಾದ ಚತುರ್ಥಸ್ಥಾನವೇ ಈ ಖಾತೆಯ ಕಾರಕಸ್ಥಾನವಾಗುತ್ತದೆ.

ರಾಶಿ : ರಾಶಿದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ಈ ರಾಶಿಯವರೂ ತದನಂತರ ವೃಷಭ, ಕನ್ಯಾ, ಮಕರ ಈ ರಾಶಿ ಯವರೂ ಹೆಚ್ಚಾಗಿರುವುದು ಕಂಡುಬರುತ್ತದೆ.

ಲಗ್ನ : ಲಗ್ನದದೃಷ್ಟಿಯಿಂದ ನೋಡಿದರೆ ಮೇಷ, ವೃಷಭ, ಕರ್ಕ, ತುಲಾ, ವೃಶ್ಚಿಕ, ಮಕರ, ಮೀನ ಈ ಲಗ್ನಗಳೇ ಹಾಚ್ಚಾಗಿರುವುದು ಕಂಡು ಬರುತ್ತದೆ.

## ೩೮ ಪ್ರಾಚ್ಯವಸ್ತು ಸಂಶೋಧನೆ ಖಾತೆ
(Department of Archæology)

ಹೆಸರಿಗೆ ತಕ್ಕಂತೆ ಈ ಖಾತೆ ಪ್ರಾಚ್ಯವಸ್ತು ಸಂಶೋಧನೆಗಾಗಿಯೇ ಮೀಸಲಾಗಿದೆಯನ್ನಬಹುದು. ಇಲ್ಲಿ ಪ್ರಾಚೀನ ವಸ್ತುಗಳ ಹಾಗು ಅವಶೇಷಗಳ ಸಂಶೋಧನೆ ನಡೆದು ಅವುಗಳಲ್ಲಿಯ ಅಗಾಧವಾದ ಜ್ಞಾನವನ್ನು

ಅದಕ್ಕೆ ತಕ್ಕಂತೆ ಅರ್ಥಯಿಸಿ ಆ ಸಂಸ್ಕೃತಿಯನ್ನು ಬೆಳಕಿಗೆ ತರಲಾಗುತ್ತದೆ.

ಪ್ರಾಚೀನ ಶಿಲಾಶಾಸನಗಳಲ್ಲಿ, ತಾಮ್ರಪಟಗಳಲ್ಲಿ, ಓಲೆಗರಿಗಳಲ್ಲಿ (ತಾಡವಾಲಿ) ಹಾಗೂ ನಾಣ್ಯಗಳ ಮುದ್ರಿಕೆ ಮೊದಲಾದವುಗಳ ಮೇಲೆ ಹುದುಗಿಕೊಂಡ ವಿಷಯವನ್ನು ಅಗಿದು, ಶೋಧಿಸಿ, ಸಂಗ್ರಹಿಸಿ, ವಿಂಗಡಿಸಿ, ಓದಿ, ವಿವೇಚಿಸಿ, ಅದಕ್ಕೆ ತಕ್ಕ ಅರ್ಥವನ್ನು ಕೊಟ್ಟು ವಿಶಿಷ್ಟವಾದ ಇತಿಹಾಸ ಸಂಸ್ಕೃತಿಯನ್ನು ಬೆಳಕಿಗೆ ತರುವುದೇ ಅತಿ ಪ್ರಾಮುಖ್ಯವಾದ ಕೆಲಸ.

ಇದಲ್ಲದೆ ಪ್ರಾಚೀನ ದೇವಾಲಯಗಳ ಹಾಗೂ ಅವಶೇಷಗಳನ್ನು ಸೂಕ್ಷ್ಮವಾಗಿ ಕಾಪಾಡುವದು ಸಹ ಈ ಖಾತೆಯ ಜವಾಬ್ದಾರಿಯಾಗಿರುತ್ತದೆ. ಕೇಂದ್ರ ಹಾಗೂ ರಾಜ್ಯಸರಕಾರಗಳ ಆಡಳಿತೆಯಲ್ಲಿ ಈ ಖಾತೆ ನಿರ್ವಹಿಸಲ್ಪಟ್ಟಿರುತ್ತದೆ.

ಇಂತಹ ವಿಶಿಷ್ಟ ಖಾತೆಯಾದ ಈ ಪ್ರಾಚೀನ ವಸ್ತು ಸಂಶೋಧನೆಯ ವಿಷಯವಾಗಿ ಜ್ಯೋತಿಷ್ಯ ಶಾಸ್ತ್ರ ಏನು ಹೇಳಬಯಸುತ್ತದೆ, ಈ ಖಾತೆಯಲ್ಲಿ ಕೆಲಸಮಾಡಲು ಜಾತಕ ಎಂತಿರಬೇಕು, ಕಾರಕ, ಗ್ರಹ, ಲಗ್ನ, ಸ್ಥಾನಾದಿಗಳು ಯಾವವು ಎಂಬುದನ್ನು ನೋಡುವಾ.

ಕಾರಕಗ್ರಹ : ಪ್ರಾಚ್ಯವಸ್ತು ಸಂಶೋಧನೆಯ ಗುಣಧರ್ಮಗಳುಳ್ಳ ಹಾಗು ಇತಿಹಾಸ ಪ್ರಾಚ್ಯಸಂಸ್ಕೃತಿ ಭಾರತೀಯತತ್ವಶಾಸ್ತ್ರ ಈ ಮೊದಲಾದ ವಿಷಯಗಳ ಕಾರಕಗ್ರಹವೆಂದರೆ ಶನಿಯು. ಆದುದರಿಂದ ಈ ಖಾತೆಗೆ ಶನಿಯೇ ಕಾರಕಗ್ರಹವೆನ್ನಬಹುದು. ಶನಿಯು (ಜಾತಕದಲ್ಲಿ) ಬಲಾಢ್ಯನಿರದೆ ಯಾರೂ ಈ ಖಾತೆಯಲ್ಲಿ ಅಭಿವೃದ್ಧಿಯನ್ನು ಹೊಂದಲಾರರು.

ಶನಿಯ ತರುವಾಯ ಬುಧ–ಗುರುಗಳೂ ಈ ಖಾತೆಯ ಕಾರಕರಾಗುತ್ತಾರೆ. ಯಾಕಂದರೆ ಶಿಲಾಲೇಖ, ಶಾಸನಗಳ ಅಭ್ಯಾಸ, ತಾಮ್ರಪಟ, ತಾಡವೋಲೆ, ನಾಣ್ಯಗಳ ಮೇಲಿನ ಅಕ್ಷರ ಮೊದಲಾದವುಗಳನ್ನು ಗುರುತಿ

ಸುವದು, ಓದುವದು, ಅರ್ಥ ಹಚ್ಚುವದು ಈ ಮೊದಲಾದ ಭಾಷಾಕಾರಕ ಗ್ರಹವೆಂದರೆ ಬುಧನು. ಆದುದರಿಂದ ಬುಧನೂ ಕಾರಕನಾಗುವನು.

ಬುಧನ ತರುವಾಯ ನೈಸರ್ಗಿಕ ಜ್ಞಾನದ ಅಧಿಪತಿಯೂ ಸಂಶೋಧನ ಬುದ್ಧಿ-ಗುಣಧರ್ಮ ಉಳ್ಳವನೂ ಸಂಸ್ಕೃತ ಹಾಗೂ ಸಂಸ್ಕೃತಿಯ ಕಾರಕನೂ ಅಧ್ಯಾಪಕ ವೃತ್ತಿಯ ಕಾರಕನೂ ಆದ ಗುರು ಗ್ರಹವೂ ಕೂಡ ಕೆಲಮಟ್ಟಿಗೆ ಕಾರಕನಿರುವನು.

ಲಗ್ನ : ವೃಷಭ, ತುಲಾ, ವೃಶ್ಚಿಕ, ಮಕರ, ಕನ್ಯಾ, ಮಿಥುನ, ಧನು, ಮೀನ ಈ ಲಗ್ನಗಳೇ ಈ ಖಾತೆಗೆ ಕಾರಕವಾಗುತ್ತವೆ.

ಸ್ಥಾನ : ಪ್ರಾಚ್ಯ ಸಂಶೋಧನೆಯೇ ಮುಖ್ಯ ಕೆಲಸವಿರುವದರಿಂದ ತೃತೀಯ, ಚತುರ್ಥ ಹಾಗೂ ಪಂಚಮ ಸ್ಥಾನಗಳೇ ಈ ಖಾತೆಯ ಕಾರಕ ಸ್ಥಾನಗಳಾಗುವದರಿಂದ ಈ ಸ್ಥಾನಾಧೀಶರು ಬಲಾಢ್ಯರಿರಬೇಕು.

ರಾಶಿ : ರಾಶಿದೃಷ್ಟಿಯಿಂದ ಪರಿಶೀಲಿಸಲಾಗಿ ಇಂತಹದೇ ನಿರ್ದಿಷ್ಟವಾದ ರಾಶಿ ಇರಬೇಕೆಂಬ ನಿಯಮವಿರುವದಿಲ್ಲ.

### ಈ ಖಾತೆಯಲ್ಲಿಯ ವಿವಿಧ ಹುದ್ದೆಗಳು

ಈ ಖಾತೆಯಲ್ಲಿ ಡಾಯರೆಕ್ಟರ, ಅಸಿಸ್ಟಂಟ ಡಾಯರೆಕ್ಟರ, ರೀಸರ್ಚ ಅಸಿಸ್ಟಂಟ, ಟೆಕ್ನಿಕಲ್ ಅಸಿಸ್ಟಂಟ, ಆರ್ಕಿಟೆಕ್ಚರಲ್ ಅಸಿಸ್ಟಂಟ, ಎಪಿಗ್ರಾಫಿಸ್ಟ (Apigraphist), ಸರ್ವೆಯರ ಇತ್ಯಾದಿ ಹುದ್ದೆಗಳನ್ನು ಕಾಣಬಹುದಾಗಿದೆ. ಈ ಹುದ್ದೆಗಳ ಪ್ರಮುಖ ಕಾರ್ಯ ಮೇಲೆ ವಿವರಿಸಿದಂತೆಯೇ ಇದ್ದು, ಆ ಆ ಹುದ್ದೆಗಳಿಗೆ ತಕ್ಕಂತೆ ಹೆಚ್ಚು ಆಡಳಿತೆ ಅಧಿಕಾರವನ್ನು ಹೊಂದಿದವರಾಗಿರುತ್ತಾರೆ. ಆದುದರಿಂದ ಮೇಲಿನ ಹಿನ್ನೆಲೆಯಲ್ಲಿ ಈ ಹುದ್ದೆಗಳ ಜಾತಕವನ್ನು ಪರಿಶೀಲಿಸುವಾಗ ಆಡಳಿತೆ ಕಾರಕಗ್ರಹಗಳಾದ ರವಿ, ಮಂಗಳ, ಗುರು ಇವರನ್ನೂ ಪ್ರಾಚ್ಯ ಸಂಶೋಧನೆ ಕಾರ್ಯಕ್ಕಾಗಿ ಬುಧ, ಶನಿಯರನ್ನೂ ಸೂಕ್ಷ್ಮವಾಗಿ ನೋಡಬೇಕಾಗುತ್ತದೆ.

# ೩೯ ವಿದ್ಯುಚ್ಛಕ್ತಿ ಮಂಡಳ
## (Electricity Board)

ದೊಡ್ಡ ದೊಡ್ಡ ಶಹರಗಳಲ್ಲಿ ಖಾಸಗಿಯಾಗಿ ತಮ್ಮ ಯಂತ್ರ ಸಾಮುಗ್ರಿಯಿಂದ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಿ ಜನರ ಬಳಕೆಗಾಗಿ ಹಂಚುವ ಪದ್ಧತಿ ಇಂದು ಮಾಯವಾಗಿ ಪ್ರತಿಯೊಂದು ರಾಜ್ಯದಲ್ಲಿಯೂ ವಿದ್ಯುಚ್ಛಕ್ತಿ ಮಂಡಳಗಳು (State Electricity Board) ನಿರ್ಮಿಸಲ್ಪಟ್ಟಿವೆ. ಇವುಗಳ ಕಾರ್ಯ ವಿದ್ಯುಚ್ಛಕ್ತಿ ಉತ್ಪಾದನೆ, ಸಂಗ್ರಹಿಸುವಿಕೆ, ಹಾಗೂ ಇಡೀ ರಾಜ್ಯದಲ್ಲಿ ಸರಿಯಾಗಿ ಹಂಚುವದು ಇತ್ಯಾದಿಯಾಗಿರುತ್ತದೆ. ದಿನೇ ದಿನೇ ಈ ಖಾತೆಯೂ ಅಪಾರವಾಗಿ ಬೆಳೆಯುತ್ತ ನಡೆದಿದ್ದು ಕಾರಕೂನನಿಂದ ಹಿಡಿದು ಚೆರಮನ್‌ನವರೆಗೆ ವಿವಿಧ ಹುದ್ದೆಗಳನ್ನು ವಿವಿಧ ಸಣ್ಣ ಸಣ್ಣ ಉಪಖಾತೆಗಳನ್ನು ಈ ಖಾತೆಯಲ್ಲಿ ಕಾಣಬಹುದಾಗಿದೆ. ಇಲ್ಲಿ ವಿವಿಧ ಇಂಜನೀಯರರು ಆಡಳಿತೆಯನ್ನು ನಿರ್ವಹಿಸುವ ಜವಾಬ್ದಾರಿಯನ್ನು ಹೊಂದಿರುತ್ತಾರೆ.

ಈ ವಿಶಿಷ್ಟ ಖಾತೆಯ ವಿಷಯವಾಗಿ ಜ್ಯೋತಿಷ್ಯದ ದೃಷ್ಟಿಯಿಂದ ವಿಚಾರಿಸೋಣ.

**ಕಾರಕಗ್ರಹ :** ವಿದ್ಯುಚ್ಛಕ್ತಿ ಕಾರಕಗ್ರಹವಾದ ಮಂಗಳನೇ ಈ ಖಾತೆಯ ಕಾರಕಗ್ರಹನಾಗುವನು. ಮಂಗಳನು ಬಲಾಢ್ಯನಿರದೆ ಈ ಖಾತೆಯಲ್ಲಿ ಯಾರೂ ಅಭಿವೃದ್ಧಿಯನ್ನು ಹೊಂದಲಾರರು.

ಈ ಖಾತೆಗೆ ಸರಕಾರಿ ಖಾತೆಯಂತೆಯೇ ಭದ್ರತೆ ಇದ್ದರೂ ಕೂಡಾ ಇವರ ಆಡಳಿತೆ ಮಂಡಳದಿಂದ (Board Administration) ನಿರ್ವಹಿಸಲ್ಪಡುವದರಿಂದ ಬುಧನೂ ಕಾರಕಗ್ರಹನಾಗುತ್ತಾನೆ.

**ಲಗ್ನ :** ಮೇಷ, ಕರ್ಕ, ಸಿಂಹ, ಧನು, ಮಕರ, ವೃಶ್ಚಿಕ ಈ ಲಗ್ನಗಳೇ ಈ ಖಾತೆಯ ಕಾರಕಲಗ್ನವೆನ್ನಬಹುದು.

ಸ್ಥಾನ : ನೈಸರ್ಗಿಕ ಉದ್ಯೋಗ ಸ್ಥಾನವಾದ ದಶಮಸ್ಥಾನವೇ ಈ ಖಾತೆಯ ಕಾರಕಸ್ಥಾನವೆನ್ನಬಹುದು. ದಶಮಸ್ಥಾನದ ನಂತರ ತೃತೀಯ ಸ್ಥಾನವೂ ಕಾರಕವಾಗುತ್ತದೆ.

ರಾಶಿ : ನಿರ್ದಿಷ್ಟವಾದ ರಾಶಿ ಇರಬೇಕೆಂಬ ನಿಯಮವಿಲ್ಲ.

ಸಾಮಾನ್ಯವಾಗಿ ಕಾರಕೂನಿಯ ವರ್ಗ (Ministerial), ಇಂಜನೀಯರರ ವರ್ಗ (Engineering Officer), ಹಾಗು ಮಂಡಳದ ಪದಾಧಿಕಾರಿಗಳ ವರ್ಗ (Board of Directors) ಹೀಗೆ ಈ ಖಾತೆಯನ್ನು ಮುಖ್ಯವಾಗಿ ವಿಂಗಡಿಸಬಹುದು. ಕಾರಕೂನಿಕೆ ಹಾಗೂ ಇಂಜನೀಯರರ ವಿಷಯವಾಗಿ ೩ನೆಯ ಪ್ರಕರಣದಲ್ಲಿ ವಿವರಿಸಲಾಗಿದೆ. ಮಂಡಳದ ಪದಾಧಿಕಾರಿಗಳ ವಿಷಯವಾಗಿ ಉದ್ಯೋಗ ಜ್ಯೋತಿಷ್ಯದ ೨ನೆಯ ಭಾಗವಾದ "ವೃತ್ತಿ ಜ್ಯೋತಿಷ" ಎಂಬ ಪ್ರತ್ಯೇಕ ಗ್ರಂಥದಲ್ಲಿ ವಿವೇಚಿಸಲಾಗಿದೆ.

## ೪೦ ಬ್ಯಾಂಕ ನೌಕರದಾರರು
(Bank workers)

ಬ್ರಿಟಿಶರ ಕಾಲದಿಂದಲೂ ಬ್ಯಾಂಕುಗಳ ಸ್ಥಾಪನೆ ಭಾರತದಲ್ಲಿ ಬಳಕೆಯಲ್ಲಿದೆ. ಪಾಶ್ಚಿಮಾತ್ಯ ಪದ್ಧತಿಯ ಪ್ರಕಾರ ವಿವಿಧ ಬ್ಯಾಂಕುಗಳ ವರ್ಗೀಕರಣವು ಈ ಕೆಳಗಿನಂತೆ ಇರುತ್ತದೆ.

೧. ರಿಝರ್ವ ಬ್ಯಾಂಕ ಆಫ್ ಇಂಡಿಯಾ,
೨. ಸ್ಟೇಟ ಬ್ಯಾಂಕ್ಸ ಆಫ್ ಇಂಡಿಯಾ,
೩. ಶೆಡ್ಯೂಲ್ಡ ಮತ್ತು ನಾನ್-ಶೆಡ್ಯೂಲ್ಡ ಬ್ಯಾಂಕುಗಳು,
೪. ಎಕ್ಸಚೇಂಜ ಬ್ಯಾಂಕ್ಸ ಮತ್ತು ಪರದೇಶ ಬ್ಯಾಂಕುಗಳು.

ಸಾಮಾನ್ಯ ನಿಯಮಗಳು

ಈ ಯಾವದೇ ಪ್ರಕಾರದ ಬ್ಯಾಂಕುಗಳಿರಲಿ, ಮಾಡತಕ್ಕ ಕೆಲಸ (nature of work) ಒಂದೇ ಇರುವದರಿಂದ ಫಲಜ್ಯೋತಿಷ್ಯದಲ್ಲಿ ಈ ನೌಕರದಾರರಿಗೆ ಕೆಳಗೆ ಕಾಣಿಸಿದ ಸಾಮಾನ್ಯ ಯೋಗಗಳು ಇರುತ್ತವೆ.

ಕಾರಕಗ್ರಹ : ಬ್ಯಾಂಕ ನೌಕರಿಯ ಕಾರಕಗ್ರಹವೆಂದರೆ ಬುಧನು. ಬುಧನು ಬಲಾಢ್ಯನಿರದೆ ಯಾರೂ ಬ್ಯಾಂಕುಗಳಲ್ಲಿ ನೌಕರಿ ಮಾಡಲಾರರು.

ಲಗ್ನ : ಲಗ್ನದೃಷ್ಟಿಯಿಂದ ನೋಡಿದರೆ ವೃಷಭ, ಮಿಥುನ, ಕನ್ಯಾ, ತುಲಾ, ಧನು, ಮಕರ, ಮೀನ, ಕುಂಭ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

ಕಾರಕಸ್ಥಾನ : ಬ್ಯಾಂಕಿನ ಕಾರಕಸ್ಥಾನವೆಂದರೆ ಪಂಚಮವು. ಏಕೆಂದರೆ ಹಣಕಾಸಿಗೆ ಸಂಬಂಧಿಸಿದ ಕಾರಕಸ್ಥಾನವೆಂದರೆ ಪಂಚಮ ವಿರುವದರಿಂದ ಪಂಚಮೇಶನು ಬಲಾಢ್ಯನಿರಬೇಕು. ಪಂಚಮಸ್ಥಾನದ ತರುವಾಯ ತೃತೀಯ ಸ್ಥಾನವೂ ಬ್ಯಾಂಕ ನೌಕರರ ಕಾರಕಸ್ಥಾನವಾಗುತ್ತದೆ. ಏಕೆಂದರೆ ಹಣಕಾಸಿಗೆ ಸಂಬಂಧಿಸಿದ ಲೆಕ್ಕ-ಪತ್ರಗಳಿಗಾಗಿ, ಲೆಕ್ಕ-ಪತ್ರಗಳ ಹಾಗೂ ದಾಖಲೆಗಳ ಕಾರಕಸ್ಥಾನವು ತೃತೀಯ ಸ್ಥಾನವಿರುವದರಿಂದ ತೃತೀಯೇಶನೂ ಬಲಾಢ್ಯನಿರಬೇಕು.

ರಾಶಿ : ರಾಶಿದೃಷ್ಟಿಯಿಂದ ವಿಚಾರಿಸಿದರೆ ಮಿಥುನ, ತುಲಾ, ಕುಂಭ ಈ ರಾಶಿಯವರೂ ತದನಂತರ ವೃಷಭ, ಕನ್ಯಾ, ಮಕರ ಈ ರಾಶಿಯ ಜನರೂ ಅನುಕ್ರಮವಾಗಿ ಬ್ಯಾಂಕಿನ ವ್ಯವಹಾರದಲ್ಲಿ ಬ್ಯಾಂಕಿನ ಖಾತೆಗಳಲ್ಲಿ ಕಾರ್ಯ ಮಾಡಲು ದಕ್ಷರಿರುವರೆಂದು ಹೇಳಬಹುದು.

ಯೋಗಗಳು : ಬ್ಯಾಂಕಿನ ನೌಕರದಾರರಲ್ಲಿ ಸಾಮಾನ್ಯವಾಗಿ ಈ ಕೆಳಗೆ ಕಾಣಿಸಿದ ಯೋಗಗಳಿರುವದು ಕಂಡುಬರುತ್ತದೆ.

೧. ಬುಧ-ಪಂಚಮೇಶರ ಶುಭಯೋಗ.
೨. ಬುಧ-ತೃತೀಯೇಶರ ಶುಭಯೋಗ.
೩. ತೃತೀಯೇಶ-ಪಂಚಮೇಶರ ಶುಭಯೋಗ.
೪. ಪಂಚಮೇಶ-ದಶಮೇಶರ ಶುಭ ಸಂಬಂಧಯೋಗ.

ವರ್ಗ : ಬ್ಯಾಂಕಿನ ನೌಕರದಾರರಲ್ಲಿ ಸಾಮಾನ್ಯವಾಗಿ ನಾವು ಐದು ವರ್ಗಗಳನ್ನು ಕಲ್ಪಿಸಬಹುದು.

(೧) ಅಕೌಂಟಂಟ ವರ್ಗ, (೨) ಆಡಿಟರ ವರ್ಗ, (೩) ಕ್ಯಾಶಿಯರ ವರ್ಗ, (೪) ಕಾರಕೂನರ ವರ್ಗ, (೫) ಅಧಿಕಾರಿಗಳ ವರ್ಗ.

ಸ್ಥೂಲವಾಗಿ ನೋಡಿದರೆ ಈ ಎಲ್ಲ ನೌಕರದಾರರ ಜಾತಕದಲ್ಲಿಯ ಸಾಮಾನ್ಯ ಗ್ರಹಯೋಗಗಳು ಒಂದೇ ಇದ್ದರೂ ಕೆಲ ವಿಶಿಷ್ಟ ಯೋಗಗಳು ವಿಶಿಷ್ಟ ವರ್ಗದವರಲ್ಲಿರುವುದು ಕಂಡುಬರುತ್ತದೆ.

ಕ್ಯಾಶರ, ಚೀಫ್ ಕ್ಯಾಶಿಯರ, ಸಬ್‌ಕ್ಯಾಶಿಯರ, ಡಿವ್ಹಿಜನಲ್ ಪೇ ಮಾಸ್ಟರ, ರೀಜನಲ್ ಕ್ಯಾಶಿಯರ, ಪೇ ಕ್ಲಾರ್ಕ್.

ಇವರಲ್ಲಿ ಪಂಚಮಸ್ಥಾನವೂ ಬುಧನೂ ಪಂಚಮೇಶನೂ ಬಲಾಢ್ಯರಿರುತ್ತಾರೆ. ಅಕೌಂಟ್ಸ ಆಡಿಟರ ವರ್ಗದ ಅಕೌಂಟಂಟ್ಸ, ಆಡಿಟರ್ಸ, ಸಬ್–ಹೆಡ್, ಸ್ಟಾಕ್ ವ್ಹೆರಿಫಾಯರ್, ಅಕೌಂಟ್ಸ ಕ್ಲಾರ್ಕ ಈ ಎಲ್ಲ ವರ್ಗದವರಿಗೆ ತೃತೀಯೇಶನೂ ತೃತೀಯ ಸ್ಥಾನದಲ್ಲಿಯ ಗ್ರಹವೂ ಬುಧನೂ ಬಲಾಢ್ಯರಿರುವುದು ಕಂಡುಬರುತ್ತದೆ. ಅಧಿಕಾರೀ ವರ್ಗಗಳ ಮ್ಯಾನೇಜರ, ಬ್ರಾಂಚ ಮ್ಯಾನೇಜರ, ಹೆಡ್ ಆಫೀಸರ, ಮ್ಯಾನೇಜರ ಜನರಲ್ ಈ ಮೊದಲಾದ ಅಧಿಕಾರೀ ವರ್ಗದವರಲ್ಲಿ ಬ್ಯಾಂಕ ನೌಕರದಾರರ ಸಾಮಾನ್ಯ ಗ್ರಹಮಾನದ ಹೊರತಾಗಿ ಆಡಳಿತಕಾರಕ ಗ್ರಹಗಳೂ ಆಡಳಿತಕಾರಕ ರಾಶಿಗಳೂ ಬಲಾಢ್ಯವಿದ್ದು ಪಂಚಮೇಶ, ಭಾಗ್ಯೇಶ, ಬುಧರು ಬಲಾಢ್ಯರಿದ್ದು ಲಗ್ನೇಶನೊಂದಿಗೆ ಶುಭಯೋಗವನ್ನುಂಟುಮಾಡುತ್ತಾರೆ.

ವಿ. ಸೂ. : ಈ ಎಲ್ಲ ವಿಷಯಕ್ಕಾಗಿ ೩ನೇ ಪ್ರಕರಣದಲ್ಲಿಯ ವಿವೇಚನೆಯನ್ನು ನೋಡಿರಿ.

ಬ್ಯಾಂಕಿನಲ್ಲಿಯ ಪ್ರಕಾರಗಳು —

೧) ರಿಝರ್ವ ಬ್ಯಾಂಕ ಆಫ್ ಇಂಡಿಯಾ–೧೯೩೫ ಎಪ್ರಿಲ್ ೧ನೇ ದಿನಾಂಕ ಸ್ಥಾಪಿಸಲ್ಪಟ್ಟಿದೆ. ಇದರ ಮುಖ್ಯ ಕೆಲಸಗಳು ಕೆಳಗಿನಂತಿವೆ.

(೧) ಕರನ್ಸಿ ಪೂರೈಸುವದು.

(೨) ಸರಕಾರಕ್ಕೆ ಹಣ ಪೂರೈಸುವದು ( Banker to the Government ).

(೩) ವ್ಯಾಪಾರೀ - ಬ್ಯಾಂಕುಗಳಿಗೆ ಕೊಡಲಾದ ಸಾಲ ಹಾಗೂ ಮುಂಗಡ ಮೇಲ್ವಿಚಾರಣೆ.

(೪) ರೂಪಾಯಿಯ ಮೌಲ್ಯವನ್ನು ಕಾಪಾಡುವದು. (External value of Rupee).

(೫) ಬೇಸಾಯಗಾರರಿಗೆ ಸಾಲ ಪೂರೈಸುವ ಹೊಣೆಗಾರಿಕೆ.

(೬) ಆರ್ಥಿಕ ಸುದ್ದಿ ಸಂಗ್ರಹವನ್ನು ಕೂಡಿಸಿ ಪ್ರಸಿದ್ಧಿಸುವದು.

(೭) ರೂಪಾಯಿಯ ನೋಟನ್ನು ಬಿಟ್ಟು ಉಳಿದ ಎಲ್ಲ ನೋಟು ಗಳನ್ನು ಪೂರೈಸುವ ಹೊಣೆಗಾರಿಕೆ.

(೮) ಸರಕಾರದ ಪರವಾಗಿ ಹಣ ಪೂರೈಸುವದು, ಸರಕಾರಕ್ಕೆ ಬೇಕಾಗುವ ವಿದೇಶೀ ವಿನಿಮಯ, ಸರಕಾರದ ಪರವಾಗಿ ಕೊಳ್ಳುವದು, ಫಂಡುಗಳನ್ನು ಕೂಡಿಸುವದು.

(೯) ಸಾರ್ವಜನಿಕ ಸಾಲವನ್ನು ನೋಡುವದು, ಸರಕಾರದ ಪರವಾಗಿ ಸಾಲ ಸಂಗ್ರಹಿಸುವದು.

(೧೦) ಉಳಿದ ಬ್ಯಾಂಕುಗಳ ಮೇಲ್ವಿಚಾರಣೆ.

ಈ ಮೊದಲಾದ ಕರ್ತವ್ಯ, ಕಾರ್ಯಗಳಿರುವ ಈ ಬ್ಯಾಂಕಿನ ನೌಕರ ದಾರ ವರ್ಗದವರಿಗೆ ಸಾಮಾನ್ಯ ಬ್ಯಾಂಕಿನ ನೌಕರದಾರರ ಜಾತಕದ ಯೋಗ ಗಳ ಹೊರತಾಗಿ ಕೆಲ ವಿಶಿಷ್ಟ ಯೋಗಗಳು ಇವರಲ್ಲಿರುವುದು ಕಂಡು ಬರುತ್ತದೆ.

(ಅ) ದೇಶದ ಇತರ ಯಾವದೇ ಖಾತೆಯಲ್ಲಿರುವ ನೌಕರದಾರರ ವೇತನ ಮಟ್ಟಕ್ಕಿಂತ ಇವರ ವೇತನಮಟ್ಟ ಹೆಚ್ಚಾಗಿರುವದರಿಂದ ಇವರ ಜಾತಕದಲ್ಲಿರುವ ಪಂಚಮೇಶ, ಲಾಭೇಶ, ಬುಧ ಇವರು ಬಲಾಢ್ಯರಿರುತ್ತಾರೆ.

ಬ) ಇವರ ಜಾತಕದಲ್ಲಿ ಖಾತೆಯ ಕಾರಕಗ್ರಹವಾದ ಬುಧನಂತೆಯೇ ಗುರು–ರವಿಗಳೂ ಬಲಾಢ್ಯರಿರುತ್ತಾರೆ.

ಕ) ಭಾಗ್ಯೇಶ, ಲಗ್ನೇಶ, ಪಂಚಮೇಶ ಇವರು ಬಲಾಢ್ಯರಿದ್ದು ಶುಭಯೋಗಗಳಿರುತ್ತವೆ.

೨. ಸ್ಟೇಟ ಬ್ಯಾಂಕ ಆಫ್ ಇಂಡಿಯಾ : ೧೯೫೫ ನೆಯ ಇಸ್ವಿ ಜುಲೈ ೧ನೆಯ ದಿನಾಂಕದ ಮೊದಲಿದ್ದ ಎಲ್ಲ ಇಂಪೀರಿಯಲ್ ಬ್ಯಾಂಕು ಗಳನ್ನು ವಿಲೀನಗೊಳಿಸಿ ಸ್ಟೇಟ ಬ್ಯಾಂಕ ಆಫ್ ಇಂಡಿಯಾ ಎಂದು ಸರಕಾರೀ ರಂಗದಲ್ಲಿ ಸ್ಥಾಪಿಸಲ್ಪಟ್ಟಿತು. ಇದರಲ್ಲಿ ೦೦ಖಿಪ್ರ್ಪ ಬ್ಯಾಂಕಿನ ಶೇರುಗಳು ೫೫ ರಷ್ಟು ಇವೆ.

ಫಲಜ್ಯೋತಿಷ್ಯದಲ್ಲಿ ಈ ಬ್ಯಾಂಕಿನ ನೌಕರದಾರರ ಯೋಗಗಳು ಹೀಗಿವೆ. ಎಲ್ಲ ಬ್ಯಾಂಕ ನೌಕರರ ಜಾತಕದಲ್ಲಿರುವ ಸಾಮಾನ್ಯ ಯೋಗಗಳ ಹೊರತಾಗಿ ವಿಶಿಷ್ಟ ಯೋಗವೆಂದರೆ ರವಿ ಬಲಾಢ್ಯನಿರುತ್ತಾನೆ. ಏಕೆಂದರೆ ಈ ಖಾತೆಯ ನೌಕರದಾರರು ಸರಕಾರೀ ರಂಗದ ನೌಕರದಾರರಂತೆ ಇರುವ ದರಿಂದ ಸರಕಾರೀ ನೌಕರಿ ಕಾರಕಗ್ರಹನಾದ ರವಿಯೂ ಖಾತೆಯ ಕಾರಕ ಗ್ರಹನಾದ ಬುಧನೂ ಬಲಾಢ್ಯರಿದ್ದು ಪಂಚಮೇಶ-ದಶಮೇಶರು ಶುಭ ಸಂಬಂಧ ಯೋಗದವರಿರುತ್ತಾರೆ.

೩. ಶೆಡ್ಯೂಲ್ಡ ಹಾಗೂ ನಾನ್-ಶೆಡ್ಯೂಲ್ಡ ಬ್ಯಾಂಕುಗಳ ನೌಕರದಾರ ರಲ್ಲಿ ಫಲಜ್ಯೋತಿಷ್ಯದಲ್ಲಿ ಭೇದ ಮಾಡಲು ಬರುವದಿಲ್ಲ. ಕಾರಣ ಬ್ಯಾಂಕ ನೌಕರದಾರರ ಸಾಮಾನ್ಯ ಗ್ರಹಮಾನಗಳು ಇಲ್ಲಿ ಅನ್ವಯಿಸುತ್ತವೆ.

೪. ಪರದೇಶ ಬ್ಯಾಂಕುಗಳು— (Exchange Banks)

ಈ ಬ್ಯಾಂಕುಗಳು ವಿದೇಶೀ ವ್ಯಾಪಾರಕ್ಕಾಗಿ ಹಣವನ್ನು ಪೂರೈಸುತ್ತವೆ. ಇವುಗಳ ಸ್ಥಾಪನೆ ಪರದೇಶದಲ್ಲಿ ಆಗಿರುತ್ತದೆ

(Incorporated outside India). ಇವು ಪರದೇಶದ ಹಣವನ್ನು ಸ್ವೀಕರಿಸುತ್ತವೆ. ಹಡಗು-ಸರಕು ಸಾಮಗ್ರಿಗಳ ಮೇಲೆ ಹಣವನ್ನು ಸಾಲ ರೂಪದಲ್ಲಿ ಕೊಡುವವು. ಆಮದು-ರಫ್ತು ಆದ ಸರಕುಗಳ ಮೇಲಿನ ವ್ಯವಹಾರವನ್ನು ನೋಡುವ ಕೆಲಸ ಮುಖ್ಯವಾಗಿರುತ್ತದೆ. ೧೯೪೯ರ ಬ್ಯಾಂಕುಗಳ ಕಾನೂನಿನ ಪ್ರಕಾರ ಈ ಬ್ಯಾಂಕುಗಳು ಸಹ ಭಾರತದಲ್ಲಿಯ ಉಳಿದ ಬ್ಯಾಂಕುಗಳಂತೆ ಸೇವಿಂಗ್ಸ್ ಖಾತೆ ಮೊದಲಾದ ಆಂತರಿಕ ವ್ಯವಹಾರಗಳಲ್ಲಿ ಸಹ ಕೆಲಸ ಮಾಡಹತ್ತಿವೆ.

ಈ ತರಹದ ವಿಶಿಷ್ಟ ಪದ್ಧತಿಯ ಕೆಲಸವಿರುವ ಇಲ್ಲಿಯ ನೌಕರದಾರರಿಗೂ ಕೆಲ ವಿಶಿಷ್ಟ ಯೋಗಗಳು ಅನ್ವಯಿಸುತ್ತವೆ.

೧. ಪರದೇಶದ ವ್ಯಾಪಾರಕ್ಕಾಗಿಯೇ ಹಣದ ವಿನಿಯೋಗವಿರುವದರಿಂದ ವಿದೇಶೀ ವ್ಯಾಪಾರ ಕಾರಕಸ್ಥಾನವಾದ ಸಪ್ತಮಸ್ಥಾನವೂ ಸಪ್ತಮೇಶನೂ ಬಲಾಢ್ಯರಿದ್ದು ಬುಧನೊಂದಿಗೆ ಮತ್ತು ಪಂಚಮೇಶನೊಂದಿಗೆ ಶುಭಯೋಗದವರಿರುತ್ತಾರೆ.

೨. ಇವರ ಜಾತಕದಲ್ಲಿ ಅನೇಕ ಗ್ರಹಗಳು ಲಗ್ನ, ತೃತೀಯ, ಸಪ್ತಮ, ಭಾಗ್ಯ, ವ್ಯಯ ಈ ಸ್ಥಾನದಲ್ಲಿರುವದಲ್ಲದೆ ಅನೇಕ ಗ್ರಹಗಳು ಚರ ರಾಶಿಯಲ್ಲಿರುವವು.

೩. ಸಪ್ತಮೇಶ, ದಶಮೇಶ ಹಾಗೂ ಬುಧ ಇವರ ಶುಭ ಸಂಬಂಧವಿರುತ್ತದೆ.

## ೪೧ ಜೀವವಿಮಾ ಕಾರ್ಪೋರೇಶನ್

ಇಂದು ಕುಟುಂಬಗಳ ಭವಿಷ್ಯ ಜೀವನದ ಭದ್ರತೆಯ ಮುಖ್ಯ ಮಾರ್ಗವೆಂದರೆ ಜೀವವಿಮೆಯು. ವ್ಯಕ್ತಿಯ ಸುಖಜೀವನವೇ ಅಲ್ಲದೆ ಜೀವವಿಮಾ ಕಾರ್ಪೋರೇಶನ್ ಬಂಡವಾಳಗನ್ನೊದಗಿಸುವ ಮೂಲಕ ರಾಷ್ಟ್ರದ ಅನೇಕ

ಬೃಹತ್ ಅಭಿವೃದ್ಧಿ ಕಾರ್ಯಗಳಿಗೆ ಸಹಾ ಪಾಲ್ಗೊಂಡಿದೆ. ಈ ರೀತಿ ಪ್ರಮುಖ ಹಾಗು ಜನಪ್ರಿಯ ಉದ್ದಿಮೆಯಾದ ಜೀವವಿಮಾ ಉದ್ದಿಮೆ ರಾಷ್ಟ್ರಾದ್ಯಂತ ಹರಡಿರುವುದು ಆಶ್ಚರ್ಯವೇನಲ್ಲ.

ಸುಮಾರು ೧೩-೧೪ನೇ ಶತಮಾನದಲ್ಲಿ ವರ್ತಕರು ಮತ್ತು ಹಡಗುಗಳ ಸಂರಕ್ಷಣೆ ಉದ್ದೇಶದಿಂದ ಇಟಲಿಯಲ್ಲಿ ಆರಂಭವಾದ ವಿಮಾ ಪದ್ಧತಿಯು ಇಂದು ಅನೇಕ ರೀತಿಯಲ್ಲಿ ಜಾರಿಗೆ ಬಂದಿದೆ. ಭಾರತದಲ್ಲಿ ಬೆಂಕಿ ವಿಮಾ, ಮೋಟರ್ ವಿಮಾ, ಜೀವವಿಮಾ ವ್ಯವಹಾರವು ಅತ್ಯಂತ ಪ್ರಮುಖವಾದುದು.

ಈ ಮೊದಲು ಜೀವವಿಮಾ ಉದ್ದಿಮೆಯನ್ನು ಅನೇಕ ಖಾಸಗೀ ಸಂಸ್ಥೆಗಳು ನಡೆಸುತ್ತಿದ್ದು ೧೯೫೬ರಲ್ಲಿ ಈ ಎಲ್ಲ ಸಂಸ್ಥೆಗಳನ್ನು ರಾಷ್ಟ್ರೀಕರಣಗೊಳಿಸಿ "ಭಾರತದ ಜೀವವಿಮಾ ಕಾರ್ಪೋರೇಶನ್" ಸ್ಥಾಪಿತವಾಯಿತು. ಕೇಂದ್ರ ಅರ್ಥಮಂತ್ರಿ ಖಾತೆಗೂ ಈ ಸಂಸ್ಥೆಗೂ ನೇರ ಸಂಬಂಧವಿದೆ.

ಜೀವವಿಮಾ ಕಾರ್ಪೋರೇಶನ್ನಿನ ನೌಕರರಾಗ ಬಯಸುವವರ ನೂಕು ನುಗ್ಗಲು ಹೇಳತೀರದಾಗಿದೆ. ಇಲ್ಲಿಯ ನೌಕರರಲ್ಲಿ ಬಹಳ ಮಂದಿ ಪದವೀಧರರಿದ್ದು ಅವರ ವೇತನ ಮಟ್ಟ ಸಹ ಆಕರ್ಷಣೀಯವಾಗಿದೆ. ರಿಝರ್ವ ಬ್ಯಾಂಕಿನ ನೌಕರರ ವೇತನ ಮಟ್ಟ ದೇಶದ ಯಾವುದೇ ಇತರ ಖಾತೆಯಲ್ಲಿರುವವರ ವೇತನ ಮಟ್ಟಕ್ಕಿಂತಲೂ ಹೆಚ್ಚಾಗಿದೆ. ಅದರ ತರುವಾಯ ಅತ್ಯಧಿಕ ವೇತನ ಮಟ್ಟವನ್ನು ನೌಕರರಿಗೆ ನೀಡುವ ಸಂಸ್ಥೆ ಎಂದರೆ ಜೀವವಿಮಾ ಕಾರ್ಪೋರೇಷನ್. ಇದೇ ರೀತಿಯಲ್ಲಿ ಅಕೌಂಟಂಟ-ಜನರಲ್ ಕಚೇರಿಯನ್ನು ಬಿಟ್ಟರೆ ಅತ್ಯಧಿಕ ಪದವೀಧರರಿರುವ ಸಂಸ್ಥೆಯೆಂದರೆ ಇದೇ. ಇದರೊಡನೆ ಕಾರ್ಖಾನೆ ಗಿರಣಿಗಳಲ್ಲಿರುವಂತೆ ಬೋನಸ್ ಸೌಲಭ್ಯ ಕೂಡ ಇದೆ.

ರೇವ್ಹಿನ್ಯೂ ಖಾತೆಯಲ್ಲಿರುವಂತೆ ಕೆಳಗಿನ ನೌಕರದಾರರಿಗೆ ಬಡತಿ ಅವಕಾಶ ಇಲ್ಲಿ ಈಗ ಅಷ್ಟು ಹೆಚ್ಚಾಗಿಲ್ಲದಿದ್ದರೂ ಸಹ ಮುಂದೆ ಬಹು ಶೀಘ್ರದಲ್ಲಿಯೇ ಪರಿಸ್ಥಿತಿ ಬದಲಾಗುವುದೆಂದು ರಾಷ್ಟ್ರೀಕರಣದ ಜಾತಕದ ಆಧಾರದ ಮೇಲಿಂದ ಹೇಳಲು ಶಕ್ಯವಿದೆ. ಫಲಜ್ಯೋತಿಷ್ಯದಲ್ಲಿ ಈ ಉದ್ಯೋ

ಗಕ್ಕೆ ಸೇರಲು ಜಾತಕ ಹಾಗೂ ಗ್ರಹಯೋಗ ಹೇಗಿರಬೇಕು ಎಂಬುದನ್ನು ಪರಿಶೀಲಿಸೋಣ.

ಕಾರಕಗ್ರಹಗಳು : ಜೀವವಿಮಾ ಖಾತೆಯ ಕಾರಕಗ್ರಹವೆಂದರೆ ಬುಧನು. ಬುಧನು ಬಲಾಢ್ಯನಿರದೆ ಯಾರೂ ಈ ಖಾತೆಯಲ್ಲಿ ಅಭಿವೃದ್ಧಿ ಹೊಂದಲಾರರು.

ಬುಧನ ತರುವಾಯ ಚಂದ್ರ – ಶುಕ್ರರು ಈ ಖಾತೆಗೆ ಕೆಲಮಟ್ಟಿಗೆ ಕಾರಕರಾಗುವರು.

ಲಗ್ನ : ಲಗ್ನದ ದೃಷ್ಟಿಯಿಂದ ನೋಡಿದರೆ ವೃಷಭ, ಮಿಥುನ, ಸಿಂಹ, ಕನ್ಯಾ, ಧನು, ಮಕರ ಈ ಲಗ್ನಗಳೂ ತದನಂತರ ಮೇಷ, ತುಲಾ, ಕುಂಭ ಈ ಲಗ್ನಗಳೂ ಪೂರಕವಾಗಿರುತ್ತವೆ.

ಸ್ಥಾನ : ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ದ್ವಿತೀಯಸ್ಥಾನವೇ ಮೂಲ ಹಾಗೂ ಮುಖ್ಯವಿರುತ್ತದೆ. ಏಕೆಂದರೆ ಮಧುರವಾಗಿಯೂ ಪರಿಣಾಮಕಾರಿಯಾಗಿಯೂ ಪ್ರಭಾವ ಪೂರಕವಾಗಿಯೂ ಮಾತನಾಡಿ ಜನರಿಂದ ವಿಮೆ ಇಳಿಸಲು ಹಚ್ಚುವ ಕೌಶಲ್ಯ ದ್ವಿತೀಯಸ್ಥಾನದಲ್ಲಿರುತ್ತದೆ.

ದ್ವಿತೀಯ ಸ್ಥಾನದ ನಂತರ ಪಂಚಮ ಹಾಗೂ ದಶಮಸ್ಥಾನಗಳೂ ಪೂರಕವಾಗಿರುತ್ತವೆ.

ರಾಶಿ : ರಾಶಿದೃಷ್ಟಿಯಿಂದ ನೋಡಿದರೆ ಇಂಥ ರಾಶಿಯವರೇ ಈ ಖಾತೆಯಲ್ಲಿರುವರೆಂದು ಹೇಳಲು ಬರುವದಿಲ್ಲ.

## ವಿಭಾಗಗಳು

ಜೀವವಿಮಾ ನೌಕರ ವರ್ಗದವರಲ್ಲಿ ಮುಖ್ಯವಾಗಿ ಎರಡು ವರ್ಗಗಳು ಇರುವವು.

೧. ಆಡಳಿತೆಗಾರರ ವರ್ಗ

೨. ಡೆವ್ಹಲಪ್‌ಮೆಂಟ ವರ್ಗ

## ಆಡಳಿತೆ ವರ್ಗ

### ಅಸಿಸ್ಟಂಟ್, ಸೆಕ್ಶನ್ ಹೆಡ್, ಸುಪರಿಂಟೆಂಡೆಂಟ, ಅಸಿಸ್ಟಂಟ ಜ್ಯೂನಿಯರ ಆಫೀಸರ, ಅಸಿಸ್ಟಂಟ ಡಿವ್ಹಿಜನಲ್ ಮ್ಯಾನೇಜರ

ಈ ಎಲ್ಲ ಹುದ್ದೆಗಳು ಕಾರಕೂನಿಕೆಯ ಪ್ರಾರಂಭವಾಗುವದರಿಂದ ಖಾತೆಯ ಕಾರಕನೂ ಕಾರಕೂನಿಕೆಯ ಕಾರಕನೂ ಆದ ಬುಧನೂ ಸ್ಥಿರ ರಾಶಿಯ ಚಂದ್ರನೂ ಕಾಯದೆಕಾರಕನಾದ ಶನಿಯೂ ಬಲಾಢ್ಯರಿರುತ್ತಾರೆ.

ಅಮಲ್ದಾರಕಾರಕರಾದ ರವಿ-ಮಂಗಳ ಗ್ರಹಗಳು ಅಷ್ಟೊಂದು ಬಲಾಢ್ಯರಿರುವದಿಲ್ಲ.

## ಡೆವ್ಹಲಪ್‌ಮೆಂಟ ವರ್ಗ

### ಡೆವೆಲಪ್‌ಮೆಂಟ ಆಫೀಸರ, ಅಸಿಸ್ಟಂಟ ಬ್ರ್ಯಾಂಚ ಮ್ಯಾನೇಜರ

ಇವರೇ ನಿಜವಾಗಿ ಈ ಖಾತೆಯ ಬೆನ್ನೆಲುಬು. ಇವರು ಯಾವಾಗಲೂ ಪ್ರವಾಸ ಮಾಡುವದರಿಂದ ಇವರ ಜಾತಕದಲ್ಲಿ ಅನೇಕ ಗ್ರಹಗಳು ಲಗ್ನ, ತೃತೀಯ, ಸಪ್ತಮ, ಭಾಗ್ಯ ಈ ಸ್ಥಾನಗಳಲ್ಲಿಯೇ ಇರುವದಲ್ಲದೆ, ಚಂದ್ರ ಹಾಗೂ ಲಗ್ನವು ಚರ ರಾಶಿಯಲ್ಲಿರುವವು.

ಮಾತುಗಾರಿಕೆ ಮೂಲ ಹಾಗೂ ಮುಖ್ಯವಿರುವದರಿಂದ ದ್ವಿತೀಯೇಶ ಹಾಗೂ ದ್ವಿತೀಯಸ್ಥಾನ ಬಲಾಢ್ಯವಿರುತ್ತವೆ.

ಚಂದ್ರ, ಶುಕ್ರ, ಬುಧ, ಗುರು ಇವರು ಬಲಾಢ್ಯರಾಗಿ ದ್ವಿತೀಯಸ್ಥಾನದಲ್ಲಿರುವರು.

### ಬ್ರ್ಯಾಂಚ ಮ್ಯಾನೇಜರ, ಅಸಿಸ್ಟಂಟ ಡಿವ್ಹಿಜನಲ್ ಮ್ಯಾನೇಜರ, ಡಿವ್ಹಿಜನಲ್ ಮ್ಯಾನೇಜರ, ಲೋಕಲ್ ಮ್ಯಾನೇಜರ

ಇವರ ಕೆಲಸ ಪ್ರಾಮುಖ್ಯವಾಗಿ ವಿಮೆಯ ವೃತ್ತಿಗಿಂತ ಆಡಳಿತೆ ಹಾಗೂ ಮೇಲ್ವಿಚಾರಣೆಯೇ ಹೆಚ್ಚಿರುತ್ತದೆ.

ಅಧಿಕಾರಿ ಯೋಗ : ಇವರು ಡೆವ್ಹಲಪ್‌ಮೆಂಟ ವಿಭಾಗದಿಂದಲೇ ಬಂದವರಿದ್ದು ಆಡಳಿತೆಯ ಕೆಲಸವನ್ನೂ ಡೆವ್ಹಲಪ್‌ಮೆಂಟ ಕೆಲಸವನ್ನೂ ಮೇಲ್ವಿಚಾರಣೆ ಮಾಡುವದರಿಂದ ಆಡಳಿತೆ ಕಾರಕಗ್ರಹಗಳಾದ ಗುರು, ರವಿ, ಮಂಗಳರು ಬಲಾಢ್ಯರಿದ್ದು ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುತ್ತವೆ.

ಡೆವ್ಹಲಪ್‌ಮೆಂಟ ವಿಭಾಗದಿಂದ ಬಂದವರಿರುವದರಿಂದ ಈ ವಿಭಾಗದ ಕಾರಕನೂ ಖಾತೆಯ ಕಾರಕನೂ ಆದ ಬುಧನು ಸ್ಥಾನಬಲದವನೂ ರಾಶಿಬಲ ದವನೂ ಇದ್ದು ದ್ವಿತೀಯೇಶ, ಪಂಚಮೇಶರು ಬಲಾಢ್ಯರಿರುತ್ತಾರೆ.

## ೪೨ ಸ್ಟೇಟ ಟ್ರಾನ್ಸಪೋರ್ಟ್ ಖಾತೆ

(State Transpcrt Dept.)

ಈ ಮೊದಲು ಅನೇಕ ಖಾಸಗಿ ಸಂಸ್ಥೆಗಳು ನಡೆಸುತ್ತಿದ್ದ ಎಲ್ಲ ಸಂಸ್ಥೆ ಗಳನ್ನು ರಾಷ್ಟ್ರೀಕರಣಗೊಳಿಸಿ ಸ್ಟೇಟ ಟ್ರಾನ್ಸಪೋರ್ಟ್ ಕಾರ್ಪೊರೇಶನ್ ವನ್ನು ನಿರ್ಮಿಸಲಾಗಿವೆ.

ಕಾರಕಗ್ರಹ : ಕಾರ್ಪೋರೇಶನ್ ಖಾತೆಯು ಕಾರಕಗ್ರಹವಾದ ಬುಧನೇ ಈ ಖಾತೆಗೆ ಮುಖ್ಯ ಕಾರಕಗ್ರಹನಿದ್ದರೂ ಇನ್ನೂ ಅನೇಕ ಗ್ರಹಗಳನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಈ ಖಾತೆಯಲ್ಲಿ ವಿವಿಧ ಉಪಭಾಗ ಗಳಿದ್ದು ವಿವಿಧ ಉಪಭಾಗಗಳಿಗೆ ವಿವಿಧ ಗ್ರಹಗಳು ಕಾರಕವಿರುತ್ತವೆ. ವಿವಿಧ ಭಾಗಗಳು ಈ ಕೆಳಕಂಡಂತೆ ಇರುತ್ತವೆ :

೧. ಟ್ರಾಫಿಕ್ (Traffic Section)
೨. ಆಡಳಿತ ವಿಭಾಗ (Administrative Branch)
೩. ಮೆಕ್ಯಾನಿಕಲ್ ವಿಭಾಗ
೪. ಅಕೌಂಟ್ಸ್ ಹಾಗೂ ಆಡಿಟ್ ವಿಭಾಗ
೫. ಯೋಜನೆ ವಿಭಾಗ (Planning Section)
೬. ಸಾಮಾನ್ಯ ವಿಭಾಗ (Generɜl)

ಈ ಭಿನ್ನಭಿನ್ನ ವಿಭಾಗಗಳಿಗೆ ಬೇರೆ ಬೇರೆ ಗ್ರಹಗಳು ಕಾರಕವಾಗುವ್ರು ದರಿಂದ ಖಾತೆಯ ಕಾರಕಗ್ರಹವಾದ ಬುಧನೊಂದಿಗೆ ಆಯಾ ವಿಭಾಗಗಳ ಕಾರಕಗ್ರಹಗಳನ್ನು ಪರಿಶೀಲಿಸಬೇಕು.

ಆಡಳಿತ ವಿಭಾಗಕ್ಕೆ ರವಿ–ಗುರು ಇವರನ್ನೂ, ಮೆಕ್ಯಾನಿಕಲ್ ವಿಭಾಗಕ್ಕೆ ಶನಿ-ಮಂಗಳರನ್ನೂ, ಯೋಜನೆ ವಿಭಾಗಕ್ಕೆ ಗುರುವನ್ನೂ ಅಕೌಂಟ್ಸ್ ವಿಭಾಗಕ್ಕೆ ಕೇವಲ ಬುಧನೊಬ್ಬನನ್ನೂ ಟ್ರಾಫಿಕ್ ವಿಭಾಗಕ್ಕೆ ಚಂದ್ರನನ್ನೂ ಸಾಮಾನ್ಯ ಕೆಲಸಕ್ಕಾಗಿ ರವಿಯನ್ನು ಪರಿಶೀಲಿಸಬೇಕು.

ಸ್ಥಾನ : ಈ ಖಾತೆಯ ಕಾರಕಸ್ಥಾನವೂ ಕೂಡ ನಿರ್ದಿಷ್ಟವೆಂದು ಹೇಳಲಿಕ್ಕೆ ಬಾರದಿದ್ದರೂ ಟ್ರಾಫಿಕ್ ವಿಭಾಗದ ನೌಕರದಾರರಿಗೆ ತೃತೀಯ, ಭಾಗ್ಯ, ಲಗ್ನ ಈ ಸ್ಥಾನಗಳನ್ನೂ, ಆಡಳಿತೆಯ ವಿಭಾಗದ ನೌಕರದಾರರಿಗೆ ಲಗ್ನ,ಪಂಚಮ, ನವಮ ಈ ಸ್ಥಾನಗಳನ್ನೂ ,ಯೋಜನೆಯ ವಿಭಾಗದ ನೌಕರ ದಾರರಿಗೆ ಕೇವಲ ಪಂಚಮ ಸ್ಥಾನವನ್ನೂ, ಅಕೌಂಟ್ಸ್ ವಿಭಾಗದ ನೌಕರ ದಾರರಿಗೆ ಪಂಚಮ ಹಾಗೂ ತೃತೀಯಸ್ಥಾನಗಳನ್ನೂ,ಮೆಕ್ಯಾನಿಕಲ್ ಹಾಗೂ ಸಾಮಾನ್ಯ ವಿಭಾಗದ ನೌಕರದಾರರಿಗೆ ದಶಮ ಸ್ಥಾನವನ್ನೂ ಪರಿಶೀಲಿಸ ಬೇಕಾಗುತ್ತದೆ.

ಲಗ್ನ : ಲಗ್ನದ ದೃಷ್ಟಿಯಿಂದ ವಿಚಾರಿಸಿದರೆ ಭಿನ್ನ ಭಿನ್ನ ವಿಭಾಗದ ನೌಕರದಾರರಿಗೆ ಭಿನ್ನ ಭಿನ್ನ ಲಗ್ನಗಳು ಕಾರಕವಾಗುತ್ತವೆ.

ಟ್ರಾಫಿಕ್ ವಿಭಾಗದ ನೌಕರದಾರರಿಗೆ ಮೇಷ, ಕರ್ಕ, ತುಲಾ,ವೃಶ್ಚಿಕ, ಮಕರ, ಮೀನ ಈ ಲಗ್ನಗಳು ಆಡಳಿತೆ ವಿಭಾಗದ ನೌಕರದಾರರಿಗೆ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನಗಳು ಕಾರಕವಿದ್ದು ಯೋಜನೆಯ ವಿಭಾಗದ ನೌಕರದಾರರಿಗೆ ವೃಷಭ, ಮಿಥುನ, ಕನ್ಯಾ, ಧನು, ಮಕರ, ಕುಂಭ, ಮೀನ ಈ ಲಗ್ನಗಳು ಕಾರಕವಿರುತ್ತವೆ. ಮೆಕ್ಯಾನಿಕಲ್ ಹಾಗೂ ಅಕೌಂಟ್ಸ್ ವಿಭಾಗದ ನೌಕರರ ಕುರಿತು ಿನೆಯ ಪ್ರಕರಣದಲ್ಲಿ ವಿವೇಚಿಸಲಾಗಿದೆ.

## ಡಿವ್ಹಿಜನಲ್ ಟ್ರಾಫಿಕ್ ಆಫೀಸರ್, ಅಸಿಸ್ಟಂಟ ಡಿವ್ಹಿಜನಲ್ ಟ್ರಾಫಿಕ್ ಆಫೀಸರ್, ಟ್ರಾಫಿಕ್ ಕಂಟ್ರೋಲರ್ (Stand Controller)

ಟ್ರಾಫಿಕ್ ವಿಭಾಗದ ಈ ಅಧಿಕಾರಿಗಳು ಟ್ರಾಫಿಕ್ ವಿಭಾಗದ ಹಿರಿಯ ಹಾಗೂ ಜವಾಬ್ದಾರಿ ಅಧಿಕಾರಿಗಳಿರುವುದರಿಂದ ಟ್ರಾಫಿಕ್ ವಿಭಾಗದ ಕಾರಕ ಗ್ರಹವಾದ ಚಂದ್ರನೂ, ಖಾತೆಯ ಕಾರಕಗ್ರಹವಾದ ಬುಧನೂ ಬಲಾಢ್ಯನಿರು ವರಲ್ಲದೆ ಆಪಳಿತೆ ಕಾರಕಗ್ರಹಗಳಾದ ರವಿ-ಗುರು ಇವರು ಬಲಾಢ್ಯರಿರುತ್ತಾರೆ, ಇವರು ಹೆಚ್ಚಾಗಿ, ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನದವರೇ ಇರುವುದು ಕಂಡುಬರುತ್ತದೆ.

## ಟ್ರಾಫಿಕ್ ಇನ್ಸ್‌ಪೆಕ್ಟರ್, ಅಸಿಸ್ಟಂಟ ಟ್ರಾಫಿಕ್ ಇನ್ಸ್‌ಪೆಕ್ಟರ್, ಕಂಡಕ್ಟರ್ಸ್

ಟ್ರಾಫಿಕ್ ವಿಭಾಗದಲ್ಲಿಯ ಈ ನೌಕರದಾರರಿಗೆ ಪ್ರವಾಸ ಬಹಳ ವಿರುವುದರಿಂದ ಇವರ ಜಾತಕದಲ್ಲಿ ಈ ಕೆಳಗಿನ ಯೋಗಗಳಿರುವುದು ಕಂಡು ಬರುತ್ತದೆ.

೧. ಅನೇಕ ಗ್ರಹಗಳು ಲಗ್ನ, ತೃತೀಯ, ವ್ಯಯ, ಸಪ್ತಮ, ಭಾಗ್ಯ ಈ ಸ್ಥಾನಗಳಲ್ಲಿರುವುವು. ಹೆಚ್ಚಾಗಿ, ಲಗ್ನ ತೃತೀಯ, ಸಪ್ತಮ ಈ ಸ್ಥಾನ ಗಳಲ್ಲಿರುವುವು.

೨. ಚರ ಇಲ್ಲವೆ ದ್ವಿಸ್ವಭಾವ ರಾಶಿಯ ಲಗ್ನಗಳಿರುತ್ತವೆ.

೩. ಅನೇಕ ಗ್ರಹಗಳು ಚರ ಇಲ್ಲವೆ ದ್ವಿಸ್ವಭಾವ ರಾಶಿಯಲ್ಲಿರುತ್ತವೆ –ವಿಶೇಷವಾಗಿ ರವಿ ಚಂದ್ರರು.

೪. ಇವರ ಜಾತಕದಲ್ಲಿ ಮಂಗಳನು ರಾಶಿಬಲದವನಿದ್ದು ಸ್ಥಾನಬಲದವ ನಿರುವುದಿಲ್ಲ.

೫. ಅಷ್ಟಮ ಸ್ಥಾನವೂ, ಅಷ್ಟಮ ಸ್ಥಾನದಲ್ಲಿರುವ ಗ್ರಹವೂ, ಅಷ್ಟಮೇಶನೂ ಬಲಾಢ್ಯರಿರುತ್ತಾರೆ.

೬. ಅಷ್ಟಮೇಶನ ಶುಭಸಂಬಂಧವು ಪಂಚಮೇಶ, ಚಂದ್ರ, ಬುಧ, ಮಂಗಳರೊಂದಿಗೆ ಇರುತ್ತದೆ.

### ಜನರಲ್ ಮ್ಯಾನೇಜರ್, ಡೆಪ್ಯುಟಿ ಜನರಲ್ ಮ್ಯಾನೇಜರ್, ಡಿವ್ಹಿಜನಲ್ ಕಂಟ್ರೋಲರ್

ಆಡಳಿತೆ ವಿಭಾಗದ ಹಿರಿಯ ಅಧಿಕಾರಿಗಳಾದ ಇವರ ಜಾತಕದಲ್ಲಿ ಆಡಳಿತ ಕಾರಕಗ್ರಹಗಳಾದ ರವಿ, ಗುರು, ಮಂಗಳರು ಬಲಾಢ್ಯರಿದ್ದು ಆಡಳಿತ ಕಾರಕಸ್ಥಾನಗಳಾದ ಲಗ್ನ, ಪಂಚಮ, ಭಾಗ್ಯ ಈ ಸ್ಥಾನಗಳೂ, ಸ್ಥಾನಾಧೀಶರೂ ಬಲಾಢ್ಯರಿರುತ್ತಾರೆ. ಯೋಗಕಾರಕ ಗ್ರಹಗಳೂ ಕೂಡ ಬಲಾಢ್ಯವಿರುತ್ತವೆ. ಇದರ ವಿವರಣೆಯನ್ನು ೩ ನೇ ಪ್ರಕರಣದ ಅಧಿಕಾರಿ ವರ್ಗದಲ್ಲಿ ಕೊಡಲಾಗಿದೆ.

### ಚೀಫ್ ಮೆಕ್ಯಾನಿಕಲ್ ಇಂಜನಿಯರ್, ಡಿವ್ಹಿಜನಲ್ ಮೆಕ್ಯಾನಿಕಲ್ ಇಂಜನಿಯರ್, ವರ್ಕ್‌ಶಾಪ್ ಸುಪರಿಂಟೆಂಡೆಂಟ್ಸ್, ಡಿಪೋ ಮ್ಯಾನೇಜರ್, ಮೆಕ್ಯಾನಿಕ್

ಈ ಮೊದಲಾದ ಇಂಜನಿಯರ್ಸ್ ಹಾಗೂ ತಾಂತ್ರಿಕ ಸಿಬ್ಬಂದಿ ವರ್ಗದವರ ಬಗ್ಗೆ ೩ ನೇ ಪ್ರಕರಣದಲ್ಲಿ ಕೊಡಲಾಗಿದೆ.

## ೪೩ ಗ್ರಾಮ ಪಂಚಾಯತಿ, ತಾಲೂಕಾ ಬೋರ್ಡ, ಡಿಸ್ಟ್ರಿಕ್ ಬೋರ್ಡ, ನಗರಸಭೆ, ಕಾರ್ಪೋರೇಶನ್ ಇತ್ಯಾದಿ ಖಾತೆಗಳು

ಸದ್ಯದ ಅಣುವಿಜ್ಞಾನ ಯುಗದಲ್ಲಿ ಗ್ರಾಮಪಂಚಾಯತಿಯಿಂದ ಹಿಡಿದು ದೊಡ್ಡ ಕಾರ್ಪೋರೇಶನ್ ಕಚೇರಿಗಳಿಗೆ ಬಹಳಷ್ಟು ಮಹತ್ವವಿದೆ. ಈ ಕಚೇರಿಗಳು ಒಂದು ಹಳ್ಳಿಯಿಂದ ಹಿಡಿದು ದೊಡ್ಡ ಶಹರದ ವರೆಗೆ ಆಡಳಿತೆ

ಯನ್ನು ಕಾಯ್ದುಕೊಂಡು ಹೋಗುವ ಮಹತ್ತ್ವದ ಬಲವಾದ ಸಾಧನೆಗಳಾಗಿರು ವದನ್ನು ಕಾಣಬಹುದು. ಲೋಕಶಾಯಿ ತತ್ತ್ವದಾಡಳಿತೆಯ ಮೇಲೆ ಚುನಾಯಿತ ಸದಸ್ಯವರ್ಗದಿಂದ ಗ್ರಾಮಪಂಚಾಯತಿಯಲ್ಲಿ ಗ್ರಾಮದ ಆಡಳಿತೆ, ಕಾರ್ಪೋರ್ ರೇಶನದಲ್ಲಿ ದೊಡ್ಡ ಶಹರದ ಆಡಳಿತೆ ಸಾಗಿಸಲ್ಪಡುತ್ತದೆ. ಸ್ವಚ್ಛತೆ ಕಾಯ್ದು ಕೊಳ್ಳುವದು, ನಾಗರಿಕರಿಗೆ ಅನುಕೂಲವಾದ ರಸ್ತೆ, ರಹದಾರಿ ನಿರ್ಮಿಸುವದು, ನಿರೀನ ವ್ಯವಸ್ಥೆ ಮಾಡುವದು, ವಿದ್ಯುಚ್ಛಕ್ತಿ ಪೂರೈಸುವದು, ಪ್ರಯಾಣದ ವ್ಯವಸ್ಥೆ ಮಾಡುವದು, ಮಾರ್ಕೆಟ ಕಟ್ಟಡ ನಿರ್ಮಿಸುವದು ಇವೇ ಮೊದಲಾದ ನಿತ್ಯ ಜೀವನಕ್ಕೆ ಅವಶ್ಯವೆನಿಸುವ ಮಹತ್ವದ ಕಾರ್ಯಗಳನ್ನು ನಾಗರಿಕರ ಅನುಕೂಲತೆಗಳಿಗಾಗಿ ನಿರ್ಮಿಸುವದಕ್ಕೋಸ್ಕರವೇ ಮೇಲಿನ ಖಾತೆಗಳು ಬೆಳೆಸಲ್ಪಟ್ಟಿವೆ ಅಲ್ಲವೇ? ಫಲಜ್ಯೋತಿಷ್ಯದಲ್ಲಿ ಈ ಖಾತೆಗಳಿಗೆ ಪೂರಕವಾದ ಜಾತಕ ಹೇಂತಹದಿರಬೇಕು, ಕಾರಕಗ್ರಹಗಳು ಯಾವವು ಎಂಬುದನ್ನು ಪರಿಶೀಲಿಸೋಣ.

ಕಾರಕಗ್ರಹ : ಪಂಚಾಯತಿ, ಮುನಸಿಪಲ್ ಕಾರ್ಪೋರೇಶನ್ ಈ ಮೊದಲಾದ ನೌಕರಿ ಕಾರಕಗ್ರಹವೆಂದರೆ ಶನಿಯು. ಶನಿಯು ರಾಶಿಬಲ ದವನೂ, ಸ್ಥಾನಬಲದವನೂ ಇರಬೇಕಾಗುತ್ತದೆ. ಶನಿಯ ತರುವಾಯ ಚಂದ್ರ, ಶುಕ್ರ, ಬುಧ ಕಾರಕರಾಗುತ್ತಾರೆ.

ಲಗ್ನ : ಈ ಖಾತೆಗಳಲ್ಲಿಯ ನವಕರದಾರರು ಯಾವ ಕಾರಣ ದಿಂದಲೂ ತಮ್ಮ ಸ್ಥಳವನ್ನು (Place of Office) ಬಿಟ್ಟು ಬೇರೆ ಸ್ಥಳ ಗಳಿಗೆ ಹೋಗುವ ಅವಕಾಶ ಇಲ್ಲದಿರುವ (Non-transferable) ಸೌಕರ್ಯ ಹೊಂದಿರುವದರಿಂದ, ಇವರು ಒಂದು ವಿಧದಲ್ಲಿ ಸುದೈವಿಗಳೆಂದೇ ಹೇಳಬಹುದು. ಮೇಲಿಂದ ಮೇಲೆ ಬೇರೆ ಸ್ಥಳಗಳಿಗೆ ಬದಲಿಯಾಗಿ ಮಕ್ಕಳ ವಿದ್ಯಾಭ್ಯಾಸ ಮೊದಲಾದ ಅಡಚಣೆಗಳಿಗೆ ಎಡೆಯಾಗುತ್ತಿರುವ ಇತರ ಖಾತೆ ಗಳಲ್ಲಿಯ ನವಕರದಾರರಿಗಿಂತ ಇವರ ಜೀವನ ಮೊದಲಿನಿಂದ ಕೊನೆಯ ವರೆಗೆ ಒಂದೇ ಸ್ಥಳದಲ್ಲಿದ್ದು ತಮ್ಮ ಮನೆ, ಮಕ್ಕಳಿಗೋಸ್ಕರ ಸ್ಥಿರವಾದ ಆಸ್ತಿ ಮಾಡಲು ಅನುಕೂಲವಾಗುತ್ತದೆ.

ಈ ಖಾತೆಗಳಲ್ಲಿ ಕೆಲಸ ಮಾಡುವ ನವಕರದಾರರಿಗೆ ಸ್ಥಾನಾಂತರ ವಿರುವದಿಲ್ಲವಾದುದರಿಂದ ಇವರ ಜಾತಕದಲ್ಲಿ ಹೆಚ್ಚಾಗಿ ಸ್ಥಿರ ರಾಶಿಗಳ ಲಗ್ನಗಳಾದ ವೃಷಭ, ಸಿಂಹ, ವೃಶ್ಚಿಕ, ಕುಂಭ, ಈ ಲಗ್ನಗಳು ಇರುವದು ಕಂಡುಬರುತ್ತದೆ.

ಸ್ಥಾನ : ಸ್ಥಾನದೃಷ್ಟಿಯಿಂದ ನೋಡಲಾಗಿ ಉದ್ಯೋಗದ ಸ್ಥಾನವೂ ಶನಿಯ ನೈಸರ್ಗಿಕ ಸ್ಥಾನವೂ ಆದ ದಶಮ ಸ್ಥಾನವೇ ಈ ಖಾತೆಯ ಕಾರಕ ಸ್ಥಾನವೆಂದು ಹೇಳಬಹುದು. ದಶಮೇಶ ಹಾಗು ಶನಿಯು ಯೋಗಕಾರಕರಿರುವದರಿಂದ ಈರ್ವರೂ ಬಲಾಢ್ಯರಿರುವ ಜಾತಕನು ಈ ಖಾತೆಯಲ್ಲಿ ಉತ್ಕರ್ಷವನ್ನು ಹೊಂದುವನು.

ರಾಶಿ : ಈ ಖಾತೆಯಲ್ಲಿ ಕೆಲಸ ಮಾಡುವವರ ಜಾತಕದಲ್ಲಿ ಹೆಚ್ಚಾಗಿ ಸ್ತ್ರೀರಾಶಿಗಳೇ (ಸ್ತ್ರೀ ರಾಶಿಯಲ್ಲಿ ಚಂದ್ರ) ಇರುವದು ಕಂಡುಬರುತ್ತದೆ.

ಯೋಗಗಳು :

೧. ಸರಕಾರೀ ಕಾರಕಗ್ರಹವಾದ ರವಿಯು ದುರ್ಬಲನಿರುವನು.
೨. ಗುರುಗ್ರಹವು ರಾಶಿಬಲದ್ದಿದ್ದರೂ ಸ್ಥಾನಬಲದ್ದಿರುವದಿಲ್ಲ.
೩. ಅನೇಕ ಗ್ರಹಗಳು ಸ್ಥಿರರಾಶಿಯಲ್ಲಿಯೂ, ದ್ವಿತೀಯ, ಚತುರ್ಥ, ಪಂಚಮ, ಅಷ್ಟಮ, ದಶಮ, ಏಕಾದಶ ಈ ಸ್ಥಾನಗಳಲ್ಲಿಯೂ ಹೆಚ್ಚಾಗಿ ಇರುತ್ತವೆ.
೪. ಅನೇಕ ಗ್ರಹಗಳು ಅನುದಿತ ಗೋಲಾರ್ಧದಲ್ಲಿರುತ್ತವೆ.
೫. ಅನೇಕ ಗ್ರಹಗಳು ಸ್ಥಾನಬಲವಿರದೆ ರಾಶಿಬಲದವಿರುತ್ತವೆ.

ಈ ಖಾತೆಯಲ್ಲಿ ಪ್ರಮುಖರಾದ ಆಡಳಿತ ವರ್ಗದ ಸೆಕ್ರೆಟರಿ,
ಚೀಫ ಆಫೀಸರ, ಕಮೀಶನರ ಇತ್ಯಾದಿ

ಇವರು ಒಂದೊಂದು ಘಟಕದ ಪ್ರಮುಖರಿದ್ದು ಇಡೀ ನಗರದ ಅಥವಾ ಶಹರದ ಆಡಳಿತೆಯು ಇವರ ಹೆಸರಿನಲ್ಲಿ ಸಾಗಿಸಲ್ಪಡುತ್ತದೆ. ಆಡಳಿತೆಯ

ವರ್ಗ ಇವರ ಆಧೀನದಲ್ಲಿದ್ದು, ಚುನಾಯಿತ ವರ್ಗದವರ ಆದೇಶದಂತೆ (Elected body) ಇವರು ಗ್ರಾಮದ, ನಗರದ, ಶಹರದ ಆಡಳಿತೆಯನ್ನು ನಿರ್ವಹಿಸುತ್ತಾರೆ. ಫಲಜ್ಯೋತಿಷ್ಯದಲ್ಲಿ ಸೆಕ್ರೆಟರಿ, ಚೀಫ ಆಫೀಸರ ಹಾಗು ಕಮೀಶನರ ಇವರೆಲ್ಲ ಒಂದೇ ವರ್ಗದಲ್ಲಿ ಬರುತ್ತಾರೆ. ಏಕೆಂದರೆ ಕಾರ್ಯ ದೃಷ್ಟಿಯಿಂದ ಇವರ ಹುದ್ದೆ ಒಂದೇ ವರ್ಗದಲ್ಲಿ ಬರುತ್ತದೆ.

ಕಾರಕಗ್ರಹ: ಖಾತೆಯ ಕಾರಕನಾದ ಶನಿಯಂತೂ ಬಲಾಢ್ಯನಿರಲೇ ಬೇಕಲ್ಲದೆ, ಆಡಳಿತೆ ಸಾಗಿಸುವ ಅಧಿಕಾರಿಗಳಾಗಿರುವದರಿಂದ ಆಡಳಿತೆಕಾರಕ ರಾದ ರವಿ, ಗುರು, ಮಂಗಳರು ಕೇವಲ ರಾಶಿಬಲದವರಿದ್ದು ಸ್ಥಾನಬಲವವ ರಿರುವದಿಲ್ಲ. ಅಥವಾ ಈ ಗ್ರಹಗಳು ಸ್ಥಾನ ಹಾಗೂ ರಾಶಿಬಲದವರಿದ್ದರೂ ವಕ್ರ, ಅಸ್ತ, ವೃದ್ಧಾಪ್ಯದ, ಬಾಲ್ಯಾವಸ್ಥೆಯವರಾಗಿರುವರು.

ಲಗ್ನ: ಸ್ಥಿರ ರಾಶಿಗಳ ಲಗ್ನಗಳೇ ಹೆಚ್ಚಾಗಿರುವದು ಕಂಡುಬರು ತ್ತದೆ.

ರಾಶಿ: ಸ್ತ್ರೀ ರಾಶಿಯಲ್ಲಿಯ ಗ್ರಹಗಳೇ ಹೆಚ್ಚಾಗಿರುತ್ತವೆ.

ಸ್ಥಾನ: ದಶಮಸ್ಥಾನವೇ ಈ ನವಕರದಾರರ ಕಾರಕಸ್ಥಾನವಾಗಿರು ತ್ತದೆ.

ಯೋಗ: ೧. ಇವರು ಸದಾಕಾಲ ಚುನಾಯಿತ ವರ್ಗದ ಧೋರಣೆ ಯಂತೆಯೇ ತಮ್ಮ ಕಾರ್ಯವನ್ನು ನಿರ್ವಹಿಸಬೇಕಾಗುವದರಿಂದ, ಷಷ್ಠ ಸ್ಥಾನದಲ್ಲಿ ಶುಭಗ್ರಹಗಳೂ, ಷಷ್ಠೇಶ ಹಾಗೂ ಭಾಗ್ಯೇಶರು ದುರ್ಬಲರೂ ಇರುವದನ್ನು ಕಾಣಬಹುದು.

೨. ದಶಮೇಶನು ಬಲಾಢ್ಯನಿದ್ದು ಆಡಳಿತೆ ಕಾರಕಗ್ರಹಗಳೊಂದಿಗೆ ಶುಭಯೋಗ ಮಾಡುವವನಿರುತ್ತಾನೆ.

೩. ಇವರು ಆಡಳಿತೆಯ ಪ್ರಮುಖರಿರುವದರಿಂದ ಸ್ತ್ರೀರಾಶಿಯಲ್ಲಿಯ ಗ್ರಹಗಳೇ ಹೆಚ್ಚಾಗಿದ್ದರೂ ಚಂದ್ರನು ಮಾತ್ರ ಪುರುಷ ರಾಶಿಯಲ್ಲಿರುತ್ತಾನೆ.

## ಈ ಖಾತೆಯಲ್ಲಿಯ ತದನಂತರ ಪ್ರಮುಖರಾದ ಹೆಲ್ಥ ಆಫೀಸರ (ಆರೋಗ್ಯಾಧಿಕಾರಿ), ಚೀಫ ಶ್ಯಾನಿಟರಿ ಇನಸ್ಪೆಕ್ಟರ ಇತ್ಯಾದಿ

ಇವರ ಪ್ರಮುಖವಾದ ಕೆಲಸವೆಂದರೆ ಶಹರದ ಆರೋಗ್ಯವನ್ನು ಕಾಯ್ದುಕೊಂಡು ಹೋಗುವದಲ್ಲದೆ ಕಮೀಶನರ ಅಥವಾ ಚೀಫ ಅಫೀಸರ ಮೊದಲಾದ ತಮ್ಮ ಪ್ರಮುಖರ ಆದೇಶದಂತೆ ಶಹರದ ಆರೋಗ್ಯವನ್ನು ಕಾಪಾಡುವದು. ಸಾಮಾನ್ಯವಾಗಿ ಡಾಕ್ಟರ ಜಾತಕದಲ್ಲಿರುವ ಯೋಗಗಳೇ ಇವರ ಜಾತಕದಲ್ಲಿದ್ದು ಮುನಸಿಪಲ್, ಕಾರ್ಪೊರೇಶನ್ ನವಕರಿ ಯೋಗ ಗಳೇ ಇವರ ಜಾತಕದಲ್ಲಿ ಪ್ರಮುಖವಾಗಿರುವವಲ್ಲದೆ ಈ ಕೆಳಗಿನ ವಿಶಿಷ್ಟ ಯೋಗಗಳನ್ನು ಕಾಣಬಹುದಾಗಿದೆ.

೧. ಇವರ ಜಾತಕದಲ್ಲಿ ಮಂಗಳಗ್ರಹಕ್ಕಿಂತ ಶನಿಯೇ ಬಲಾಢ್ಯನಿರುವನು.
೨. ಲಗ್ನವು ಪುರುಷರಾಶಿಯಲ್ಲಿದ್ದು ಲಗ್ನೇಶನು ದುರ್ಬಲನಿರುವನು.
೩. ಭಾಗ್ಯೇಶನಿಗಿಂತ, ದಶಮೇಶನೇ ಹೆಚ್ಚು ಬಲಾಢ್ಯನಿರುವನು.
೪. ರವಿ, ಮಂಗಳ, ಗುರುಗಳು ಸ್ಥಾನಬಲವಿಲ್ಲದೆ ರಾಶಿಬಲದವರಿರುತ್ತಾರೆ.
೫. ಪಂಚಮೇಶನಿಗಿಂತ ದ್ವಿತೀಯೇಶನು ಬಲಾಢ್ಯನಿರುತ್ತಾನೆ.
೬. ಅನೇಕ ಗ್ರಹಗಳು ಪುರುಷರಾಶಿಯಲ್ಲಿದ್ದರೂ ಚಂದ್ರನು ಸ್ತ್ರೀ ರಾಶಿ ಯಲ್ಲಿರುವನು.
೭. ಮಧ್ಯಮ ವಯಸ್ಸಿನಲ್ಲಿ ಯೋಗಕಾರಕ ಗ್ರಹಗಳ ದಶೆ ಇಲ್ಲದಿರುವದು.

## ಈ ಖಾತೆಯಲ್ಲಿಯ ಸಿಟಿ ಇಂಜನೀಯರ, ಮುನಸಿಪಲ್ ಇಂಜನೀಯರ್ಸ ಇತ್ಯಾದಿ ಇಂಜನೀಯರಿಂಗ ಅಧಿಕಾರಿಗಳು

ಇವರ ಪ್ರಾಮುಖ್ಯವಾದ ಕೆಲಸ ಕಮೀಶನರ ಅಥವಾ ಚೀಫ ಆಫೀಸರ ಇಲ್ಲವೆ ಚುನಾಯಿತ ವರ್ಗದ ಆದೇಶದಂತೆಯೇ ನಗರದ, ಶಹರದಲ್ಲಿಯ ಇಂಜನೀಯರಿಂಗ ಕಾರ್ಯಗಳನ್ನು ನಿರ್ವಹಿಸುವದಿರುತ್ತದೆ. ಇವರ

ಜಾತಕದಲ್ಲಿ ಸಹ ಇತರ ಇಂಜನೀಯರರ ಜಾತಕದಲ್ಲಿರುವ ಯೋಗಗಳಂತೆಯೇ ಇದ್ದರೂ ಈ ಕೆಳಗಿನ ವಿಶಿಷ್ಟ ಯೋಗಗಳು ಪ್ರಾಮುಖ್ಯವಾಗಿ ರುವದು ಕಂಡುಬರುತ್ತದೆ.

೧. ಮುನಸಿಪಲ್, ಕಾರ್ಪೋರೇಶನ್, ಲೋಕೋಪಯೋಗಿ ಖಾತೆಗಳ ಕಾರಕನಾದ ಶನಿಯು ಮಂಗಳನಿಗಿಂತ ಬಲಾಢ್ಯನಿರುವನು.

೨. ಸರಕಾರೀ ಕಾರಕಗ್ರಹವಾದ ರವಿಯು ದುರ್ಬಲನಿರುವನು.

೩. ಪಂಚಮೇಶನು ಅಷ್ಟೊಂದು ಬಲಶಾಲಿಯಾಗಿರಲಾರನು.

೪. ಭಾಗ್ಯೇಶನಿಗಿಂತ ದಶಮೇಶನೇ ಹೆಚ್ಚು ಬಲಾಢ್ಯನಿರುವನು.

೫. ಷಷ್ಠೇಶನು ದುರ್ಬಲ ಅಥವಾ ಷಷ್ಠಮ ಸ್ಥಾನದಲ್ಲಿ ಶುಭಗ್ರಹ ವಿರುವದು.

೬. ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿದ್ದರೂ, ಚಂದ್ರನು ಪುರುಷರಾಶಿಯಲ್ಲಿರುವನು.

೭. ರವಿ-ಶನಿ, ಶನಿ-ಮಂಗಳ, ಚಂದ್ರ-ಶನಿ ಇವರ ಪ್ರತಿಯೋಗ ಇಲ್ಲವೆ ಯುತಿ ಚತುರ್ಥ, ದಶಮ, ಲಗ್ನ, ಸಪ್ತಮ, ಭಾಗ್ಯ, ತೃತೀಯ, ಷಷ್ಠ, ವ್ಯಯದಲ್ಲಿರುವದು.

೮. ಶನಿಯ ದೃಷ್ಟಿಯಲ್ಲಿ ಇಲ್ಲವೆ ಶನಿಯೊಂದಿಗೆ ಚಂದ್ರನಿರುವನು.

೯. ಆಡಳಿತೆ ಕಾರಕಗ್ರಹಗಳಾದ ರವಿ, ಗುರು, ಮಂಗಳರು ರಾಶಿಬಲದವರಿದ್ದರೂ ಸ್ಥಾನಬಲದವರಿರುವದಿಲ್ಲ; ಅಥವಾ ರಾಶಿ ಹಾಗೂ ಸ್ಥಾನ ಬಲದವರಿದ್ದರೂ ವಕ್ರ, ಅಸ್ತ, ವೃದ್ಧಾಪ್ಯ, ಬಾಲ್ಯಾವಸ್ಥೆಗಳಿಂದ ಕೂಡಿದವರಾಗಿರುತ್ತಾರೆ.

೧೦. ಇವರ ಜಾತಕದಲ್ಲಿ ಚತುರ್ಗ್ರಹಯೋಗ, ಪಂಚಗ್ರಹಯೋಗ, ಷಷ್ಠ ಗ್ರಹಯೋಗವು ತನ್ನ ಚತುರ್ಥ, ದಶಮ, ಭಾಗ್ಯವಲ್ಲಿರುವವು.

೧೧. ಚತುರ್ಥ ಸ್ಥಾನವು ಕಲುಷಿತವಿರುತ್ತದೆ.

## ಈ ಖಾತೆಯಲ್ಲಿಯ ಆಕ್ಟ್ರಾಯ್, ಟ್ಯಾಕ್ಸ ಇತ್ಯಾದಿ ವಿಭಾಗಗಳಲ್ಲಿಯ ನವಕರದಾರರು

ಇವರು ಮ್ಯುನಿಸಿಪಲ್, ಕಾರ್ಪೋರೇಶನ್ ಆಡಳಿತಕ್ಕೆ ಬೇಕಾಗುವ ಬಹಳಷ್ಟು ಹಣವನ್ನು ಕೂಡಿಸುವ ಆಡಳಿತವರ್ಗದವರಾಗಿರುತ್ತಾರೆ. ಇವರ ಜಾತಕದಲ್ಲಿ ಹೇಳಿಕೊಳ್ಳುವಂತಹ ಯೋಗಗಳಿರುವದಿಲ್ಲ. ಸಾಮಾನ್ಯ ಯೋಗ ಗಳಂತೂ ಇದ್ದೇ ಇರುತ್ತವೆ. ಇದರ ಹೊರತಾಗಿ ಕೆಳಗಿನ ವಿಶಿಷ್ಟ ಯೋಗ ಗಳಿರುವದನ್ನೂ ಕಾಣಬಹುದು.

೧. ಖಾತೆಯ ಕಾರಕನಾದ ಶನಿಯು ಸ್ಥಾನಬಲವಿಲ್ಲದೆ ರಾಶಿಬಲದವ ನಿರುತ್ತಾನೆ.

೨. ಚಂದ್ರನೂ ಹಾಗೂ ಅನೇಕ ಗ್ರಹಗಳೂ ಸ್ಥಿರರಾಶಿಯಲ್ಲಿರುತ್ತವೆ.

೩. ಬುಧನು ಸ್ಥಾನಬಲವಿಲ್ಲದೆ ರಾಶಿಬಲದವನಿರುತ್ತಾನೆ.

೪. ಆಡಳಿತೆ ಕಾರಕಗ್ರಹಗಳಾದ ರವಿ, ಮಂಗಳ, ಗುರುಗಳು ದುರ್ಬಲರಿರು ತ್ತಾರೆ.

೫. ಕಾರಕೂನಕೀ ಕಾರಕ ಗ್ರಹಗಳ ಯೋಗಗಳೇ ಇರುತ್ತವೆ.

೬. ಪಂಚಮೇಶನಿಗಿಂತ ದ್ವಿತೀಯೇಶನು ಬಲಾಢ್ಯನಿರುತ್ತಾನೆ.

## ಈ ಖಾತೆಯಲ್ಲಿಯ ಚೀಫ ಆಡಿಟರ, ಡಿಟರ, ಆಚೀಫ ಅಕೌಂಟಂಟ ಇತ್ಯಾದಿ ಅಧಿಕಾರಿಗಳು

ಇವರು ಒಂದು ವಿಧದಿಂದ ಸ್ವತಂತ್ರವಾದ ಅಧಿಕಾರಿಗಳಾಗಿರುತ್ತಾ ರಲ್ಲದೆ ಇವರ ಕೆಲಸ ಇತರ ಖಾತೆಯಲ್ಲಿಯ ಕೆಲಸದಂತೆಯೇ ಇರುತ್ತದೆ. ಇವರ ಜಾತಕವು ಇತರ ಖಾತೆಯಲ್ಲಿಯ ಇತರ ಜಾತಕದಂತೆಯೇ ಇದ್ದು ಕೆಳಗಿನ ಕೆಲ ವಿಶಿಷ್ಟ ಯೋಗಗಳಿಂದ ಕೂಡಿರುತ್ತದೆ.

೧. ಖಾತೆಯ ಕಾರಕವಾದ ಶನಿಯು ಸ್ಥಾನಬಲದವನಿರದೆ ರಾಶಿಬಲದವ ನಿರುತ್ತಾನೆ.

೨. ಇವರ ಹುದ್ದೆಯ ಕಾರಕನಾದ ಬುಧನು ಸ್ಥಾನಬಲದವನಿರದೆ ರಾಶಿ ಬಲದವನಿರುತ್ತಾನೆ. ಇಲ್ಲವೆ ರಾಶಿಬಲ ಹಾಗೂ ಸ್ಥಾನಬಲದವನಿದ್ದರೂ ಕೂಡಾ ಅಸ್ತ, ವಕ್ರ, ವೃದ್ಧಾಪ್ಯ, ಬಾಲ್ಯಾವಸ್ಥೆ, ಪಾಪಗ್ರಹಮಧ್ಯ ದಿಂದ ಕೂಡಿರುತ್ತಾನೆ.

೩. ಚಂದ್ರನು ಹಾಗೂ ಇತರ ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿರುತ್ತವೆ.

೪. ಆಡಳಿತಕಾರಕ ಗ್ರಹವಾದ ರವಿ, ಮಂಗಳ, ಗುರುಗಳು ದುರ್ಬಲರಿ ರುತ್ತಾರೆ.

೫. ದ್ವಿತಿಯೇಶನಿಗಿಂತ ಪಂಚಮೇಶನು ಬಲಾಢ್ಯನಿರುತ್ತಾನೆ.

## ೪೪ ವಿಶ್ವವಿದ್ಯಾಲಯ

(University)

ಇಂದಿನ ಅಣುಯುಗದಲ್ಲಿ ವಿಶ್ವವಿದ್ಯಾಲಯಗಳ ಮಹತ್ವ ದಿನೇ ದಿನೇ ಹೆಚ್ಚಾಗುತ್ತಲಿದೆ. ಪ್ರತಿಯೊಬ್ಬನೂ ತನ್ನ ಜ್ಞಾನವನ್ನು ಹೆಚ್ಚಿಸಿ ಒಂದು ವಿಶಿಷ್ಟವಾದ ಹಿರಿಮೆಯನ್ನು ಪಡೆಯಲು ವಿಶ್ವವಿದ್ಯಾಲಯವನ್ನು ಪ್ರವೇಶಿ ಸಲೇಬೇಕಾಗುತ್ತದೆ. ವಿಶ್ವವಿದ್ಯಾಲಯವು ಜ್ಞಾನದ ಅಳತೆಯ ಮಹತ್ವದ ಸಾಧನವಾಗಿ ಪರಿಣಮಿಸಿದೆ. ಹೊಸ ಹೊಸ ಶಾಸ್ತ್ರಗಳು, ವಿಷಯಗಳು ನೈಸರ್ಗಿಕವಾಗಿಯೇ ಬೆಳೆದಿರುವಂತೆ ವಿಶ್ವವಿದ್ಯಾಲಯದಲ್ಲಿ ವಿವಿಧ ಶಾಸ್ತ್ರಗಳ, ವಿಷಯಗಳ ಪೂರ್ಣಜ್ಞಾನವನ್ನು ಬೆಳೆಸಿಕೊಳ್ಳಲು ಅವಕಾಶ ಕಲ್ಪಿಸಿಕೊಡ ಲಾಗುತ್ತಿದೆ. ಹೀಗಾಗಿ ಈ ವಿಶ್ವವಿದ್ಯಾಲಯಗಳ ಕಾರ್ಯಕ್ಷೇತ್ರವು ದಿನೇ ದಿನೇ ಬೆಳೆಯುತ್ತ ಸಾಗಿದೆ. ಈ ವಿಶ್ವವಿದ್ಯಾಲಯದಲ್ಲಿ ಕೆಲಸ ಮಾಡುವವರ ಸಂಖ್ಯೆ ಸಹ ದಿನೇ ದಿನೇ ಹೆಚ್ಚುತ್ತಲಿದೆ. ಈ ವಿದ್ಯೆಯ ಆಗರವಾದ ಈ ಖಾತೆಯಲ್ಲಿ ನವಕರಿ ಮಾಡಲು ಜಾತಕ ಹೇಗಿರಬೇಕು. ಜ್ಯೋತಿಷ್ಯದ ವ್ಯಾಖ್ಯೆ ಏನು, ಕಾರಕಗ್ರಹಗಳಾವವು ಎಂಬುದನ್ನು ವಿವೇಚಿಸೋಣ.

ಕಾರಕಗ್ರಹ : ಶಿಕ್ಷಣಕ್ಕೆ ಪ್ರಮುಖವಾದ ಈ ಖಾತೆಯಲ್ಲಿ ಜ್ಞಾನ ಹಾಗೂ ವಿದ್ಯೆ ಕಾರಕವಾದ ಗುರುಗ್ರಹವೇ ಶಿಕ್ಷಣಖಾತೆಯು ಕಾರಕಗ್ರಹ

ವೆಂದು ಹೇಳಬಹುದು. ಗುರುವಿನ ತರುವಾಯ ಬುಧನೂ ಕೆಲಮಟ್ಟಿಗೆ ಕಾಂಕನೆಂದು ಹೇಳಬಹುದು.

ಲಗ್ನ : ವಿಶ್ವವಿದ್ಯಾಲಯಗಳಲ್ಲಿ ಸಾಮಾನ್ಯವಾಗಿ ಒಂದೇ ಸ್ಥಳದಲ್ಲಿ ವಿವಿಧ ಕೆಲಸಗಾರರಿಂದ ಕಾರ್ಯಾಚರಣೆಯಾಗುವದರಿಂದ ಇಲ್ಲಿಯ ಕೆಲಸ ಗಾರರಿಗೆ ಸಾಮಾನ್ಯವಾಗಿ ಸ್ಥಳಾಂತರ ಇಲ್ಲವೆ ಬದಲೀ ಯೋಗ ಕಂಡು ಬರುವದಿಲ್ಲ (Non-transferable) ವಾದುದರಿಂದ ಇವರ ಜಾತಕಗಳಲ್ಲಿ ಸ್ಥಿರರಾಶಿಗಳಾದ ವೃಷಭ, ಸಿಂಹ, ವೃಶ್ಚಿಕ, ಕುಂಭ ಈ ಲಗ್ನಗಳೂ ತದ ನಂತರ ದ್ವಿಸ್ವಭಾವ ರಾಶಿಗಳಾದ ಮಿಥುನ, ಕನ್ಯಾ, ಧನು, ಮೀನ ಲಗ್ನ ಗಳಿರುವದೇ ಹೆಚ್ಚಾಗಿ ಕಂಡುಬರುತ್ತದೆ.

ಸ್ಥಾನ : ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ ಪಂಚಮಸ್ಥಾನವೇ ಈ ಖಾತೆಯ ಸ್ಥಾನವೆಂದು ಹೇಳಬಹುದು. ಪಂಚಮೇಶ, ಹಾಗೂ ಗುರು ಇವರ ಶುಭಾಶುಭ ಯೋಗಗಳ ಮೇಲೆಯೇ ಜಾತಕನ ನವಕರಿಯ ಖಾತೆ ಅವಲಂಬಿಸಿರುತ್ತದೆ.

ರಾಶಿ : ರಾಶಿದೃಷ್ಟಿಯಿಂದ ಪರಿಶೀಲಿಸಿದರೆ ಬೌದ್ಧಿಕ ರಾಶಿಗಳಾದ ಮಿಥುನ, ತುಲಾ, ಕುಂಭ ರಾಶಿಯ ಜನರೂ ತದನಂತರ ಚರ ರಾಶಿಗಳಾದ ಕರ್ಕ, ವೃಶ್ಚಿಕ, ಮೀನ ಈ ರಾಶಿಯ ಜನರೂ ಹೆಚ್ಚಾಗಿರುವದನ್ನು ಕಾಣ ಬಹುದಾಗಿದೆ.

ಯೋಗಗಳು : ಈ ಖಾತೆಯಲ್ಲಿಯ ನವಕರಿ ಮಾಡುವವರ ಜಾತಕ ದಲ್ಲಿ ಕೆಲವೊಂದು ನಿರ್ದಿಷ್ಟವಾದ ಯೋಗಗಳನ್ನು ಕಾಣಬಹುದು.

೧. ಅನೇಕ ಗ್ರಹಗಳು ಸ್ಥಿರರಾಶಿಯಲ್ಲಿಯೂ ದ್ವಿತೀಯ, ಚತುರ್ಥ, ಪಂಚಮ, ಷಷ್ಠ, ಅಷ್ಟಮ, ದಶಮ, ಏಕಾದಶ ಈ ಸ್ಥಾನಗಳಲ್ಲಿಯೂ ಹೆಚ್ಚಾಗಿರುತ್ತವೆ.

೨. ಗುರುವು ಬಲಾಢ್ಯನಾಗಿ ಪಂಚಮ, ಲಗ್ನ, ದ್ವಿತೀಯ, ಭಾಗ್ಯ, ದಶಮ, ಏಕಾದಶ ಈ ಸ್ಥಾನದಲ್ಲಿಯೇ ಇರುವದು ಕಂಡುಬರುತ್ತದೆ.

೩. ಸರಕಾರೀ ಕಾರಕಗ್ರಹವಾದ ರವಿಯು ದುರ್ಬಲನಿರುವನು.

೪. ಅನೇಕ ಗ್ರಹಗಳು ಅನುದಿತ ಗೋಲಾರ್ಧದಲ್ಲಿರುತ್ತವೆ.

೫. ಅನೇಕ ಗ್ರಹಗಳು ಸ್ಥಾನಬಲದವಿರದೆ ರಾಶಿಬಲದವಾಗಿರುತ್ತವೆ.

ಈ ಖಾತೆಯಲ್ಲಿ ಕಂಡುಬರುವ ಪ್ರಮುಖ ಹುದ್ದೆಗಳು

**ಕುಲಪತಿ :**

ಸಾಮಾನ್ಯವಾಗಿ ಚುನಾಯಿತರಾಗಿ ಇಡೀ ವಿಶ್ವವಿದ್ಯಾಲಯದ ಕಾರ್ಯ ಭಾರವನ್ನು ನಿರ್ವಹಿಸುತ್ತಿರುವ ಅತಿ ಪ್ರಮುಖ ಹುದ್ದೆ ಎಂದರೆ ಕುಲಪತಿ ಎಂದು ಹೇಳಬಹುದು. ಆದರೆ ವಿಶ್ವವಿದ್ಯಾಲಯಗಳ ಹೊಸ ಕಾಯಿದೆ ಯನ್ವಯ ಈ ಹುದ್ದೆಗೆ ಕುಲಾಧಿಪತಿಯಾದ ರಾಜ್ಯಪಾಲನು ನೇಮಕ ಮಾಡುತ್ತಲಿದ್ದಾನೆ. ಈ ಹುದ್ದೆಯ ಯೋಗಗಳು ಜ್ಯೋತಿಷ್ಯದ ದೃಷ್ಟಿ ಯಿಂದ ಅಭ್ಯಾಸಾತ್ಮಕವಾಗಿದ್ದು, ಈ ಹುದ್ದೆಯ ವಿಷಯವಾಗಿ ಕೂಲಂಕಷ ವಾಗಿ ಪ್ರತ್ಯೇಕ ಪ್ರಕರಣದಲ್ಲಿ ವಿವೇಚಿಸಲಾಗಿದೆ.

ವಿ. ಸೂ. : ಉಪಕುಲಪತಿಯ ವಿಷಯವಾಗಿ ನಮ್ಮ ಚುನಾವಣೆ ಜ್ಯೋತಿಷ್ಯದ ಗ್ರಂಥದಲ್ಲಿಯೂ ಉದ್ಯೋಗ ಜ್ಯೋತಿಷ್ಯದ ಎರಡನೇ ಭಾಗ "ವೃತ್ತಿಜ್ಯೋತಿಷ್ಯ" ದಲ್ಲಿಯೂ ವಿವರವಾಗಿ ಕೊಡಲಾಗಿದೆ.

ರಜಿಸ್ಟ್ರಾರ, ಡೆಪ್ಯುಟಿ ರಜಿಸ್ಟ್ರಾರ, ಅಸಿಸ್ಟಂಟ ರಜಿಸ್ಟ್ರಾರ ಇತ್ಯಾದಿ

ಒಂದು ದೃಷ್ಟಿಯಿಂದ ನೋಡಲಾಗಿ ವಿಶ್ವವಿದ್ಯಾಲಯದ ಮುಖ್ಯಾಧಿ ಕಾರಿಯೆಂದರೆ "ರಜಿಸ್ಟ್ರಾರ" (ಕುಲಸಚಿವ) ಎಂದೇ ಹೇಳಬಹುದು. ಆದರೆ ಎಲ್ಲ ಮಹತ್ವದ ಕಾಗದಪತ್ರಗಳಿಗೆ ರುಜುವಾಗಲು, ಆಡಳಿತೆಯಲ್ಲಿಯ ಕಾರ್ಯದಕ್ಷತೆಗಾಗಿ ನವಕರರ ನಿನೇಮಣೂಕಿ, ಬಡತಿ, ಬದಲಿ, ಕಡಿಮೆ ಮಾಡುವ ಪರೀಕ್ಷೆಗಳ ಪರಿಣಾಮ ಸಾರುವಿಕೆ, ನಿಯಮಗಳ ರಚನೆ ಇವೇ ಮೊದಲಾದ ವಿವಿಧ ಕಾರ್ಯಗಳಿಗೆ ಕುಲಪತಿಯ ಅಭಿಪ್ರಾಯವೇ ಅಂತಿಮ ತೀರ್ಮಾನವಾಗುವದರಿಂದ ಇನ್ನೊಂದು ರೀತಿಯಲ್ಲಿ "ರಜಿಸ್ಟ್ರಾರ ಹುದ್ದೆ" ಇತರ ಆಫೀಸಿನಲ್ಲಿಯ ಕಾರಕೂನನಂತೆ ಸರಿ ಹೋಲುವದೆಂದು ಹೇಳಿದರೂ ತಪ್ಪಾಗಲಾರದು.

**ಕಾರಕಗ್ರಹ :** ವಿಶ್ವವಿದ್ಯಾಲಯದ ಖಾತೆಯ ಕಾರಕನೂ ಜ್ಞಾನ ಹಾಗೂ ವಿದ್ಯೆಯ ಕಾರಕನೂ ಆದ ಗುರುವೂ ಬುದ್ಧಿಯ ಕಾರಕನಾದ ಬುಧನೂ ಕಾರಕಗ್ರಹಗಳೆಂದು ಹೇಳಬಹುದು.

ಇವರ ಕಾರ್ಯ ಆಡಳಿತೆಯ ಬಹು ಭಾಗ [illegible]ದ್ದರೂ ಸಹ ಇವರ ಜಾತಕದಲ್ಲಿ ಆಡಳಿತೆ ಕಾರಕಗ್ರಹಗಳಾದ ಗುರು, ಬುಧ, ಮಂಗಳ ಗ್ರಹಗಳಲ್ಲಿ ಗುರುಗ್ರಹವೊಂದೇ ಬಲಾಢ್ಯನೂ ಯೋಗಕಾರಕನೂ ಇದ್ದು ರವಿ-ಮಂಗಳರು ದುರ್ಬಲರಿರುವರು.

**ಲಗ್ನ :** ಇವರ ಜಾತಕಗಳಲ್ಲಿ ವೃಷಭ. ಸಿಂಹ, ಕನ್ಯಾ, ವೃಶ್ಚಿಕ, ಕುಂಭ, ಧನು, ಮಿಥುನ, ಮೀನ ಈ ಲಗ್ನಗಳೇ ಹೆಚ್ಚಾಗಿರುವದು ಕಂಡು ಬರುತ್ತದೆ.

**ಸ್ಥಾನ :** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಪಂಚಮ ಹಾಗೂ ದ್ವಿತೀಯಸ್ಥಾನಗಳೇ ಈ ಖಾತೆಯ ಸ್ಥಾನಗಳಿದ್ದು, ಈ ಸ್ಥಾನಾಧೀಶರು ಬಲಾಢ್ಯರಿರುವಷ್ಟು ಬೇರೆ ಯಾವದೆ ಖಾತೆಯ ನವಕರದಾರರಲ್ಲಿ ಇರುವದು ಕಂಡುಬರುವದಿಲ್ಲ.

**ರಾಶಿ :** ಸ್ತ್ರೀರಾಶಿಯಲ್ಲಿಯ ಗ್ರಹಗಳೇ ಹೆಚ್ಚಾಗಿರುವದನ್ನು ಕಾಣ ಬಹುದು.

ವಿಶ್ವವಿದ್ಯಾಲಯದಲ್ಲಿ ಸಾಮಾನ್ಯವಾಗಿ ಕೆಳಗಿನಂತೆ ವಿಭಾಗಗಳನ್ನು ಕಾಣಬಹುದು.

೧. ಆಡಳಿತೆಯ ವಿಭಾಗ

೨. ಪರೀಕ್ಷಾ ವಿಭಾಗ

೩. ಎಕೆಡೆಮಿಕ್ ವಿಭಾಗ (Academic Section)

೪. ಪಬ್ಲಿಕೇಶನ್ ಹಾಗೂ ಸ್ಟೋರ್ಸ ವಿಭಾಗ

೫. ಲೆಕ್ಕ ಪತ್ರದ ವಿಭಾಗ (Accounts)

೬. ವಾಚನಾಲಯ ವಿಭಾಗ

೧) ಆಡಳಿ[illegible] ವಿಭಾಗ : ಆಡಳಿತೆಯ ವಿಭಾಗದಲ್ಲಿ ಕೆಲಸ ಮಾಡುತ್ತಿರುವ [illegible] ಖಾತೆಯ ಕಾರಕನಾದ ಗುರುವಿನ ಹೊರ್ತಾಗಿ ರವಿಯೂ ಅನುಕೂಲನಿದ್ದು ದಶಮೇಶನು ಬಲಾಢ್ಯನಿದ್ದು ಚಂದ್ರನು ಪುರುಷರಾಶಿಯಲ್ಲಿರುತ್ತಾನೆ.

೨) ಪರೀಕ್ಷಾ ವಿಭಾಗ : ಈ ವಿಭಾಗದಲ್ಲಿ ಕೆಲಸ ಮಾಡುತ್ತಿರುವ ನವಕರದಾರರಿಗೆ ಖಾತೆಯ ಕಾರಕನಾದ ಗುರುವಿನ ಹೊರತಾಗಿ ಬುಧನೂ ಬಲಾಢ್ಯನಿರುವನಲ್ಲದೇ ಪಂಚಮೇಶ ಹಾಗೂ ಪಂಚಮ ಸ್ಥಾನದಲ್ಲಿರುವ ಗ್ರಹ ಬಲಾಢ್ಯರಿದ್ದು ವಾಯುರಾಶಿಯಲ್ಲಿಯೇ ಹೆಚ್ಚು ಗ್ರಹಗಳು ಇರುವವು. ವಿಶೇಷವಾಗಿ ಚಂದ್ರನು ವಾಯುರಾಶಿಯಲ್ಲಿರುವನು.

೩) ಅಕೆಡೆಮಿಕ ಸೆಕ್ಶನ್ : ಈ ವಿಭಾಗದಲ್ಲಿ ಕೆಲಸ ಮಾಡುತ್ತಿರುವವರ ಜಾತಕದಲ್ಲಿ ಖಾತೆಯ ಕಾರಕನಾದ ಗುರುವಿನ ಹೊರ್ತಾಗಿ ಕಾಯದೆಯ ಕಾರಕನಾದ ಶನಿಯೂ ಪರಿಕ್ಷಾಕಾರಕನಾದ ಬುಧನೂ ಬಲಾಢ್ಯರಿರುವರಲ್ಲದೆ ದ್ವಿತೀಯೇಶ ಹಾಗೂ ಪಂಚಮೇಶರು ಬಲಾಢ್ಯರಿರುತ್ತಾರೆ.

೪) ಪಬ್ಲಿಕೇಶನ್ ಹಾಗೂ ಸ್ಟೋರ್ಸ ವಿಭಾಗ : ಈ ವಿಭಾಗದಲ್ಲಿ ಕೆಲಸ ಮಾಡುವವರ ಜಾತಕದಲ್ಲಿ ಖಾತೆಯ ಕಾರಕನಾದ ಗುರುವಿಗಿಂತ ಬುಧನೇ ಹೆಚ್ಚು ಬಲಾಢ್ಯನಿರುವನಲ್ಲದೆ ದಶಮೇಶ, ಲಾಭೇಶ, ಪಂಚಮೇಶರು ಬಲಾಢ್ಯರಿರುತ್ತಾರೆ.

೫) ಲೆಕ್ಕಪತ್ರಗಳ ವಿಭಾಗ : ಈ ವಿಭಾಗದಲ್ಲಿಯ ನವಕರದಾರರ ಜಾತಕದಲ್ಲಿ ಬುಧನೇ ಗುರುಗ್ರಹಕ್ಕಿಂತ ಬಲಾಢ್ಯನಿದ್ದು ಚಂದ್ರನು ಸ್ತ್ರೀರಾಶಿಯಲ್ಲಿರುವನಲ್ಲದೆ ಅನೇಕ ಗ್ರಹಗಳು ಅನುದಿತಗೋಲಾರ್ಧದಲ್ಲಿರುವವು.

೬) ವಾಚನಾಲಯ ವಿಭಾಗ : ಈ ವಿಭಾಗದಲ್ಲಿ ಕೆಲಸ ಮಾಡು ತ್ತಿರುವ ನವಕರದಾರರಿಗೆ ಖಾತೆಯ ಕಾರಕನಾದ ಗುರುವಿನ ಹೊರತಾಗಿ ವಾಚನಾಲಯದ ಕಾರಕನಾದ ಬುಧನೂ ಪಂಚಮೇಶ-ದ್ವಿತೀಯೇಶರೂ ಬಲಾಢ್ಯರಿರಬೇಕಲ್ಲದೆ ಪಂಚಮ ಸ್ಥಾನ, ದ್ವಿತೀಯ ಸ್ಥಾನಗಳೂ ಬಲಾಢ್ಯ ವಿದ್ದು, ಚಂದ್ರನು ಸ್ತ್ರೀರಾಶಿಯಲ್ಲಿರುವನು.

## ೪೫ ಖಾದೀ ಗ್ರಾಮೋದ್ಯೋಗ ಖಾತೆ

೧೯೫೪ರಲ್ಲಿ ಖಾದಿ ಗ್ರಾಮೋದ್ಯೋಗ ಮಂಡಳಿ ಪ್ರಾರಂಭವಾಯಿತು. ೧೯೫೬ರಲ್ಲಿ ಲೋಕಸಭೆಯು ಖಾದೀ ಹಾಗೂ ಗ್ರಾಮೋದ್ಯೋಗದ ಬೆಳವಣಿಗೆಗಾಗಿ ಕಾನೂನು ಮಾಡಿ ಖಾದೀ ಗ್ರಾಮೋದ್ಯೋಗ ಖಾತೆಯನ್ನು ನಿರ್ಮಿಸಿತು. ಆದರೆ ಈ ಖಾತೆ ಪ್ರತ್ಯಕ್ಷವಾಗಿ ಕಾರ್ಯ ಕೈಕೊಂಡದ್ದು ೧೯೫೭ರ ಎಪ್ರಿಲ್ ತಿಂಗಳಿನಲ್ಲಿ ಎಂದು ಕಂಡುಬಂದಿದೆ. ಕಾನೂನಿನ ಪ್ರಕಾರ ಖಾದೀ ಹಾಗೂ ಗ್ರಾಮೋದ್ಯೋಗದ ವಿವಿಧ ಕ್ಷೇತ್ರಗಳಲ್ಲಿ ಅದರ ಉತ್ಪತ್ತಿ ಹಾಗೂ ಯೋಜನೆಗಾಗಿ ಪೂರ್ಣ ಅಧಿಕಾರವನ್ನು ಹೊಂದಿರುತ್ತದೆ.

ಸದ್ಯಕ್ಕೆ ಈ ಖಾತೆಯಲ್ಲಿ ಖಾದಿ, ಎಣ್ಣೆ, ಚರ್ಮ, ಕಡ್ಡಿಪೆಟ್ಟಿಗೆ, ಬೆಲ್ಲ, ಕೈಯಿಂದ ಮಾಡಿದ ಕಾಗದ, ಪಾತ್ರೆಗಳು, ಜೇನು ಸಾಕುವದು, ನೂಲು, ನೀರಾ, ಕಮ್ಮಾರಿಕೆ, ಬಡಿಗತನ, ಅಂಬರಚರಕಾ ಇತ್ಯಾದಿ ವಿವಿಧ ಗ್ರಾಮೋದ್ಯೋಗಗಳು ಕಾರ್ಯರೂಪದಲ್ಲಿವೆ.

ಈ ಖಾತೆಗೆ ಕೇಂದ್ರ ಹಾಗೂ ರಾಜ್ಯಸರಕಾರಗಳು ಅವಶ್ಯಬಿದ್ದ ಹಣದ ಸಹಾಯವನ್ನು ಸಲ್ಲಿಸುತ್ತಿವೆ. ಹೀಗಾಗಿ ಈ ಖಾತೆ ತಾತ್ಪೂರ್ತಿಕವಿದ್ದು ಆಡಳಿತೆ ಸರಕಾರದ ಧೋರಣೆಯ ಮೇಲೆಯೇ ಮುಂದುವರೆಸಲ್ಪಡುತ್ತದೆ ಎನ್ನಲಡ್ಡಿಯಿಲ್ಲ.

ಈ ಖಾತೆಯು ಮುಖ್ಯವಾಗಿ ಕೇಂದ್ರ ಸರಕಾರದ ಮೇಲ್ವಿಚಾರಣೆಯಲ್ಲಿ ಖಾದೀ ಗ್ರಾಮೋದ್ಯೋಗದ ಆಯೋಗ (Khadi and Village Industries Commission) ವೆಂದೂ, ವಿವಿಧ ರಾಜ್ಯ ಸರಕಾರಗಳ ಆಡಳಿತೆ

ಯಲ್ಲಿ ಖಾದೀ ಗ್ರಾಮೋದ್ಯೋಗ ಮಂಡಳ (State Khadi and Village Industries Boards) ವೆಂದೂ ಕಾರ್ಯರೂಪದಲ್ಲಿದೆ. ಇಷ್ಟೊಂದು ಈ ಖಾತೆಯ ಹಿನ್ನೆಲೆಯಲ್ಲಿ ಜ್ಯೋತಿಷ್ಯದ ದೃಷ್ಟಿಯಿಂದ ಈ ಖಾತೆಯ ವಿಷಯವಾಗಿ ಸ್ಥೂಲವಾಗಿ ವಿಚಾರಿಸೋಣ.

**ಕಾರಕಗ್ರಹ :** ಖಾದಿ, ಗ್ರಾಮೋದ್ಯೋಗವೆಂದರೆ ಒಂದು ವಿಧದಿಂದ ಕೈಗಾರಿಕೆ ವೃತ್ತಿ ಇದ್ದಂತೆ ಎನ್ನಬಹುದು.

ಈ ಕೈಗಾರಿಕೆ ವೃತ್ತಿಯ ಕಾರಕನಾದ ಶನಿಯೇ ಈ ಖಾತೆಯ (ಬೋರ್ಡ ಹಾಗೂ ಕಮೀಶನ್) ಕಾರಕಗ್ರಹವಾಗುವನು. ಶನಿಯು ಬಲಾಢ್ಯ ನಿರದೆ ಯಾರೂ ಈ ಖಾತೆಯಲ್ಲಿ ಅಭಿವೃದ್ಧಿಯನ್ನು ಹೊಂದಲಾರರು.

ಶನಿಯ ತರವಾಯ ಬುಧನೂ ಕೆಲಮಟ್ಟಿಗೆ ಕಾರಕವಾಗುವನು. ಯಾಕೆಂದರೆ ಇಲ್ಲಿ ಉತ್ಪಾದಿಸಿದ ವಸ್ತುಗಳ ಮಾರಾಟ ಗುಣಧರ್ಮವುಳ್ಳ ಬುಧನೂ ಕಾರಕವಾಗುವನು.

**ಲಗ್ನ :** ವೃಷಭ, ತುಲಾ, ಮಿಥುನ, ಕುಂಭ, ವೃಶ್ಚಿಕ, ಮಕರ ಈ ಲಗ್ನಗಳು ಅನುಕ್ರಮವಾಗಿ ಈ ಖಾತೆಯ ಉದ್ಯೋಗದ ಲಗ್ನಗಳಾಗಿರುತ್ತವೆ.

**ಸ್ಥಾನ :** ಸ್ಥಾನದೃಷ್ಟಿಯಿಂದ ನೋಡಿದರೆ ನೈಸರ್ಗಿಕ ಸ್ಥಾನವಾದ ದಶಮಸ್ಥಾನವೇ ಈ ಖಾತೆಯ ಕಾರಕಸ್ಥಾನವಾಗುವದರಿಂದ ದಶಮೇಶನೂ ಹಾಗೂ ದಶಮಸ್ಥಾನವೂ ಬಲಾಢ್ಯವಿರಬೇಕು.

ಖಾದೀ ಗ್ರಾಮೋದ್ಯೋಗ ಖಾತೆಯಲ್ಲಿ ಅಭಿವೃದ್ಧಿ (Development) ವಿಭಾಗವಿದ್ದು ಈ ವಿಭಾಗದ ನವಕರದಾರರ ಕೆಲಸವು ಸಣ್ಣ ಪ್ರಮಾಣದ ಕಾರಖಾನೆ ಹಾಗೂ ಗಿರಣಿ ಕೆಲಸಗಾರರಂತೆ ಇರುವದರಿಂದ ಚತುರ್ಥ

ಸ್ಥಾನವೂ, ಷಷ್ಠಸ್ಥಾನವೂ ಕೂಡಾ ಈ ಖಾತೆಯ ಕಾರಕಸ್ಥಾನವಾಗುವದರಿಂದ ಈ ಸ್ಥಾನಾಧೀಶರು ಇಲ್ಲಿಯ ಅಧಿಕಾರಿ ನವಕರದಾರರಲ್ಲಿ ಬಲಾಢ್ಯರಿಬೇಕು.

ರಾಶಿ : ರಾಶಿದೃಷ್ಟಿಯಿಂದ ಪರಿಶೀಲಿಸಲಾಗಿ ನಿರ್ದಿಷ್ಟ ರಾಶಿಗಳೇ ಇರಬೇಕೆಂಬ ನಿಯಮವಿಲ್ಲ.

ಈ ಖಾತೆಯಲ್ಲಿಯ ನವಕರ ವರ್ಗ :

ಈ ಖಾತೆಯಲ್ಲಿ ಚೇರಮನ್, ವ್ಹಾಯಿಸ ಚೇರಮನ್, ಸೆಕ್ರೆಟರಿ, ಹಾಗೂ ಇತರ ಸದಸ್ಯರ ಮಂಡಳವಿದ್ದು, ಈ ಮಂಡಳದಿಂದ ಈ ಖಾತೆಯ ಕಾರ್ಯ, ಧೋರಣೆಗಳು ರೂಪಿಸಲ್ಪಡುತ್ತವೆ. ಈ ಮಂಡಳದ ಆಧೀನದಲ್ಲಿ ನಾಲ್ಕು ವಿಧದ ನವಕರರ ವರ್ಗವನ್ನು ಕಾಣಬಹುದಾಗಿದೆ. ಮೊದಲನೆಯದಾಗಿ ಸರಕಾರದಿಂದ ನಿಯಮಿಸಲ್ಪಟ್ಟ ( On deputation from Government ) ಅಧಿಕಾರಿಗಳ ಒಂದು ವರ್ಗ, ಎರಡನೆಯವಾಗಿ ಖಾತೆಯಲ್ಲಿಯೇ ಆಯೋಗ ಅಥವಾ ಮಂಡಳದಿಂದ ನಿಯಮಿಸಲ್ಪಟ್ಟ ಅಧಿಕಾರಿ ವರ್ಗ, ಮೂರನೆಯದಾಗಿ Development ವಿಭಾಗಕ್ಕಾಗಿ ಪ್ರತ್ಯೇಕವಾಗಿ ನಿಯಮಿಸಲ್ಪಟ್ಟ Development Officer, instructors ಇತ್ಯಾದಿ ಅಧಿಕಾರಿ ವರ್ಗ, ನಾಲ್ಕನೆಯದಾಗಿ ಇತರ ಕಾರಕೂನಿಕೆ ಹಾಗೂ ಕೆಲಸಗಾರರ ವರ್ಗ.

ಈ ಪ್ರಕಾರವಾಗಿ ವಿವಿಧ ಹುದ್ದೆಗಳು ಈ ಖಾತೆಯಲ್ಲಿ ಕಾರ್ಯರೂಪದಲ್ಲಿದ್ದುದು ಕಂಡುಬರುತ್ತದೆ. ಆದುದರಿಂದ ವಿಶಿಷ್ಟವಾದ ಹುದ್ದೆಯನ್ನು ಜೋತಿಷ್ಯದ ದೃಷ್ಟಿಯಿಂದ ಪರಿಶೀಲಿಸಲು ಮೇಲಿನ ಗ್ರಹಮಾನವನ್ನು ಸೂಕ್ಷ್ಮವಾಗಿ ವಿವೇಚಿಸಬೇಕು.

## ೪೬ ಕಾರ್ಯನಿರತ ಪತ್ರಿಕೋದ್ಯೋಗಿಗಳು

ಇಂದು ದೇಶ-ವಿದೇಶಗಳಲ್ಲಿ ಕಾರ್ಯನಿರತ ಪತ್ರಿಕೋದ್ಯಮಿಗಳ ಸಂಖ್ಯೆ ಬೆಳೆದಿದೆ. ಫಲಜ್ಯೋತಿಷ್ಯದಲ್ಲಿ ಇಂಥ ಉದ್ಯೋಗಕ್ಕೆ ಕಾರಕರು ಯಾರು ಎಂಬುದನ್ನು ನೋಡುವಾ.

ಕಾರಕಗ್ರಹ : ಫಲಜ್ಯೋತಿಷ್ಯದಲ್ಲಿ ಈ ತರಹದ ಲೇಖನೀ ವ್ಯವಸಾಯೀ ಬುದ್ಧಿ ಜೀವಿಗಳ ಜೀವನೋಪಾಯದ ಕಾರಕಗ್ರಹವೆಂದರೆ ಬುಧನು. ಬುಧನು ಬಲಾಢ್ಯನಿರದೆ ಯಾರೂ ಪತ್ರಿಕೋದ್ಯಮಿಗಳಾಗಲಾರರು.

ಪತ್ರಿಕೋದ್ಯಮವೆಂದರೆ ಒಂದು ಪ್ರಕಾರದ ಕಲೆಯೇ ಎಂದು ಹೇಳಬಹುದು. ಇದು ಎಲ್ಲರಿಗೂ ಸಾಧಿಸದು. ಆದುದರಿಂದ ಸಾಹಿತ್ಯ ಕಲೆಗೆ ಕಲಾಕಾರಕನಾದ ಶುಕ್ರನು ಈ ಉದ್ಯೋಗಕ್ಕೆ ಕಾರಕನಾಗುವನು.

ಬುಧ-ಶುಕ್ರರ ತರುವಾಯ ರವಿಯೂ ಕೂಡ ಕೆಲ ಮಟ್ಟಿಗೆ ಕಾರಕನಾಗುವನು. ಏಕೆಂದರೆ ಪತ್ರಿಕೋದ್ಯಮಿ ತನ್ನ ಲೇಖನಿಯಿಂದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಸಮಸ್ಯೆಗಳನ್ನು ಬಿಡಿಸಬಲ್ಲ, ಸಮರ್ಥ ವರ್ಚಸ್ವೀ ಪುರುಷನಿರುವದರಿಂದಲೂ ವರ್ಚಸ್ವೀ ಕಾರಕಗ್ರಹನಾದ ರವಿಯೂ ಬಲಾಢ್ಯನಿರಬೇಕು. ಮೇಲೆ ತೋರಿಸಿದ ಗ್ರಹಗಳು ಸ್ಥಾನಬಲದವರೂ ರಾಶಿ ಬಲದವರೂ ಇರಬೇಕು.

ರವಿ, ಬುಧ, ಗುರು ಮಾತ್ರ ಬಲಾಢ್ಯರಿದ್ದ ವ್ಯಕ್ತಿಗಳು ಪತ್ರಿಕೋದ್ಯಮದ ಜೊತೆಗೆ ರಾಜಕಾರಣಿಗಳೂ ಆಗುವರು.

ಲಗ್ನ : ಲಗ್ನ ದೃಷ್ಟಿಯಿಂದ ನೋಡಿದರೆ ವೃಷಭ, ಮಿಥುನ, ಕನ್ಯಾ, ಧನು, ಮಕರ, ಮೇಷ, ಸಿಂಹ ಈ ಲಗ್ನದವರೇ ಹೆಚ್ಚಾಗಿರುವದು ಕಂಡು ಬರುತ್ತದೆ.

ರಾಶಿ : ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ರಾಶಿಯವರು ಶ್ರೇಷ್ಠ ಪತ್ರಿಕೋದ್ಯಮಿಗಳಾಗಬಲ್ಲರು. ತದನಂತರ ಕರ್ಕ, ವೃಶ್ಚಿಕ, ಮೀನರಾಶಿಯ ಜನರು ಪತ್ರಿಕೋದ್ಯಮದಲ್ಲಿ ಯಶಸ್ಸನ್ನು ಸಂಪಾದಿಸುವರು.

ಸ್ಥಾನ : ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಬರವಣಿಗೆಯ ಸ್ಥಾನವಾದ ಪಂಚಮ ಸ್ಥಾನವೇ ಪತ್ರಿಕೋದ್ಯಮಿಗಳ ಪೂರಕಸ್ಥಾನವಾಗಿರುತ್ತದೆ.

ಸಾಮಾನ್ಯವಾಗಿ ಪತ್ರಿಕೋದ್ಯಮದಲ್ಲಿ ೩ (ಮೂರು) ಭಾಗಗಳನ್ನು ಕಲ್ಪಿಸಬಹುದು.

೧. ಸಂಪಾದಕ ವಿಭಾಗ; ೨. ಲೆಕ್ಕಪತ್ರದ ವಿಭಾಗ (ಜಾಹೀರಾತ); ೩. ಕೆಲಸಗಾರರ ವಿಭಾಗ.

೧. **ಸಂಪಾದಕ ವಿಭಾಗ :** ಈ ವಿಭಾಗಗಳಲ್ಲಿಯೂ ಅನೇಕ ಉಪ ವಿಭಾಗಗಳಿವೆ. (ಅ) ಸಹಾಯಕ ಸಂಪಾದಕ (Assistant Editor), (ಬ) ಪ್ರಧಾನ ಲೇಖಕ ( Leader Column), (ಕ) ವಿಶೇಷ ಪ್ರತಿನಿಧಿ, (ಡ) ಮುಖ್ಯ ಉಪಸಂಪಾದಕ (Chief Sub Editor), (ಯ) ಮುಖ್ಯ ವರದಿಗಾರ (Chief reporter), (ರ) ಉಪ ಸಂಪಾದಕ, (ಲ) ವರದಿಗಾರ, (ವ) ಕರಡಚ್ಚು ಓದುವವ (Proof reader), (ಇ) ಜನರಲ್ ಮ್ಯಾನೇಜರ ಅಥವಾ ಸಂಪಾದಕ, (ಗ) ಸುದ್ದಿ ಸಂಪಾದಕ, (ಫ) ವಿಶೇಷ ಪ್ರತಿನಿಧಿ, (ಹ) ಉನ್ನತ ಪ್ರತಿನಿಧಿ, (ತ) ಮುಖ್ಯ ವರದಿಗಾರ ಇತ್ಯಾದಿ.

**ಸಂಪಾದಕ :** ವೃತ್ತ ಪತ್ರಿಕೆಯ ಸಂಪಾದಕೀಯ ಶಾಖೆಯ ಕಾರ್ಯದ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನ ಮಾಡುವವರು.

**ಸಹಾಯಕ ಸಂಪಾದಕ :** ಸಾಧಾರಣವಾಗಿ ಸಂಪಾದಕನಿಗೆ ಪತ್ರಿಕಾ-ಭಿಪ್ರಾಯ ವ್ಯಕ್ತಪಡಿಸುವದರಲ್ಲಿ ಸಹಾಯಕನಾಗಿರುವ ವ್ಯಕ್ತಿ. ಒಮ್ಮೊಮ್ಮೆ ಪತ್ರಿಕೆಯ ಪ್ರಧಾನಲೇಖನ (ಸಂಪಾದಕೀಯ)ಗಳನ್ನು ಬರೆಯುವ ಕಾರ್ಯವು ಇವರ ಪಾಲಿಗೆ ಬರುತ್ತದೆ. ವಿಮರ್ಶೆ, ಟೀಕೆ-ಟಿಪ್ಪಣೆಗಳನ್ನು ಸಹ ಇವರು ಕೆಲವು ಜಾರಿ ಬರೆಯಬೇಕಾಗುತ್ತದೆ. ಆದುದರಿಂದ ಇವರ ಜಾತಕದಲ್ಲಿ ಬುಧನೂ ಪಂಚಮೇಶನೂ ಗುರುವೂ ಬಲಾಢ್ಯರಿರುವದು ಕಂಡುಬರುತ್ತದೆ.

**ಪ್ರಧಾನ ಲೇಖನಕಾರ :** ಪತ್ರಿಕೆಯ ಪ್ರಧಾನ ಲೇಖನಗಳನ್ನು ಬರೆಯುವವರು ಇತರ ವಿಮರ್ಶೆ ಟೀಕೆ-ಟಿಪ್ಪಣೆಗಳನ್ನು ಸಹ ಬರೆಯಬಹುದು. ಇವರ ಜಾತಕದಲ್ಲಿ ಕೇವಲ ಬುಧ ಹಾಗೂ ಪಂಚಮೇಶರು ಬಲಾಢ್ಯರಿರುತ್ತಾರೆ.

ಸುದ್ದಿ ಸಂಪಾದಕ : ವೃತ್ತಪತ್ರಿಕೆಯಲ್ಲಿಯ ಸುದ್ದಿ ಶಾಖೆಯ ಮೇಲ್ವಿಚಾರಣೆ ಹಾಗೂ ಸಮನ್ವಯಗೊಳಿಸುವ ಜವಾಬ್ದಾರಿಯೂ ಅಲ್ಲದೆ ಪತ್ರಿಕೆಯಲ್ಲಿ ಪ್ರಕಟವಾಗುವ ಸುದ್ದಿಗಳಿಗೂ ಸಹ ಇವರೇ ಜವಾಬ್ದಾರರು ಇರುವದರಿಂದ ಇವರ ಜಾತಕದಲ್ಲಿ ಬುಧ ಹಾಗೂ ತೃತೀಯೇಶನು ಬಲಾಢ್ಯರಿರುತ್ತಾರೆ.

ವಿಶೇಷ ಪ್ರತಿನಿಧಿ : ಸಂಸತ್ತು, ರಾಜಕೀಯ ಮತ್ತು ಇತರ ಪ್ರಮುಖ ಸುದ್ದಿಗಳ ವ್ಯಾಖ್ಯಾನ ಹಾಗೂ ವರದಿ ಮಾಡುವ ಇವರು ಕೇಂದ್ರ ಸರಕಾರದ ಕೇಂದ್ರ ಸ್ಥಳದಲ್ಲಿ (Head quarter) ಇರಬೇಕಾಗುವದಲ್ಲದೆ ಈ ರೀತಿ ಸರಕಾರದಿಂದ ಮಾನ್ಯ ಮಾಡಲ್ಪಟ್ಟವನು. ಒಬ್ಬನಿಗಿಂತ ಹೆಚ್ಚು ಮಂದಿ ಈ ರೀತಿ ಮಾನ್ಯತೆ ಪಡೆದ ಪ್ರತಿನಿಧಿಗಳಿದ್ದರೆ ಆಗ ಈತ ಅವರಲ್ಲಿ ಮುಖ್ಯಸ್ಥನಾಗುವನು. ಇಂಥವರ ಜಾತಕದಲ್ಲಿ ಪತ್ರಿಕಾ ಕಾರಕ ಗ್ರಹವಾದ ಬುಧನೂ ರಾಜಕೀಯ ಗ್ರಹವಾದ ರವಿಯೂ ಬಲಾಢ್ಯರಿದ್ದು ಬುದ್ಧಿವಂತಿಕೆ ರಾಶಿಗಳಾದ ವಾಯುರಾಶಿಗಳೂ ಇದ್ದು ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುತ್ತವೆ. ಪಂಚಮೇಶ ಹಾಗೂ ಗುರು ಕೂಡ ಬಲಾಢ್ಯರಿರುತ್ತಾರೆ.

ಮುಖ್ಯ ಉಪಸಂಪಾದಕ : ಉಪಸಂಪಾದಕರುಗಳಿಗೆ ಕೆಲಸದ ಹಂಚಿಕೆ ಮತ್ತು ಕೆಲಸದ ಮೇಲ್ವಿಚಾರಿಕೆ ಇತ್ಯಾದಿ ಕಾರ್ಯಗಳಿರುತ್ತವೆ. ಇದರೊಡನೆ ಪತ್ರಿಕೆಯಲ್ಲಿ ಸುದ್ದಿ ಪ್ರಕಟನೆಗೆ ಸಂಬಂಧಿಸಿದ ಸ್ಥಳಾವಕಾಶ ಮೊದಲಾದವುಗಳನ್ನೂ ನಿರ್ಧರಿಸುವ ಜವಾಬ್ದಾರಿಯು ಇವರ ಮೇಲೆಯೇ ಇರುತ್ತದೆ. ಇವರ ಜಾತಕದಲ್ಲಿ ಪತ್ರಿಕಾಕರ್ತನಾದ ಬುಧನೂ ಮೇಲ್ವಿಚಾರಣೆ ಕಾರಕಗ್ರಹವಾದ ರವಿಯೂ ಬಲಾಢ್ಯರಿದ್ದು ಜಲರಾಶಿಯ ಚಂದ್ರನಿರುತ್ತಾನೆ.

ಮುಖ್ಯ ವರದಿಗಾರ : ಪತ್ರಿಕೆಗಳು ಪ್ರಕಟವಾಗುವ ಸ್ಥಳದಲ್ಲಿರುವ ವರದಿಗಾರರ ಮುಖ್ಯಸ್ಥನಾಗಿ ಅವರ ಕಾರ್ಯಗಳ ಮೇಲ್ವಿಚಾರಣೆ ನಡೆಸುವ ಈತ ಅದೇ ಸ್ಥಳದ ಪ್ರಮುಖ ಸುದ್ದಿಗಳನ್ನು ವರದಿ ಮಾಡುವನು. ಇವರ ಜಾತಕದಲ್ಲಿ ಕೇವಲ ಬುಧನೊಬ್ಬನೇ ಬಲಾಢ್ಯನಿರುವರು.

ಉಪ ಸಂಪಾದಕ : ಸುದ್ದಿಗಳನ್ನು ಸ್ವೀಕರಿಸುವದು, ಆಯ್ಕೆ ಮಾಡುವದು, ಸಂಗ್ರಹಿಸುವದು, ಸಾರಾಂಶ ಬರೆಯುವದು (ಜೇಕಾದಲ್ಲಿ ಬೆಳೆಸುವದು), ಅನ್ಯ ಭಾಷೆಯಿಂದ ಭಾಷಾಂತರಿಸುವದು, ಅವುಗಳಿಗೆ ಶಿರೋನಾಮೆ ಕೊಡುವದು ಇವೆಲ್ಲವನ್ನು ಅಥವಾ ಇವುಗಳಲ್ಲಿ ಕೆಲವನ್ನು ಮಾಡುವ ಕಾರ್ಯವು ಇವರದು.

ಇವರ ಜಾತಕದಲ್ಲಿ ಬುಧನೂ ಪಂಚಮೇಶನೂ ತೃತೀಯೇಶನೂ ಬಲಾಢ್ಯರಿದ್ದು ಚಂದ್ರನು ವಾಯುರಾಶಿಯ ಇಲ್ಲವೆ ಜಲಚರ ರಾಶಿಯುವ ನಿರುತ್ತಾನೆ.

ವರದಿಗಾರ : ಒಂದು ನಿರ್ದಿಷ್ಟ ಸ್ಥಳದಲ್ಲಿಯ ಸುದ್ದಿಯನ್ನು ಸಂಗ್ರಹಿಸಿ ಕೊಡುವ ವ್ಯಕ್ತಿ. ಇವರ ಜಾತಕದಲ್ಲಿ ಬುಧನೂ, ತೃತಿಯೇಶನೂ ಬಲಾಢ್ಯರಿರುತ್ತಾರೆ.

ಪ್ರತಿನಿಧಿ : ಯಾವದೆ ಸ್ಥಳದಲ್ಲಿ ಸಂಗ್ರಹಿಸಿದ ಸುದ್ದಿಗಳನ್ನು ತಂತಿ, ಅಂಚೆ, ಅಥವಾ ಯಾವದೆ ಮೂಲಕವಾಗಲಿ ಪತ್ರಿಕೆಗಳಿಗೆ ಕಳುಹಿಸುವ ಇವರ ಜಾತಕದಲ್ಲಿ ಕೇವಲ ಬುಧನೊಬ್ಬನೇ ಬಲಾಢ್ಯನಿರುತ್ತಾನೆ.

ಕರಡು ಓದುವವ : ಮುದ್ರಿತ ಸುದ್ದಿಗಳ ಕರಡಚ್ಚುಗಳನ್ನು ಓದಿ ಅವುಗಳನ್ನು ಪರೀಕ್ಷಿಸಿ ಅವುಗಳಲ್ಲಿಯ ವ್ಯಾಕರಣ ( Spelling ) ಮತ್ತು ಸುದ್ದಿಯ ಬರವಣಿಗೆ, ಮುದ್ರಣಗಳಿಗೆ ಸಂಬಂಧಪಟ್ಟ ಇತರ ದೋಷಗಳನ್ನು ತಾನೇ ತಿದ್ದಿ ಸರಿಪಡಿಸಬೇಕಾಗುವ ಇಲ್ಲವೆ ಅವುಗಳನ್ನು ಸಂಪಾದಕ ಮಂಡಲಿಗೆ ಒಯ್ದು ತಿದ್ದಿಸಬೇಕಾಗುವ ಕೆಲಸ ಮಾಡುವವರು. ಇವರ ಜಾತಕದಲ್ಲಿ ಬುಧನೂ ತೃತಿಯೇಶನೂ ಬಲಾಢ್ಯರಿದ್ದು ಗುರು ಶನಿಯರ ಶುಭ ಸಂಬಂಧವು ಪಂಚಮೇಶನೊಂದಿಗೆ ಇರುತ್ತದೆ.

ಜನರಲ್ ಮ್ಯಾನೇಜರ : ಹೆಚ್ಚಾಗಿ ಮುಖ್ಯ ಸಂಪಾದಕರಿಗೇ ಜನರಲ್ ಮ್ಯಾನೇಜರ ಎನ್ನಬಹುದು. ಇವರ ಜಾತಕದಲ್ಲಿ ಬುಧನು ಕೇವಲ ರಾಶಿಬಲದವನಿದ್ದು ರವಿ, ಗುರು, ಮಂಗಳರು ಸ್ಥಾನಬಲದವರೂ ಯೋಗ

ಕಾರಕರೂ ಇರುವರಲ್ಲದೆ ಅನೇಕ ಗ್ರಹಗಳು ಪುರುಷರಾಶಿಯಲ್ಲಿರುವವು. ಇವರ ಜಾತಕದಲ್ಲಿ ಚಂದ್ರನು ಅಗ್ನಿರಾಶಿಯ ಇಲ್ಲವೆ ಜಲಚರ ರಾಶಿಯವ ನಿರುತ್ತಾನೆ. ಅನೇಕ ಗ್ರಹಗಳು ಸ್ವಗೃಹದಲ್ಲಿರುತ್ತವೆ.

೨. ಲೆಕ್ಕಪತ್ರದ ವಿಭಾಗ

ಈ ವಿಭಾಗದಲ್ಲಿ ಲೆಕ್ಕಪತ್ರದ ನೌಕರದಾರರು ಹಾಗೂ ಜಾಹೀರಾತಿಗೆ ಸಂಬಂಧಿಸಿದ ನೌಕರದಾರರು ಇರುವದರಿಂದ ಇವರ ಜಾತಕದಲ್ಲಿ ಲೆಕ್ಕ ಪತ್ರದ ಕಾರಕಗ್ರಹಗಳೇ ಹೆಚ್ಚಾಗಿರುತ್ತವೆ. ಈ ವಿಷಯವಾಗಿ ೩ನೇ ಪ್ರಕರಣದಲ್ಲಿ ವಿವರವಾಗಿ ಕೊಡಲಾಗಿದೆ.

೩. ಕೆಲಸಗಾರರ ವಿಭಾಗ

ಈ ವಿಭಾಗದ ನೌಕರದಾರರಲ್ಲಿ ಬುಧನು ಕೇವಲ ರಾಶಿಬಲದವನಿದ್ದು ಶನಿಯು ಯೋಗಕಾರಕನೂ ಸ್ಥಾನಬಲದವನೂ ಇದ್ದು ಬುಧನೊಂದಿಗೆ ಶುಭಯೋಗವನ್ನುಂಟುಮಾಡುತ್ತಾನೆ. ಏಕೆಂದರೆ ಮುದ್ರಣಾಲಯಕ್ಕೆ ಸಂಬಂಧಿದ ಉದ್ಯೋಗದ ಕಾರಕನೂ ಶ್ರಮಜೀವಿಗಳ ಕಾರಕನೂ ಆದ ಶನಿಯೇ ಇವರ ಜಾತಕದಲ್ಲಿ ಬಲಾಢ್ಯನಿರುತ್ತಾನೆ. ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿರುತ್ತವೆ, ಹಾಗೂ ಅನೇಕ ಗ್ರಹಗಳು ದುರ್ಬಲವಿರುತ್ತವೆ.

ವಿ. ಸೂ. : ಪ್ರತಿಕೋದ್ಯಮದ ವಿಷಯವಾಗಿ ನಮ್ಮ "ಶಿಕ್ಷಣ ಜ್ಯೋತಿಷ್ಯ" ಗ್ರಂಥದಲ್ಲಿ ವಿವರವಾಗಿ ವಿವೇಚಿಸಲಾಗಿದೆ.

## ೪೬ ಕಾರಖಾನೆ ಹಾಗೂ ಗಿರಣಿಗಳು

ಇಂದು ದೇಶವು ತನ್ನ ಸ್ವಾತಂತ್ರ್ಯವನ್ನುಳಿಸಿಕೊಂಡು, ಅಂತಾ ರಾಷ್ಟ್ರೀಯ ಮಟ್ಟದಲ್ಲಿ ತಲೆಯೆತ್ತಿಕೊಂಡಿರಬೇಕಾದರೆ ಕೈಗಾರಿಕೀಕರಣ ವನ್ನು ಬಿಟ್ಟರೆ ಬೇರೆ ಮಾರ್ಗವಿಲ್ಲ. ೧೯೪೭ರಲ್ಲಿ ಸ್ವಾತಂತ್ರ್ಯ ದೊರೆತ ನಂತರ ಈ ಸತ್ಯದ ಅರಿವು ನಮ್ಮ ದೇಶಕ್ಕಾಗಿರುವುದು ಶುಭ ಸಂಗತಿಯೇ ಸರಿ. ಇದರಿಂದಾಗಿ ದೇಶದ ಮೂಲೆ ಮೂಲೆಗಳಲ್ಲಿಯೂ ಕೈಗಾರಿಕೆ ಚಟು ವಟಿಕೆಗಳು ತ್ವರಿತವಾಗಿ ನಡೆಯುತ್ತಿದ್ದು ದೇಶದಲ್ಲಿ ಈಗ ಅನೇಕ ಬೃಹತ್ ಉದ್ಯಮಗಳು ಸ್ಥಾಪಿಸಲ್ಪಟ್ಟಿವೆ.

ಇಲ್ಲಿಯ ಯಂತ್ರೋಪಕರಣಗಳು ವಿದೇಶದಲ್ಲಿ ತಯಾರಾಗುತ್ತಿರುವ ಯಂತ್ರೋಪಕರಣಗಳಷ್ಟೇ ಶ್ರೇಷ್ಠ ವರ್ಗಕ್ಕೆ ಸೇರಿರುವುವೆಂದು ಕಂಡು ಬಂದಿದೆ. ನಮ್ಮ ದೇಶವು ಔದ್ಯೋಗಿಕವಾಗಿ ಹಿಂದುಳಿದಿದ್ದರೂ ತಕ್ಕ ಅವಕಾಶ ಹಾಗೂ ಸೌಲಭ್ಯಗಳು ದೊರೆತರೆ ಭಾರತೀಯರು ಯಾರಿಗೂ ಹಿಂದುಳಿಯಲಾರರು ಎಂಬುದಕ್ಕೆ ಇದೀಗ ಬೆಳೆಯುತ್ತಿರುವ ಕಾರಖಾನೆ ಹಾಗೂ ಗಿರಣಿಗಳೇ ನಿದರ್ಶನಗಳು.

ಈ ಕೈಗಾರಿಕೀಕರಣದ ಚಟುವಟಿಕೆಗಳಲ್ಲಿ ದೇಶದ ಬಹು ಮಂದಿ ಪಾಲ್ಗೊಳ್ಳಬೇಕೆಂಬ ಉದ್ದೇಶದಿಂದ ಕೈಗಾರಿಕೋದ್ಯಮಗಳಲ್ಲಿ ಎಂದಿಗಿಂತಲೂ ಇಂದು ಉದ್ಯೋಗಾವಕಾಶಗಳನ್ನು ಬಹಳಷ್ಟು ಮಾಡಿಕೊಡಲಾಗಿದೆ. ಮತ್ತು ತಾಂತ್ರಿಕ ಉದ್ಯೋಗಗಳನ್ನು ಪ್ರೋತ್ಸಾಹಿಸಲು ನೌಕರರಿಗೆ ಅನೇಕ ಸೌಲಭ್ಯಗಳನ್ನು ಒದಗಿಸಲಾಗಿದೆ. ಅವರ ಸಂಬಳ ಸಾರಿಗೆಗಳು ಆಕರ್ಷಕ ಮಟ್ಟದಲ್ಲಿದ್ದು ಇಂದು ಯಾವ ಯುವಕನೇ ಆಗಲಿ ಹೆಚ್ಚಾಗಿ ತಾಂತ್ರಿಕ ಶಿಕ್ಷಣ ಪಡೆದು ತಾಂತ್ರಿಕ ಉದ್ಯೋಗಗಳಲ್ಲಿ ಸೇರಲು ಹಾತೊರೆಯುವಂತಾಗಿದೆ.

ಇವುಗಳ ದೃಷ್ಟಿಯಿಂದ ಕಾರಖಾನೆ, ಗಿರಣಿ ಮುಂತಾದ ಕೈಗಾರಿಕೋದ್ಯಮಗಳಲ್ಲಿ ನೌಕರಿಮಾಡುವವನ ಗ್ರಹಗತಿಗಳನ್ನು ಪರಿಶೀಲನೆಮಾಡುವುದು ಯುಕ್ತವಾಗಿದೆ. ಅಂತಹ ಜಾತಕದಲ್ಲಿಯ ಗ್ರಹಯೋಗಗಳು ಹೇಗಿರಬೇಕೆಂದು ಪ್ರಶ್ನಿಸಿದರೆ ಆ ಪ್ರಶ್ನೆಗೆ ಒಮ್ಮೆಲೇ ಉತ್ತರ ಕೊಡುವುದು ಕಠಿಣವೇ ಸರಿ. ಏಕೆಂದರೆ ಇದೇ ವಿಷಯದ ಮೇಲೆ ಪ್ರತ್ಯೇಕವಾಗಿ ಒಂದು ಪುಸ್ತಕ ಬರೆಯುವಷ್ಟು ವಿಷಯವಿದೆ. ಭಿನ್ನ ಭಿನ್ನ ವಸ್ತುಗಳ ಕಾರಖಾನೆಗಳಲ್ಲಿ ಕೆಲಸ ಮಾಡಲು ಬೇರೆ ಬೇರೆ ಗ್ರಹಗಳ ಬಲಾಬಲವೂ ಬೇಕಾಗುತ್ತದೆ.

ಉದಾಹರಣೆಗೆ : ಇಲೆಕ್ಟ್ರಿಕಲ್ ಅಥವಾ ಮೆಕ್ಯಾನಿಕಲ್ ಇಂಜನಿಯರಿಂಗ್ ಪದವೀಧರ (ಬಿ.ಇ)ನೊಬ್ಬನು ಹಿಂದೂಸ್ತಾನ್ ಮಷೀನ್‌ಟೂಲ್ಸ್ ಕಾರಖಾನೆಗೆ ಸೇರಲೋ ಅಥವಾ ಹಿಂದುಸ್ತಾನ್ ವಿಮಾನ ಕಾರಖಾನೆಗೆ ಸೇರಲೋ ಎಂದು ಪ್ರಶ್ನಿಸುವನೆಂದು ತಿಳಿಯುವಾ.

ಈ ಎರಡೂ ಕಾರಖಾನೆಗಳು ಕೇಂದ್ರ ಸರಕಾರದ ಆಧೀನದಲ್ಲಿದ್ದು ಅವುಗಳ ನೌಕರಿ ಭದ್ರತೆ ಇರುತ್ತದೆ. ಎರಡೂ ಒಂದೇ ಊರಲ್ಲಿ ಇವೆ. ಎರಡರಲ್ಲಿಯೂ ಅಷ್ಟೇ ಸಂಬಳ ಮತ್ತು ಎರಡೂ ಕಡೆಗೂ ಯಂತ್ರಗಳೊಡನೆ ಸೆಣಸಾಟ. ಈ ರೀತಿ ಎರಡೂ ಕಾರಖಾನೆಗಳಲ್ಲಿನ ನೌಕರಿಗಳಲ್ಲಿ ಸಾಮ್ಯತೆ ಇದ್ದರೂ ಎಲ್ಲಿ ಸೇರಬೇಕೆಂಬುದು ಉದ್ಯೋಗಾರ್ಥಿಗೆ ನಿಜವಾದ ಸಮಸ್ಯೆ ಯಾಗಿರುತ್ತದೆ. ಆದರೆ ಇಲ್ಲಿ ಒಂದು ಸಂಗತಿ— ಬೇರೆ ಬೇರೆ ಕಾರಖಾನೆ ಗಳಲ್ಲಿ ತಯಾರಾಗುವ ವಸ್ತುಗಳ ಗ್ರಹಗಳು ಮತ್ತು ಜಾತಕನ ಗ್ರಹಬಲ ಇವುಗಳನ್ನು ತುಲನೆ ಮಾಡಿ ಜ್ಯೋತಿಷಿ ಈ ಪ್ರಶ್ನೆಗೆ ನಿರ್ದಿಷ್ಟವಾದ ಉತ್ತರ ಕೊಡಲು ಸಾಧ್ಯವಿದೆ.

ಕಾರಖಾನೆಗಳಲ್ಲಿಯ ಪ್ರಕಾರಗಳು :

೧. ಕೇಂದ್ರ ಸರಕಾರದ ಆಧೀನದಲ್ಲಿರತಕ್ಕಂತಹ ಕಾರಖಾನೆಗಳು.

ಉದಾ : ಎಚ್. ಎಂ. ಟಿ., ಎಚ್. ಎ. ಎಲ್., ಚಿತ್ತರಂಜನ ರೇಲ್ವೆ ಎಂಜಿನ್ ಕಾರಖಾನೆ ಮೊದಲಾದವು.

೨. ಪ್ರಾಂತೀಯ (ರಾಜ್ಯ) ಸರಕಾರದ ಕಾರಖಾನೆಗಳು.

ಉದಾ : ಕರ್ನಾಟಕ (ಮೈಸೂರು) ಸರಕಾರದ ಮಾಲಿಕತ್ವದ ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರಖಾನೆ.

೩. ಖಾಸಗಿ ಕಾರಖಾನೆಗಳು

ಉದಾ : ಟಾಟಾ, ಬಿರ್ಲಾ ಅವರ ಕಾರಖಾನೆಗಳು, ಕಿರ್ಲೋಸ್ಕರ ಕಾರಖಾನೆ ಮೊದಲಾದವುಗಳು.

**ಕಾರಕಗ್ರಹಗಳು :** ಸಾಮಾನ್ಯವಾಗಿ ಯಾವುದೆ ಕಾರಖಾನೆಗಳ ಕಾರಕಗ್ರಹವೆಂದರೆ ಶನಿ, ಮಂಗಳರು. ಏಕೆಂದರೆ ಕಬ್ಬಿಣ ಹಾಗೂ ಉಕ್ಕಿನ ಸಂಬಂಧವು ಶನಿಗ್ರಹದ್ದು ಹಾಗೂ ವಿದ್ಯುಚ್ಛಕ್ತಿ ಹಾಗೂ ಇಂಜಿನಗಳ ಮೇಲೆ

ಮಂಗಳನ ಪ್ರಭುತ್ವವಿರುವದರಿಂದ ಮಂಗಳನು ಕೆಲಮಟ್ಟಿಗೆ ಕಾರಕನಾಗುವನು. ಇದರಂತೆಯೇ ಗಿರಣಿಗೆ ಕಾರಕರು ಶುಕ್ರ-ಬುಧರು ಇರುವರು.

ಭಿನ್ನ ಭಿನ್ನ ವಸ್ತುಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕವಿರುತ್ತವೆ. ಉದಾಹರಣೆಗೆ: ಗೊಬ್ಬರಕ್ಕೆ ರಾಹು, ಔಷಧಿಗಳಿಗೆ ಶನಿ, ಚಂದ್ರ, ಬುಧ, ಯಾವದೆ ಇಂಜಿನುಗಳಿಗೆ ಮಂಗಳನು, ಯಾವದೇ ಚ್ೀಗಿಗಳಿಗೆ ಶನಿಯು, ಹಡಗುಪಡೆಗಳಿಗೆ ಚಂದ್ರನು, ಮದ್ದು-ಗುಂಡುಗಳಿಗೆ ರಾಹು, ಶನಿ, ಮಂಗಳರು, ಸಿಮೆಂಟಿಗೆ ಶನಿಯು, ವಿಮಾನಕ್ಕೆ ಉಪಯೋಗಿಸುವ ಅಲ್ಯೂಮಿನಿಯಮ್ ಧಾತುವಿನ ಮೇಲೆ ಬುಧನು ಅಧಿಪತಿ, ಟೆಲಿಫೋನ್ ವಸ್ತುಗಳಿಗೆ ಬುಧನೂ ಚಲಚಿತ್ರಗಳ ಮೇಲೆ ಶುಕ್ರನೂ ಸಕ್ಕರೆಯ ಮೇಲೆ ಗುರುವೂ ಕಾಗದದಮೇಲೆ ಬುಧನೂ ಪ್ರಭುತ್ವವುಳ್ಳವರಿರುತ್ತಾರೆ.

ಹೀಗೆ ಭಿನ್ನ ಭಿನ್ನ ವಸ್ತುಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕರಿರುವುದರಿಂದ ಭಿನ್ನ ಭಿನ್ನ ವಸ್ತುಗಳನ್ನುತ್ಪಾದಿಸುವ ಕಾರಖಾನೆಗೆ ಹಾಗೂ ಗಿರಣಿಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕರಾಗುತ್ತಾರೆ. ಆದುದರಿಂದ ಭಿನ್ನ ಭಿನ್ನ ಕಾರಖಾನೆಗಳಲ್ಲಿ ಕೆಲಸಮಾಡಲು ಕಾರಖಾನೆಯ ಸಾಮಾನ್ಯ ಕಾರಕಗ್ರಹವಾದ ಶನಿಯೊಂದಿಗೆ ವಸ್ತುಗಳ ಕಾರಕಗ್ರಹವನ್ನು ಪರಿಶೀಲಿಸಬೇಕಾಗುತ್ತದೆ.

ಉದಾ : ಸಕ್ಕರೆ ಕಾರಖಾನೆಯಲ್ಲಿ ಕೆಲಸ ಮಾಡಲು ಬಯಸುವ ಅಭ್ಯರ್ಥಿಗಳಿಗೆ ಶನಿಯ ಜೊತೆಗೆ ಸಕ್ಕರೆ ಕಾರಕಗ್ರಹವಾದ ಗುರುವನ್ನೂ ಪರಿಶೀಲಿಸಬೇಕಾಗುತ್ತದೆ.

ಇದರಂತೆಯೆ ಭಿನ್ನ ಭಿನ್ನ ಪ್ರಕಾರದ ಕಾರಖಾನೆಗಳಿಗೆ, ಭಿನ್ನ ಭಿನ್ನ ಗ್ರಹಗಳು ಕಾರಕರಾಗುತ್ತಾರೆ. ಉದಾಹರಣೆಗೆ: ಕೇಂದ್ರ ಸರಕಾರದ ಸಂಬಂಧ ಇಲ್ಲವೆ ಅಧೀನದಲ್ಲಿರುವ ಯಾವುದೆ ಕಾರಖಾನೆಗಳಿಗೆ ಹಾಗೂ ಪ್ರಾಂತೀಯ (ರಾಜ್ಯ) ಸರಕಾರದ ಅಧೀನದಲ್ಲಿರುವ ಇಲ್ಲವೆ ಸಂಬಂಧವಿರುವ

ಯಾವುದೇ ಕಾರಖಾನೆಗಳಿಗೆ, ಕಾರಖಾನೆಗಳ ಕಾರಕ ಗ್ರಹವಾದ ಶನಿಯೊಂದಿಗೆ ಸರಕಾರೀ ಉದ್ಯೋಗ ಕಾರಕ ಗ್ರಹವಾದ ರವಿ, ಚಂದ್ರರನ್ನು ಪರಿಶೀಲಿಸ ಬೇಕಾಗುತ್ತದೆ.

ಹೀಗೆಯೆ, ಖಾಸಗಿ ಕಾರಖಾನೆಗಳಿಗೆ ಕೇವಲ ಶನಿಯೊರ್ವನೇ ಕಾರಕನಾಗುವನು.

ಲಗ್ನ : ಕಾರಖಾನೆಗಳಲ್ಲಿ ಕೆಲಸಮಾಡುವವರಿಗೆ, ಸ್ಥಾಯೀ ಜೀವನ (Non-Transferable) ವಿರುವುದರಿಂದ ಇವರ ಜಾತಕದಲ್ಲಿ ಸ್ಥಿರ ರಾಶಿ ಗಳಾದ ವೃಷಭ, ಸಿಂಹ, ವೃಶ್ಚಿಕ, ಕುಂಭ ಈ ಲಗ್ನಗಳೂ ತದನಂತರ ದ್ವಿಸ್ವಭಾವ ರಾಶಿಗಳಾದ ಮಿಥುನ, ಕನ್ಯಾ, ಧನು, ಮೀನ ಈ ಲಗ್ನಗಳೂ ಹೆಚ್ಚಾಗಿ ಕಂಡುಬರುತ್ತವೆ.

ಸ್ಥಾನ : ಈ ಖಾತೆಗೆ ಸ್ಥಾನವಾದ ನೈಸರ್ಗಿಕ ಉದ್ಯೋಗದ ಸ್ಥಾನ ಹಾಗೂ ಕಾರಖಾನೆಗಳ ಕಾರಕಗ್ರಹನಾದ ಶನಿಯ ನೈಸರ್ಗಿಕ ಸ್ಥಾನವಾದ ದಶಮಸ್ಥಾನವೇ ಕಾರಖಾನೆ ಹಾಗೂ ಗಿರಣಿಗಳ ಕಾರಕ ಸ್ಥಾನವಿರುತ್ತದೆ.

ರಾಶಿ : ಕಾರಖಾನೆಗಳಲ್ಲಿ ಕೆಲಸ ಮಾಡುವವರು ಇಂತಹ ರಾಶಿ ಯವರೇ ಕೆಲಸ ಮಾಡಬೇಕೆಂಬ ನಿಯಮವಿರುವದಿಲ್ಲ.

ಯೋಗ : (೧) ಇವರ ಜಾತಕದಲ್ಲಿ ಅನೇಕ ಗ್ರಹಗಳು ಹೆಚ್ಚಾಗಿ ದ್ವಿತೀಯ, ತೃತೀಯ, ಚತುರ್ಥ, ಪಂಚಮ, ಷಷ್ಠ, ಅಷ್ಟಮ, ದಶಮ, ಏಕಾದಶ ಈ ಸ್ಥಾನಗಳಲ್ಲಿರುತ್ತವೆ.

(೨) ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿದ್ದರೂ ಚಂದ್ರನು ಪುರುಷ ರಾಶಿಯಲ್ಲಿರುತ್ತಾನೆ.

(೩) ಭಾಗ್ಯೇಶನಿಗಿಂತ ದಶಮೇಶನೂ ಭಾಗ್ಯಸ್ಥಾನಕ್ಕಿಂತ ದಶಮ ಸ್ಥಾನವೂ ಬಲಾಢ್ಯವಿರುತ್ತವೆ.

(೪) ರವಿ, ಗುರು, ಮಂಗಳರಿಗಿಂತ ಶನಿ, ಬುಧ, ಶುಕ್ರ, ಚಂದ್ರ ಬಲಾಢ್ಯರಿರುತ್ತಾರೆ.

(೫) ಅನೇಕ ಗ್ರಹಗಳು ಅನುದಿತ ಗೋಲಾರ್ಧದಲ್ಲಿರುತ್ತವೆ.

(೬) ಅನೇಕ ಗ್ರಹಗಳು ಸ್ಥಾನಬಲವಿರದ ರಾಶಿಬಲದವರಿರುತ್ತವೆ.

ವಿಭಾಗಗಳು

ಯಾವುದೆ ಕಾರಖಾನೆಯಲ್ಲಿ ೪ ವಿಭಾಗಗಳನ್ನು ಕಲ್ಪಿಸಬಹುದು.

೧. ಆಡಳಿತ ವರ್ಗ. (P. D.)

೨. ಖರೀದಿ ವಿಕ್ರಯಗಾರರ ವರ್ಗ.

೩. ಕಾಮಗಾರರ ವರ್ಗ

೪. ಇಂಜಿನಿಯರ್ಸ ವರ್ಗ.

**ಆಡಳಿತ ವಿಭಾಗ :** ಡೈರೆಕ್ಟರ್, ಜನರಲ್ ಮ್ಯಾನೇಜರ್ ಹಾಗೂ ಪರ್ಸನೆಲ್ ಡಿಪಾರ್ಟಮೆಂಟನಲ್ಲಿ ಕೆಲಸ ಮಾಡುವ ನೌಕರರ ಜಾತಕದಲ್ಲಿ ರವಿ, ಗುರು, ಮಂಗಳರು ಬಲಾಢ್ಯರೂ ಯೋಗಕಾರಕರೂ ಇರುತ್ತಾರೆ.

ಇವರ ಜಾತಕದಲ್ಲಿ ದಶಮಸ್ಥಾನಕ್ಕಿಂತ ನವಮಸ್ಥಾನವೆ ಹೆಚ್ಚು ಬಲಾಢ್ಯವಿದ್ದು ನವಮೇಶನೂ ಕಾರಖಾನೆ ಕಾರಕಗ್ರಹನಾದ ಶನಿಯೊಂದಿಗೆ ಶುಭಯೋಗ ಮಾಡುವನಲ್ಲದೆ ಅನೇಕ ಗ್ರಹಗಳು ಪುರುಷರಾಶಿಯಲ್ಲಿ ರುತ್ತವೆ.

ಆಡಳಿತಕಾರಕ ಲಗ್ನಗಳೇ ಇವರ ಜಾತಕದಲ್ಲಿರುವುದಲ್ಲದೆ ಗ್ರಹಗಳು ಹೆಚ್ಚಾಗಿ ರಾಶಿಬಲದವರಿಗಿಂತ ಸ್ಥಾನಬಲದವರಿದ್ದು ಲಗ್ನೇಶನೂ ಬಲಾಢ್ಯ ನಿರುವನು.

ತಪಾಸಣೆ ವಿಭಾಗ : (Inspection department) : ಇದು ಆಡಳಿತ ವಿಭಾಗದಲ್ಲಿಯ ಉಪವಿಭಾಗವು. ಇದರಲ್ಲಿ ಕೆಲಸಮಾಡುವವರ ಯೋಗಗಳು ಆಡಳಿತ ವಿಭಾಗದಲ್ಲಿರುವ ನೌಕರದಾರರ ಯೋಗಗಳಂತೆಯೇ ಇದ್ದು ಕೆಲವು ವಿಶಿಷ್ಟ ಯೋಗಗಳೂ ಇರುತ್ತವೆ.

೧. ಚಂದ್ರನು ಜಲರಾಶಿಯ ಇಲ್ಲವೆ ವಾಯುರಾಶಿಯವನು ಇರುತ್ತಾನೆ.

೨. ಬುಧ-ಗುರು ಗ್ರಹಗಳು ಹಾಗೂ ಪಂಚಮಾಧೀಶನು ಬಲಾಢ್ಯರಿರುತ್ತಾರೆ.

ಖರೀದಿವಿಕ್ರಯ ವಿಭಾಗ : ಈ ವಿಭಾಗದಲ್ಲಿ ಕೆಲಸ ಮಾಡುವವರ ಜಾತಕದಲ್ಲಿ ಬುಧನೇ ಹೆಚ್ಚು ಬಲಾಢ್ಯನಿರುತ್ತಾನೆ. ಬುಧನ ತರುವಾಯ ಶುಕ್ರ-ಚಂದ್ರರೂ ಕೂಡ ಕಾರಕರಾಗುವರು.

ಈ ವಿಭಾಗದಲ್ಲಿ ಕೆಲಸ ಮಾಡುವವರ ಜಾತಕದಲ್ಲಿ ದ್ವಿತೀಯಸ್ಥಾನ ಹಾಗೂ ದಶಮಸ್ಥಾನ, ದ್ವಿತೀಯೇಶ, ದಶಮೇಶರು ಬಲಾಢ್ಯರಿರುತ್ತಾರೆ.

ಆಡಳಿತ ವಿಭಾಗದ ನೌಕರದಾರರೊಂದಿಗೆ ಇವರ ಸಂಬಂಧ ಬರುವುದರಿಂದ ರವಿಯೂ ಬಲಾಢ್ಯನಿರಬೇಕು; ದುರ್ಬಲರನಿರಬಾರದು.

ಇಂಜನಿಯರ್ಸ್ ವಿಭಾಗ : ಇಂಜನಿಯರ್ಸ್ ವಿಭಾಗದಲ್ಲಿ ಮತ್ತೆರಡು ವಿಭಾಗಗಳಿವೆ.

೧. ಯಂತ್ರಗಳನ್ನು ನಡೆಸುವ ಇಂಜನಿಯರ್ಸ್.

೨. ಡ್ರಾಯಿಂಗ್, ಡಿಸೈನಿಂಗ್, ಕಾರ್ಪೆಂಟ್ರಿ ಇತ್ಯಾದಿಗಳಿಗೆ ಸಂಬಂಧಿಸಿದ ವಿಭಾಗ.

ಕಾಮಗಾರರ ವಿಭಾಗ ; ವಿವರಣೆಯನ್ನು ೩ನೆಯ ಪ್ರಕರಣದಲ್ಲಿ ಕೊಡಲಾಗಿದೆ.



# ನೌಕರಿಗೆ ಸಂಬಂಧಿಸಿದ ಇತರ ವಿಷಯಗಳು

ಇಂದಿನ ಯುವಕರು ನೌಕರಿಯ ಸಂಬಂಧದಲ್ಲಿ ಕೇಳುವ ಪ್ರಶ್ನೆಗಳು ಸಾಮಾನ್ಯವಾಗಿ ಹತ್ತು ಪ್ರಕಾರದವು ಇರುತ್ತವೆ. (೧) ನೌಕರಿ ಎಂದು ಹತ್ತುವದು ? (೨) ಇದ್ದ ನೌಕರಿ ಬಿಟ್ಟು ಬೇರೆ ನೌಕರಿ (ಬೇರೆ ಖಾತೆಯು) ಎಂದು ಸಿಗುವದು ? (೩) ಇಚ್ಛಿತ ಸ್ಥಳಕ್ಕೆ ಬದಲಿಯಾಗುವದೋ ಹೇಗೆ ? (ಬದಲಿ ಯೋಗ) (೪) ನೌಕರಿಯಲ್ಲಿ ಆಗುವ ಬಡತಿಯ ಯೋಗ (ಕಾಯಮು) (೫) ನೌಕರಿ ಬಿಟ್ಟು ಸ್ವತಂತ್ರ ಉದ್ಯೋಗ ಮಾಡಬೇಕೋ ಹೇಗೆ ? (೬) ಮೇಲಿನ ಅಧಿಕಾರಿಗಳ ಸಹಕಾರ ಹಾಗೂ ಕಾನ್ಫಿಡೆನ್ಸಿಯಲ್ ರಿಪೋರ್ಟ (Confidential report) (೭) ಹಿಂಬಡತಿ ಯೋಗ (Reversion) ಇಲ್ಲವೆ ಚಾರ್ಜಶೀಟ, ದಂಡ ಮುಂತಾದ ಅನಿಷ್ಟ ಯೋಗ (Chrge sheet & punishment) (೮) ನೌಕರಿಯನ್ನು ಕಳೆದುಕೊಳ್ಳುವ ಯೋಗ (Termination) (೯) ರಜೆಯ ವಿಷಯವಾಗಿ (೧೦) ಎಕ್ಸಟೆನ್ ಶನ್‌ದ ವಿಷಯವಾಗಿ.

ಈ ಸಮಸ್ಯೆಗಳನ್ನು ನಾವು ಪ್ರತಿನಿತ್ಯ ಬಿಡಿಸಬೇಕಾಗುವದರಿಂದ ಇದಕ್ಕೆ ಜ್ಯೋತಿಷ್ಯದ ಭಾಷ್ಯವೇನು ಎಂಬುದನ್ನು ನೋಡುವಾ.

### ನೌಕರಿ ಎಂದು ಹತ್ತುವದು ?

ಅನೇಕರು ಹೆಚ್ಚಾಗಿ ಕೇಳುವ ಪ್ರಶ್ನೆ : ಪ್ರಥಮವಾಗಿ ನೌಕರಿ ಎಂದು ಹತ್ತುವದು ? ಇದು ಪ್ರಶ್ನೆಯಾಗಿರದೆ ಗುಡುಚಾದ ಸಮಸ್ಯೆಯಾಗಿರುವ

ವರಿಂದ ಉತ್ತರ ಕೊಡುವದು ಕಠಿಣವಾಗಿದ್ದರೂ ಜ್ಯೋತಿಷಿ ಉತ್ತರ ಕೊಡಲೇಬೇಕಾದ್ದರಿಂದ ಈ ಸಮಸ್ಯೆಯನ್ನು ಹೇಗೆ ಪರಿಶೀಲಿಸಬೇಕೆಂಬುವದನ್ನು ನೋಡುವಾ.

ಪ್ರಥಮ ನೌಕರಿ ಹತ್ತುವದೆಂದರೆ ಪ್ರಥಮ ದ್ರವ್ಯಾರ್ಜನ ಯೋಗ ಎಂದೆಂತಲೂ ಹೇಳಬಹುದು. ಅಥವಾ ನೌಕರಿ ಹತ್ತುವ ಯೋಗವೆಂದರೆ ಭಾಗ್ಯೋದಯ ಕಾಲವೆ ಸರಿ. ಆದ್ದರಿಂದ ನಾವು ಭಾಗ್ಯೋದಯ ಕಾಲ ಎಂದು ಎಂಬುದನ್ನು ನೋಡಬೇಕು.

ಈ ವಿಷಯವನ್ನು ಪರಿಶೀಲಿಸುವ ಪೂರ್ವದಲ್ಲಿ ನಾವು ಮೂರು ವಿಷಯಗಳನ್ನು ಸೂಕ್ಷ್ಮವಾಗಿ ನೋಡಬೇಕು.

ಪೃಚ್ಛಕನ ಜಾತಕದಲ್ಲಿ ನೌಕರಿ ಯೋಗವಿದೆಯೊ ಅಥವಾ ಸ್ವತಂತ್ರ ಉದ್ಯೋಗದ ಯೋಗವಿದೆಯೊ ಎಂಬುದನ್ನು ಪರಿಶೀಲಿಸಿದ ನಂತರ ಜಾತಕನ ಜಾತಕಕ್ಕೆ ಅನುಗುಣವಾದ ಖಾತೆಗಳಾವುವು ಎಂಬುದನ್ನು ಪರಿಶೀಲಿಸಿ ನೌಕರಿ ಹತ್ತುವ ಕಾಲ ಯಾವುದೆಂಬುದನ್ನು ನೋಡಬೇಕು.

ನೌಕರಿ ಎಂದು ಹತ್ತುವದು, ಅನುಕೂಲ ಕಾಲ ಎಂದು ಎಂಬ ಸಂಗತಿಯನ್ನು ಅರಿಯುವ ಪೂರ್ವದಲ್ಲಿ ನೋಡುವ ಪ್ರಾಮುಖ್ಯವಾದ ಸಂಗತಿ ಎಂದರೆ ನೌಕರಿ ಬೇಗ ಹತ್ತುವದೊ ಅಥವಾ ತಡವಾಗಿ ಹತ್ತುವದೊ ಎಂಬುದನ್ನು ನಿರ್ಣಯಿಸಿದ ನಂತರ ಹತ್ತುವ ಕಾಲ ಯಾವುದೆಂಬುದನ್ನು ವಿವೇಚಿಸಬೇಕು.

**ನೌಕರಿ ತಡವಾಗಿ ಹತ್ತುವ ಯೋಗಗಳು :** (೧) ಭಾಗ್ಯೇಶ ಇಲ್ಲವೆ ದಶಮೇಶರು ದುರ್ಬಲರಿದ್ದರೆ ನೌಕರಿ ತಡವಾಗಿ ಹತ್ತುವದು, (೨) ಚಂದ್ರನು ಮೇಲೆ ಶನಿಯ ದೃಷ್ಟಿ ಇಲ್ಲವೆ ಶನಿಯೊಂದಿಗೆ ಚಂದ್ರನಿದ್ದ ಜಾತಕನ ನೌಕರಿ ಹತ್ತಲು ಅನೇಕ ಎಡರು-ತೊಡರುಗಳು ಬರುವವು. (೩) ಚತುರ್ಗ್ರಹ, ಪಂಚಗ್ರಹ, ಷಡ್ಗ್ರಹ ಈ ಯೋಗಗಳು ಲಗ್ನ,

ಚತುರ್ಥ, ದಶಮ, ಭಾಗ್ಯ ಈ ಸ್ಥಾನದಲ್ಲಿರುವ ಜಾತಕನಿಗೆ ನೌಕರಿ ಪಡೆಯುವದು ಕಠಿಣವಾಗುತ್ತದೆ. (Though one gets the appointment order, there is no guarantee of his joining). ೪) ಶನಿ-ಮಂಗಳ, ರವಿ-ಶನಿ, ಚಂದ್ರ-ಶನಿ, ಇವರ ಯುತಿ ಯಾಗಲಿ ಪ್ರತಿಯೋಗವಾಗಲಿ ಲಗ್ನ, ಚತುರ್ಥ, ಭಾಗ್ಯ, ದಶಮ ಈ ಸ್ಥಾನದಲ್ಲಿದ್ದ ಜಾತಕನಿಗೆ ನೌಕರಿ ದೊರಕಿಸಿಕೊಳ್ಳಲು ಬಹಳ ಶ್ರಮಿಸ ಬೇಕಾಗುತ್ತದೆ. ೫) ರವಿಯು ದುರ್ಬಲನಿದ್ದ ಜಾತಕನಿಗೆ ಸರಕಾರೀ ನೌಕರಿ ಸಿಗುವದು ಕಠಿಣವಾಗುತ್ತದೆ. ೬) ಭಿನ್ನ ಭಿನ್ನ ಲಗ್ನಗಳಿಗೆ ಭಿನ್ನ ಭಿನ್ನ ಗ್ರಹಗಳು ಯೋಗಕಾರಕಗಳಿದ್ದು ಆ ಯೋಗಕಾರಕಗ್ರಹಗಳು ದುರ್ಬಲವಿದ್ದ ಜಾತಕನಿಗೆ ನೌಕರಿ ದೊರಕಿಸಲು ಬಹಳ ಹೆಣಗಾಡಬೇಕಾಗುತ್ತದೆ. ೭) ಅನೇಕ ಗ್ರಹಗಳು ಅನುದಿತ ಗೋಲಾರ್ಧದಲ್ಲಿದ್ದ ಜಾತಕನಿಗೆ ನೌಕರಿ ತಡವಾಗಿ ಹತ್ತುವದು. ೮) ಅನಫಾಯೋಗವಿದ್ದ ಜಾತಕನಿಗೆ ನೌಕರಿ ದೊರಕಿಸಲು ಬಹಳ ಪ್ರಯತ್ನ ಪಡಬೇಕಾಗುತ್ತದೆ. ೯) ಕ್ಷೀಣ ಚಂದ್ರನು ಷಷ್ಠ, ಅಷ್ಟ, ದ್ವಾದಶ ಸ್ಥಾನದಲ್ಲಿದ್ದ ಜಾತಕನಿಗೆ ನೌಕರಿ ದೊರೆಯುವದು ಕಠಿಣ. ೧೦) ಅನೇಕ ಗ್ರಹಗಳು ಅಸ್ತಂಗತ, ವಕ್ರ, ವೃದ್ಧಾಪ್ಯ, ಶತೃಕ್ಷೇತ್ರ, ಶತೃಮಧ್ಯ ಇದ್ದ ಜಾತಕನಿಗೆ ನೌಕರಿ ದೊರಕಿಸುವದು ಕಠಿಣ ವಾಗುತ್ತದೆ.

ಈ ಕೆಳಗೆ ಕಾಣಿಸಿದ ಯೋಗಗಳಿದ್ದರೆ ನೌಕರಿಯು ತೀವ್ರ ಹತ್ತುತ್ತದೆ.

೧. ಅನೇಕ ಗ್ರಹಗಳು ಸ್ವಗೃಹ ಇಲ್ಲವೆ ಉಚ್ಚ ರಾಶಿಯಲ್ಲಿ ಇಲ್ಲವೆ ಮಿತ್ರ ಕ್ಷೇತ್ರದಲ್ಲಿ ಇದ್ದ ಜಾತಕನಿಗೆ ನೌಕರಿ ಬೇಗ ಹತ್ತುವದು.

೨. ಪರ್ವತ ಯೋಗವಿದ್ದ ಜಾತಕನಿಗೆ ನೌಕರಿ ತಾನೇ ಬೆನ್ನು ಹತ್ತಿ ಬರುವದು.

೩. ಸಾರ್ವಭೌಮ ಯೋಗವಿದ್ದ ಜಾತಕನಿಗೆ ಅನೇಕ ಖಾತೆಯಲ್ಲಿ ನೌಕರಿ ದೊರೆಯುವದಲ್ಲದೆ ಅರ್ಜಿಯನ್ನು ಹಾಕದೆ ನೌಕರಿ ಸಿಗುತ್ತದೆ.

೪. ಹಂಸಯೋಗವಿದ್ದ ಜಾತಕನು ಭಾಗ್ಯಶಾಲಿ ಎಂದು ತಿಳಿಯಬೇಕು.

೫. ಸುನಫಾಯೋಗವಿದ್ದ ಜಾತಕನು ಸುದೈವಿ ಎಂದು ತಿಳಿಯಬೇಕು.

೬. ಗುರು-ಚಂದ್ರರ ನವ ಪಂಚಕವಾಗಲಿ, ಸಮ ಸಪ್ತಕವಾಗಲೀ ಯುತಿ ಯಾಗಲಿ, ಲಗ್ನ, ಭಾಗ್ಯ, ದಶಮ, ಪಂಚಮ ಈ ಸ್ಥಾನದಲ್ಲಿ ಯೋಗ ವಿರುವ ಜಾತಕನಿಗೆ ನೌಕರಿಯ ಸಮಸ್ಯೆಯೇ ಬರುವದಿಲ್ಲ.

೭. ಗುರು-ಮಂಗಳ, ಬುಧ-ಶುಕ್ರ, ಶನಿ-ಶುಕ್ರ, ಇವರ ಯುತಿ ಇಲ್ಲವೆ ನವ ಪಂಚಕ ಯೋಗಗಳು ಲಗ್ನ, ದಶಮ, ಭಾಗ್ಯ, ಸುಖಸ್ಥಾನ ದಲ್ಲಿದ್ದ ಜಾತಕನಿಗೆ ನೌಕರಿ ಬೇಗ ಹತ್ತುವದು.

೮. ರಾಜಯೋಗವಿದ್ದ ಜಾತಕನಿಗೆ ನೌಕರಿ ತಾನಾಗಿಯೇ ಬರುವದು.

೯. ಭಿನ್ನ ಭಿನ್ನ ಲಗ್ನಗಳಿಗೆ ಭಿನ್ನ ಭಿನ್ನ ಗ್ರಹಗಳು ಯೋಗಕಾರಕವಿದ್ದು ಈ ಯೋಗಕಾರಕ ಗ್ರಹಗಳು ಬಲಾಢ್ಯವಿದ್ದ ಜಾತಕನಿಗೆ ನೌಕರಿಯು ಬೇಗ ಹತ್ತುವದು.

೧೦. ಲಗ್ನೇಶ, ದಶಮೇಶ, ಬಲಾಢ್ಯರಿದ್ದ ಜಾತಕನಿಗೆ ನೌಕರಿ ಬೇಗ ಹತ್ತುವದು.

ನೌಕರಿ ತೀವ್ರ ಹಾಗೂ ತಡವಾಗಿ ಹತ್ತುವ ಬಗ್ಗೆ ಈ ವರೆಗೆ ವಿವರಿಸಿದುದಾಯಿತು. ಇನ್ನು ನೌಕರಿ ಎಂದು ಹತ್ತುವದು ಎಂಬುದನ್ನು ಪರಿಶೀಲಿಸಲು ಅನುಕೂಲ ಕಾಲ ಯಾವದು ಎಂಬುದನ್ನು ನೋಡಬೇಕಾಗುತ್ತದೆ.

**ಅನುಕೂಲ ಕಾಲ :** ಈ ವಿಷಯದ ಬಗ್ಗೆ ಎಷ್ಟು ಬರೆದರೂ ಕಡಿಮೆಯೇ. ಏಕೆಂದರೆ ಭಿನ್ನ ಭಿನ್ನ ವಿಷಯಗಳಿಗೆ ಭಿನ್ನ ಭಿನ್ನ ಕಾಲಗಳೂ, ಭಿನ್ನ ಭಿನ್ನ ಗ್ರಹಗಳೂ ಭಿನ್ನ ಭಿನ್ನ ಇರುತ್ತವೆ.

ಉದಾಹರಣೆಗೆ: ವಿವಾಹಯೋಗದ ಅನುಕೂಲ ಕಾಲ ಬೇರೆ, ಶೈಕ್ಷಣಿಕ ಅನುಕೂಲ ಕಾಲ ಬೇರೆ, ಸಂತತಿ ಅನುಕೂಲ ಕಾಲ ಬೇರೆ, ಆಕಸ್ಮಿಕ ಧನ ಲಾಭದ ಅನುಕೂಲ ಕಾಲ ಬೇರೆ, ಸಂಘ-ಸಂಸ್ಥೆಗಳ ಚುನಾವಣೆಯಲ್ಲಿ ಆರಿಸಿ

ಬರಲು ಇರುವ ಅನುಕೂಲ ಕಾಲ ಬೇರೆ ಬೇರೆ ಇರುತ್ತವೆ ಎಂಬುದರ ಕುರಿತು ಅನೇಕ ಉದಾಹರಣೆಗಳನ್ನು ನಾವು ಕಂಡಿದ್ದೇವೆ.

ಉದಾಹರಣೆಗೆ : ಒಂದು ಊರಲ್ಲಿ ಸರ್ವಸಾಧಾರಣ ಒಬ್ಬ ವಕೀಲರಿದ್ದರು. ಅವರು ತಮ್ಮ ಜಾತಕ ನನಗೆ ತೋರಿಸಿ ನನ್ನ ಸಲಹೆ ಕೇಳಿದರು. ಆಗ ನಾನವರ ಜಾತಕ ಪರಿಶೀಲಿಸಿ ಸಾಡೇಸಾತಿ ಇದ್ದರೂ ಚುನಾವಣೆಯಲ್ಲಿ ಸ್ಪರ್ಧಿಸಿ ಆರಿಸಿ ಬಂದು ಮುಂದೆ ಸಚಿವರಾಗುವಿರೆಂದು ಭವಿಷ್ಯ ನುಡಿದಿದ್ದೆ. ಈ ಸಾಡೇಸಾತಿಯು ನಿಮಗೆ ಇತರ ವಿಷಯದಲ್ಲಿ ಹಾನಿಯನ್ನುಂಟು ಮಾಡುವದೆಂದು ಹೇಳಿದ್ದೆ. ನನ್ನ ಭವಿಷ್ಯಕ್ಕನುಗುಣವಾಗಿ ಅವರು ಆ ವರ್ಷ ಸಚಿವರಾದರು. ಆದರೆ ಅದೇ ವರ್ಷ ಅದೇ ತಿಂಗಳಲ್ಲಿ ಅವರಿಗೆ ಪತ್ನೀ ವಿಯೋಗವಾಯಿತು. ತಾತ್ಪರ್ಯವಿಷ್ಟೇ, ಸಚಿವರನ್ನಾಗಿ ಮಾಡುವ ಯೋಗವೂ ಪತ್ನೀವಿಯೋಗ ಮಾಡುವ ಯೋಗವೂ ಒಂದೇ ತಿಂಗಳಲ್ಲಿ ಆಗಬೇಕಾದರೆ ಭಿನ್ನ ಭಿನ್ನ ವಿಷಯುಗಳ ಅನುಕೂಲದ ಹಾಗು ಅನಾನುಕೂಲದ ಕಾಲವು ಬೇರೆ ಬೇರೆ ಇರುವದೆಂದು ಹೇಳಬಹುದು. ಪ್ರಸ್ತುತ ಈ ಪ್ರಸ್ತಕದಲ್ಲಿ, ಈ ಪ್ರಕರಣದಲ್ಲಿ ನೌಕರಿ ಹತ್ತಲು ಅನುಕೂಲ ಕಾಲ ಯಾವುದು ಎಂಬುದನ್ನು ಮಾತ್ರ ಇಲ್ಲಿ ವಿವರಿಸಲಾಗುವದು.

ಈ ವಿಷಯವಾಗಿ ನಾವು ಐದಾರು ಸಂಗತಿಗಳನ್ನು ನೋಡಬೇಕಾಗುತ್ತದೆ. ೧) ಗೋಚರೀಗ್ರಹಗಳ ಬಲಾಬಲ. ೨ ಗೋಚರೀ ಗ್ರಹಗಳ ಪರಿಭ್ರಮಣದಿಂದಾಗುವ ಯೋಗಗಳು. ೩) ಗ್ರಹಗಳ ದಶ-ಅಂತರ್ದಶಗಳ ಪರಿಣಾಮ. ೪) ಪಂಚಮಾಷ್ಟಮ ಶನಿ ಹಾಗೂ ಸಾಡೇಸಾತಿಯ ಪ್ರಭಾವದಿಂದಾಗುವ ಪರಿಣಾಮ. ೫) ದೈನಿಕ ಪದ್ಧತಿಯಿಂದ ಹಾಗೂ ತಾಜಿಕ ಪದ್ಧತಿಗಳಿಂದ ನೋಡುವ ಕ್ರಮ.

೧. ಗೋಚರೀ ಗ್ರಹಗಳಲ್ಲಿ ಪ್ರಾಮುಖ್ಯವಾಗಿ ರವಿ, ಮಂಗಳ, ಶನಿ, ಗುರು, ರಾಹು ಈ ಐದು ಗ್ರಹಗಳನ್ನು ಹೆಚ್ಚು ಪರಿಶೀಲಿಸಬೇಕು.

ರವಿ, ಮಂಗಳ, ಶನಿ, ರಾಹು ಈ ೪ ಗ್ರಹಗಳು ಗೋಚರಿಯಿಂದ ಮೂರು–ಆರು–ಹತ್ತು-ಪನ್ನೊಂದನೆಯವರಾಗಿ ಬಂದರೆ ಅನುಕೂಲ ಫಲ ವನ್ನು ಕೊಡುವರು. ಗುರುವು ಗೋಚರಿಯಿಂದ ೨–೫–೭–೯–೧೦–೧೧ನೆಯ ಯವನಾಗಿ ಬಂದರೆ ಶುಭ ಫಲವನ್ನು ಕೊಡುವನು.

೨. ನೌಕರಿ ವಿಷಯವಾಗಿ ಗುರು, ಶನಿಯರ ಗೋಚರೀ ಪ್ರರಿಭ್ರಮಣವು ರಾಶ್ಯಾಂತರಗಳ ಹೆಚ್ಚು ಪ್ರಭಾವಶಾಲಿಯಾದ ಪರಿಣಾಮವನ್ನುಂಟು ಮಾಡು ವವು.

೩. ಗೋಚರೀ ಗ್ರಹಗಳ ಪರಿಭ್ರಮಣವು ಲಗ್ನ, ಸ್ಥಾನ, ಭಾವ ಹಾಗೂ ಭಾವೇಶರ ಮೇಲಿಂದಾಗುವ ಪರಿಣಾಮವೂ ಭಿನ್ನ ಭಿನ್ನವಿರುತ್ತದೆ. ಉದಾಹರಣೆಗೆ ; ಕುಂಭ ಲಗ್ನದ ಮೀನ ರಾಶಿಯ ಜಾತಕನಿಗೆ ಗೋಚರಿ ಯಿಂದ ಗುರುವಿನ ಪರಿಭ್ರಮಣವು ಮಕರ ರಾಶಿಯಲ್ಲಿ ಆಗುತ್ತದೆಂದು ತಿಳಿ ಯಿರಿ. ಆ ಜಾತಕನಿಗೆ ಗೋಚರಿಯಿಂದ ೧೧ ನೆಯ ಗುರು ಆಗುತ್ತಿದ್ದರೂ ಏನು ಪ್ರಯೋಜನ ? ಏಕೆಂದರೆ ಕುಂಭ ಲಗ್ನಕ್ಕೆ ಧನೇಶನೂ ಲಾಭೇಶನೂ ಆದ ಗುರುವಿನ ಪರಿಭ್ರಮಣವು ವ್ಯಯಸ್ಥಾನದಲ್ಲಿಯೂ ನೀಚ ರಾಶಿಯಲ್ಲಿಯೂ ಆಗುವದರಿಂದ ೧೧ನೆಯ ಗುರುವಿನಂತೆ ಶುಭ ಫಲ ಕೊಡದೆ ೧೨ನೆಯ ಸ್ಥಾನ ದಂತೆ ಅಶುಭ ಫಲ ಕೊಡುವನು. ಇದರಂತೆಯೇ ವೃಷಭ ಲಗ್ನದ ಮಿಥುನ ರಾಶಿಯ ಜಾತಕನಿಗೆ ಗೋಚರಿಯಿಂದ ೧೧ನೆಯ ಶನಿಯು ಬಂದರೆ ಏನು ಪ್ರಯೋಜನ ?

೪. ಗೋಚರೀ ಗ್ರಹಗಳ ಪರಿಭ್ರಮಣವು ಜಾತಕದಲ್ಲಿರುವ ಮೂಲ ಗ್ರಹಗಳ ಮೇಲಿಂದ ಆಗುವಾಗ ಜರಗುವ ಶುಭಾಶುಭ ಪರಿಣಾಮಗಳೂ ಭಿನ್ನವಿರುತ್ತವೆ.

ಉದಾಹರಣೆಗೆ: ಶನಿಯ ಗೋಚರಿಯ ಪರಿಭ್ರಮಣವು ಮೂಲ ಜಾತಕದಲ್ಲಿಯ ರವಿ, ಮಂಗಳ, ಚಂದ್ರರ ಮೇಲಿಂದ ಆಗುವಾಗ ಇಲ್ಲವೆ

ಗೋಚರಿಯಿಂದ ಅವರ ಸಂಗಡ ಪ್ರತಿಯೋಗ ಮಾಡುತ್ತಿದ್ದರೆ ಅನಿಷ್ಟ ಫಲ ದಾಯಕವಿರುತ್ತದೆ. ಇದರಂತೆಯೇ ರವಿ-ಮಂಗಳರ ಪರಿಭ್ರಮಣವು ಶನಿ-ಶುಕ್ರರ ದೇಲೆ ಆಗುತ್ತಿದ್ದರೆ ಗುರುವಿನ ಪರಿಭ್ರಮಣವು ಬುಧ-ಶುಕ್ರರ ಮೇಲೆ ಇಲ್ಲವೆ ಪ್ರತಿಯೋಗ ಮಾಡುತ್ತಿದ್ದರೆ ಹಾನಿದಾಯಕವಿರುತ್ತದೆ.

೫. ಭಿನ್ನ ಭಿನ್ನ ಲಗ್ನಗಳಿಗೆ ಭಿನ್ನ ಭಿನ್ನ ಗ್ರಹಗಳು ಯೋಗಕಾರಕ ವಿದ್ದು ಈ ಯೋಗಕಾರಕ ಗ್ರಹಗಳು ಜಾತಕನ ಜಾತಕದಲ್ಲಿ ಬಲಾಢ್ಯವಿದ್ದು ಈ ಗ್ರಹಗಳ ದಶ-ಅಂತರ್ದಶಗಳಲ್ಲಿ ಶುಭ ಫಲವಿದ್ದು ನೌಕರಿ ಹತ್ತುವ ಯೋಗವಿರುತ್ತದೆ. ಉದಾಹರಣೆಗೆ : ವೃಷಭ ಲಗ್ನಕ್ಕೆ ಶನಿ, ಬುಧ, ರವಿ, ಶುಕ್ರರು ಯೋಗಕಾರಕ ಗ್ರಹಗಳಿದ್ದು ಇವರು ಜಾತಕದಲ್ಲಿ ಶುಭರಿದ್ದು, ಇವರ ದಶ-ಅಂತರ್ದಶಗಳಲ್ಲಿ ನೌಕರಿ ಹತ್ತುವದು.

೬. ಪಂಚಮಾಷ್ಟಮ ಹಾಗೂ ಸಾಡೇಸಾತಿ ಶನಿ ಇದ್ದಾಗ ನೌಕರಿ ಹತ್ತಲ ಕಠಿಣವಾಗುತ್ತದೆ.

೭. ಭಿನ್ನ ಭಿನ್ನ ರಾಶಿಯವರಿಗೆ ಪ್ರತಿ ವರ್ಷ ಶುಭಾ-ಶುಭ ತಿಂಗಳು ಗಳು ಭಿನ್ನ ಭಿನ್ನವಿದ್ದು ಈ ತಿಂಗಳುಗಳಲ್ಲಿಯೇ ಅವರಿಗೆ ನೌಕರಿ ಸಿಗುತ್ತದೆ.

### ಬೇರೆ ಖಾತೆಯ ನೌಕರಿ ಯೋಗ

ಮಾಡುತ್ತಿರುವ ನೌಕರಿಯನ್ನು ಬಿಟ್ಟು ಬೇರೆ ಖಾತೆಯಲ್ಲಿ ನೌಕರಿ ಎಂದು ಸಿಗುವದು ಎಂದು ಕೇಳುವವರೂ ಇದ್ದಾರೆ. ಬಹುಶಃ ಇಂಥ ಪ್ರಶ್ನೆಯನ್ನು ಕೇಳುವವರು ೧೮ ರಿಂದ ೨೮ ವಯಸ್ಸಿನೊಳಗಿದ್ದವರೇ.

ಹೀಗೆ ಕೇಳುವದಕ್ಕೆ ಎರಡು ಕಾರಣಗಳಿರುತ್ತವೆ. ಮೊದಲನೆಯದಾಗಿ ಪರಿಸ್ಥಿತಿಯ ಒತ್ತಡದ ಮೂಲಕ ಯಾವದೊಂದು ನೌಕರಿಗೆ ಅಂಟಿಕೊಂಡು ಹಿಂದಿನಿಂದ ಉತ್ತಮ ನೌಕರಿಗಾಗಿ ಪ್ರಯತ್ನಿಸುವದು. ಎರಡನೆಯದಾಗಿ

ಯಾವದೊಂದು ನೌಕರಿ ಮಾಡುತ್ತ ಹೆಚ್ಚಿನ ಶಿಕ್ಷಣ ಹೊಂದಿ ಆ ಶಿಕ್ಷಣ ಪೂರ್ತಿಯಾದ ಬಳಿಕ ಕಲಿತ ಶಿಕ್ಷಣಕ್ಕೆ ಅನುಗುಣವಾದ ನೌಕರಿಯನ್ನು ಬಯಸುವರು.

ಇಂಥ ಪ್ರಶ್ನೆಗಳಿಗೆ ಉತ್ತರ ಕೊಡುವ ಜ್ಯೋತಿಷಿಯು ಎರಡು ವಿಷಯ ಗಳನ್ನು ಪರಿಶೀಲಿಸಬೇಕಾಗುತ್ತದೆ. ಮೊದಲನೆಯದಾಗಿ ಜಾತಕನ ಜಾತಕ ದಲ್ಲಿಯ ಗ್ರಹಗಳ ಯೋಗವು ಹಾಗೂ ಮಾಡುತ್ತಿರುವ ಕೆಲಸದ ಕ್ರಮವನ್ನು ನೋಡಬೇಕು. ಎರಡನೆಯದಾಗಿ ಗೋಚರಿ ಗ್ರಹಗಳ ಪರಿಭ್ರಮಣದ ಶುಭಾ ಶುಭ ಪರಿಣಾಮವನ್ನು ಪರಿಶೀಲಿಸಬೇಕು. ಉದಾಹರಣೆಗೆ : ತುಲಾ ಲಗ್ನದ ಕುಂಭ ರಾಶಿಯಲ್ಲಿ ಶನಿ ಇರುವ ಹಾಗೂ ಮೀನದಲ್ಲಿ ಬುಧ ಇರುವ ಜಾತಕನು ಒಕ್ಕಲುತನ ಇಲ್ಲವೆ ತೋಟಗಾರಿಗ ಖಾತೆಗಳಲ್ಲಿ ಕೆಲಸ ಮಾಡುತ್ತಿರುವ ನೆಂದು ತಿಳಿಯಿರಿ. ಇಂಥ ಜಾತಕನು ಈ ಖಾತೆಯನ್ನು ಬಿಟ್ಟು ಯಾವು ದೊಂದು ಕಾರಖಾನೆ ಇಲ್ಲವೆ ನ್ಯಾಯಖಾತೆ ಇಲ್ಲವೆ ಸಾರ್ವಜನಿಕ ಖಾತೆ ಯಲ್ಲಿ ಕೆಲಸ ಮಾಡಲು ಪ್ರಯತ್ನಿಸುತ್ತಿದ್ದರೆ ಪ್ರಯತ್ನಿಸಲು ಸಮ್ಮತಿ ಯನ್ನು ಕೊಡಬೇಕು. ಆದರೆ ಅದೇ ಜಾತಕನು ಅಂಚೆ, ಬ್ಯಾಂಕ ಮೊದಲಾದ ಹಣಕಾಸಿಗೆ ಸಂಬಂಧಿಸಿದ ಖಾತೆಗಳಲ್ಲಿ ಪ್ರಯತ್ನಿಸುತ್ತಿದ್ದರೆ ಇದ್ದ ನೌಕರಿ ಬಿಡಬಾರದೆಂದು ಉಪದೇಶಿಸಬೇಕು.

ಎರಡನೆಯದಾಗಿ ಗೋಚರಿಯಿಂದ ಅನುಕೂಲ ಗ್ರಹವಿದ್ದಾಗ ಪ್ರಯತ್ನಿಸಲು ಯಾವ ಅಭ್ಯಂತರವೂ ಇಲ್ಲ.

## ಬದಲೀ ಯೋಗಗಳು

ನೌಕರಶಾಹಿ ವರ್ಗದವರು ವಿಶೇಷವಾಗಿ ಸರಕಾರೀ ನೌಕರದಾರರು ಸಾಮಾನ್ಯವಾಗಿ ಮೇಲಿಂದ ಮೇಲೆ ಕೇಳುವ ಪ್ರಶ್ನೆ ಎಂದರೆ ಬದಲಿ ವಿಷಯ ವಾಗಿ.

ಸರಕಾರೀ ನೌಕರ ವರ್ಗದವರಿಗೆ ಪ್ರತಿ ಮೂರು ವರ್ಷಕ್ಕೊಮ್ಮೆ ಬದಲಿಯಾಗಬೇಕೆಂಬ ಸಾಮಾನ್ಯ ನಿಯಮವಿದ್ದರೂ ಜ್ಯೋತಿಷ್ಯದ

ಭಾಷ್ಯೆಯೇ ಬೇರೆ ಇರುತ್ತದೆ. ಬದಲಿ ಯೋಗವಿರದಿದ್ದರೆ ಎಷ್ಟೇ ಪ್ರಯತ್ನ ಪಟ್ಟರೂ ಬದಲಿಯಾಗುವದಿಲ್ಲ.

ಪ್ರತಿ ಮೂರು ವರ್ಷಕ್ಕೊಮ್ಮೆ ಸರಕಾರೀ ನೌಕರರನ್ನು ಬದಲಿ ಮಾಡ ಬೇಕೆಂದು ಸರಕಾರದ ನಿಯಮವಿದ್ದರೂ ಒಂದೇ ವರ್ಷದಲ್ಲಿ ೩-೪ ಸ್ಥಳ ಗಳಿಗೆ ೩-೪ ಸಲ ಬದಲಿ ಹೊಂದಿದ ನೌಕದಾರ ಜನರನ್ನೂ ೧೦-೧೨ ವರ್ಷಗಳ ವರೆಗೆ ಒಂದೇ ಸ್ಥಳದಲ್ಲಿರುವ ಸರಕಾರೀ ನೌಕರರನ್ನೂ ನೋಡಿದ ಅನುಭವವಿದೆ. ಅಷ್ಟೇ ಏಕೆ, ಬದಲಿ ಹುಕುಮು ಹೊರಟ ಕೆಲ ಘಂಟೆಗಳಲ್ಲಿಯೇ ತಹಕೂಫ ಇಲ್ಲವೆ ರದ್ದುಪಡಿಸಿದ ಹುಕುಮುಗಳು ಬಂದ ಜನರನ್ನೂ, ಬದಲಿ ಹುಕುಮು ಬಂದು ರಿಲೀವ್ಡ Relieve) ಆಗಿ ಪುನಃ ಅಲ್ಲಿಯೇ ಸೇವೆ ಸಲ್ಲಿಸುತ್ತಿರುವ ನೌಕರದಾರರ ಸಂಖ್ಯೆಯೇನೂ ಕಡಿಮೆಯಿಲ್ಲ.

ಇನ್ನು ಕೆಲ ನೌಕರದಾರರು ಬದಲಿ ಹುಕುಮು ಬಂದಕೂಡಲೆ ರಜೆ ಪಡೆದುಕೊಂಡು ಕೆಲ ತಿಂಗಳಲ್ಲಿ ಪುನಃ ಮೊದಲಿನ ಸ್ಥಳಗಳಲ್ಲಿ ಕೆಲಸ ಮಾಡುತ್ತಿರುವದನ್ನೂ ಕಂಡಿದ್ದೇವೆ. ಮತ್ತೆ ಕೆಲ ನೌಕರ ವರ್ಗದವರು ಬದಲಿ ಹುಕುಮು ಬಂದಾಗ ರದ್ದುಪಡಿಸಲು ಭಗೀರಥ ಪ್ರಯತ್ನಪಟ್ಟರೂ ಆಗದೆ ಕೆಲ ವರ್ಷಗಳ ನಂತರ ಸಾಧಿಸಿದವರನ್ನು ನೋಡಿದ್ದೇವೆ. ಹಾಗಾದರೆ ಇದಕ್ಕೆಲ್ಲ ಏನು ಕಾರಣ, ಜ್ಯೋತಿಷ್ಯದ ಸಿದ್ಧಾಂತ ಇಲ್ಲಿ ಏನು ಹೇಳಲು ಬಯಸುತ್ತಿದೆ ಎಂಬುದನ್ನು ನೋಡೋಣ.

ಬದಲಿ ವಿಷಯವಾಗಿ ಜ್ಯೋತಿಷ್ಯದ ವ್ಯಾಖ್ಯೆಯನ್ನು ವಿವರಿಸುವ ಪೂರ್ವದಲ್ಲಿ ಎರಡು ಸಂಗತಿಗಳನ್ನು ನಾವು ಪರಿಶೀಲಿಸಬೇಕಾಗುತ್ತದೆ. ೧) ಜಾತಕನ ಜಾತಕದಲ್ಲಿಯ ಯೋಗಗಳು ೨) ಗೋಚರೀ ಗ್ರಹಗಳ ಬಲಾಬಲ.

### ಜಾತಕನ ಜಾತಕದಲ್ಲಿಯ ಯೋಗಗಳು

ಸಾಮಾನ್ಯವಾಗಿ ಯಾವದೇ ನೌಕರದಾರನಿಗೆ ಮೇಲಿಂದ ಮೇಲೆ ಬದಲಿ ಯಾಗುತ್ತಿದ್ದರೆ, ಒಂದೇ ವರ್ಷಕ್ಕೆ ೨-೩ ಕಡೆಗೆ ಬದಲಿಯಾಗುತ್ತಿದ್ದರೆ

ಅಥವಾ ಎಷ್ಟೇ ಪ್ರಯತ್ನಪಟ್ಟರೂ ಬದಲಿ ಹುಕುಮು ರದ್ದು ಆಗುವದಿಲ್ಲವೊ ಅಂಥವರಿಗೆ ಅಥವಾ ಯಾವಾಗಲೂ ( Outdoor executive work ) ದಲ್ಲಿರುವವರಿಗೆ ಅಥವಾ ಸತತ ಸಂಚಾರಿ, ಪ್ರವಾಸಿ ಜೀವಿ ಅಥವಾ ಹುಟ್ಟು ಊರು ಬಿಟ್ಟು ಬೇರೆ ಪ್ರಾಂತದಲ್ಲಿ ಇಲ್ಲವೆ ಬೇರೆ ದೇಶಗಳಲ್ಲಿ ಉದ್ಯೋಗ ಮಾಡುತ್ತಿದ್ದರೆ ( ಸದಾ ಸ್ವಕ್ಷೇತ್ರ ಬಾಹಿರ ಜೀವಿ ) ಇಂಥವರ ಜಾತಕದಲ್ಲಿ ಕೆಳಗೆ ಕಾಣಿಸಿದ ಯೋಗಗಳು ಇರುವವು, ೧) ಚರರಾಶಿಯ ಲಗ್ನ ಇಲ್ಲವೆ ದ್ವಿಸ್ವಭಾವ ರಾಶಿಯ ಲಗ್ನಗಳು ೨) ಅನೇಕ ಗ್ರಹಗಳು ಲಗ್ನ, ತೃತೀಯ, ಸಪ್ತಮ, ಭಾಗ್ಯ, ವ್ಯಯ ಈ ಸ್ಥಾನದಲ್ಲಿರುವವು. ೨) ಅನೇಕ ಗ್ರಹಗಳು ( ವಿಶೇಷವಾಗಿ ಚಂದ್ರನು ) ಚರರಾಶಿಯಲ್ಲಿ ಅಥವಾ ದ್ವಿಸ್ವಭಾವ ರಾಶಿಯಲ್ಲಿ ಇರುವವು.

ಯಾವ ನೌಕರದಾರರು ೧೧-೧೨ ವರ್ಷಗಳ ವರೆಗೆ ಒಂದೇ ಸ್ಥಳ ದಲ್ಲಿರುವರೊ ಅಥವಾ ಬದಲಿಯಾದ ಕೂಡಲೇ ಸ್ವಲ್ಪ ಪ್ರಯತ್ನದಿಂದ ಬದಲಿ ರದ್ದಾಗುವದೊ ಅಥವಾ ಸ್ಥಾಯೀ ( ಸ್ಥಾವರ ) ನೌಕರಿಯನ್ನು ಮಾಡುವರೊ ಇಂಥವರ ಜಾತಕದಲ್ಲಿ ಈ ಕೆಳಗೆ ಕಾಣಿಸಿದ ಯೋಗಗಳಿರು ವವು. ೧) ಸ್ಥಿರ ರಾಶಿಯ ಲಗ್ನಗಳು ಇಲ್ಲವೆ ದ್ವಿಸ್ವಭಾವ ರಾಶಿಯ ಲಗ್ನ ಗಳು. ೨) ಅನೇಕ ಗ್ರಹಗಳು ದ್ವಿತೀಯ, ಚತುರ್ಥ, ಪಂಚಮ, ಷಷ್ಠ, ಅಷ್ಟಮ, ದಶಮ, ಏಕಾದಶ ಈ ಸ್ಥಾನಗಳಲ್ಲಿರುವವು. ೩) ಅನೇಕ ಗ್ರಹ ಗಳು ವಿಶೇಷವಾಗಿ ಚಂದ್ರನು ಸ್ಥಿರರಾಶಿಯಲ್ಲಿರುವನು.

ಜಾತಕನ ಜಾತಕದಲ್ಲಿಯ ಈ ಯೋಗಗಳನ್ನು ಪರಿಶೀಲಿಸಬೇಕು.

೨, ಗೋಚರೀ ಗ್ರಹಗಳ ಬಲಾಬಲ

ಗೋಚರೀ ಗ್ರಹಗಳಲ್ಲಿ ಗುರು, ಶನಿ, ರಾಹು, ರವಿ ಈ ಮೂರು ಗ್ರಹ ಗಳ ರಾಶ್ಯಾಂತರವು (ಪರಿಭ್ರಮಣ) ಫಲಜ್ಯೋತಿಷ್ಯದಲ್ಲಿ ಅತ್ಯಂತ ಪ್ರಭಾವ ಶಾಲಿಯಾದ ಪರಿಣಾಮವನ್ನುಂಟು-ಮಾಡುವವು.

ಈ ನಾಲ್ಕು ಗ್ರಹಗಳು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಬದಲಿ ( ಪ್ರವೇಶ ) ಆದ ಹಾಗೆ ನೌಕರದಾರರಿಗೂ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಬದಲಿಯಾಗುವದು.

ಗುರು ಈ ಗ್ರಹವು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಪ್ರವೇಶ ಮಾಡಲು ೧೩ ತಿಂಗಳು ಹಿಡಿಯುವದು. ಶನಿಗ್ರಹಕ್ಕೆ ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಪ್ರವೇಶಿಸಲು ೩೦ ತಿಂಗಳು ಹಿಡಿಯು ವದು. ರಾಹುವಿಗೆ ೧೮ ತಿಂಗಳು ಬೇಕು, ರವಿಗೆ ೧ ತಿಂಗಳು ಬೇಕು.

ಗುರು : ಗುರುವು ಗೋಚರಿಯಿಂದ ೧ ನೇ (ಜನ್ಮಸ್ಥ) ೩ ನೇ, ೭ ನೇ, ೯ ನೆಯವನಾಗಿ ಬಂದಾಗ ಬದಲಿ ಯೋಗವನ್ನು ಕೊಡುವನು.

ಇದರಂತೆಯೇ ಗೋಚರಿಯಿಂದ ಗುರುವಿನ ಪರಿಭ್ರಮಣವು ಲಗ್ನ, ತೃತೀಯ, ಸಪ್ತಮ, ಭಾಗ್ಯ, ವ್ಯಯ ಸ್ಥಾನಗಳ ಮೇಲಿಂದ ಆಗುವಾಗ ಕೂಡ ಬದಲಿ ಆಗುವ ಯೋಗವನ್ನುಂಟುಮಾಡುವನು.

ಗೋಚರೀ ಗುರುವಿನ ಪರಿಭ್ರಮಣವು ಲಗ್ನೇಶ, ತೃತಿಯೇಶ, ಸಪ್ತ-ಮೇಶ, ಭಾಗ್ಯೇಶ, ವ್ಯಯೇಶ ಇವರ ಮೇಲಿಂದ ಆಗುವಾಗ ಕೂಡ ಸ್ಥಳಾಂತರವನ್ನು ಕೊಡುವನು.

ಶನಿ : ಶನಿಯು ಗೋಚರಿಯಿಂದ (ಜನ್ಮಸ್ಥ) ೧ ನೇ, ೫ ನೇ, ೭ ನೇ, ೯ ನೆಯವನಾಗಿ ಬಂದಾಗ ಬದಲಿ ಯೋಗವನ್ನುಂಟುಮಾಡುವನು. ಇದ ರಂತೆಯೇ ಶನಿಯ ಪರಿಭ್ರಮಣವು ಲಗ್ನ, ತೃತೀಯ, ಸಪ್ತಮ, ಭಾಗ್ಯ-ವ್ಯಯ ಈ ಸ್ಥಾನಗಳ ಮೇಲಿಂದ ಆಗುವಾಗಲೂ, ಈ ಸ್ಥಾನಾಧೀಶರ ಮೇಲಿಂದ ಆಗುವಾಗಲೂ ಸ್ಥಳಾಂತರ ಯೋಗವನ್ನು ಕೊಡುವನು.

ರಾಹುವಿನ ಫಲಾಫಲಗಳು ಕೂಡ ಶನಿಯ ಫಲಾಫಲಗಳಂತೆಯೇ ಇರುತ್ತವೆ.

ರವಿಯು ಗೋಚರಿಯಿಂದ ೧, ೭, ೩, ೧೨ ನೆಯವನಾಗಿ ಬಂದಾಗ ಸ್ಥಳಾಂತರ ಯೋಗವನ್ನು ಕೊಡುವನು.

### ಬಡತಿ ಯೋಗಗಳು

ಸಾಮಾನ್ಯವಾಗಿ ನೌಕರದಾರರು ಮೇಲಿಂದ ಮೇಲೆ ಕೇಳುವ ಪ್ರಶ್ನೆ ಗಳಲ್ಲಿ ಇದೂ ಒಂದು. ಬಡತಿ ಯೋಗವೆಂದರೆ ನೌಕರಿಯಲ್ಲಿ ಅನುಕೂಲ ಕಾಲವಿದ್ದಂತೆ. ಈ 'ಅನುಕೂಲ ಕಾಲ' ಈ ಶಬ್ದದ ಅರ್ಥ ವ್ಯಾಪಕ

ವಾಗಿದೆ. ಉದಾಹರಣೆಗೆ : ಯಾವನೊಬ್ಬ ನೌಕರನಿಗೆ "ನಿನಗೆ ಅನುಕೂಲ ಕಾಲವಿದೆ" ಎಂದು ಭವಿಷ್ಯ ಹೇಳಿದೆವೆಂದು ತಿಳಿಯಿರಿ. ಅಂದರೆ ಅವನಿಗೆ ಬಡತಿ, ಇಚ್ಛಿತ ಸ್ಥಳಕ್ಕೆ ವರ್ಗ, ನೌಕರಿ ಸ್ಥಿರವಾಗುವದು, ಪ್ರತಿಕೂಲರಾದ ಮೇಲಾಧಿಕಾರಿಗಳಿಗೆ ಸ್ಥಳಾಂತರವಾಗುವದು, ಇಷ್ಟವಾದ ದಫ್ತರವನ್ನು ವಹಿಸಿಕೊಳ್ಳುವದು, ಇಷ್ಟೆ ಏಕೆ, ಕೆಳಗಿನ ಕಚೇರಿಯಿಂದ ವರಿಷ್ಠ ಕಚೇರಿಗೆ (Sub Offise to Higher Office) ಬದಲಿಯಾಗುವದು ಇತ್ಯಾದಿ ವಿಷಯುಗಳು ಕೂಡ ಬಡತಿ ಎಂದು ಅರ್ಥ ಮಾಡಿಕೊಳ್ಳಬೇಕು.

ಯಾರೊಬ್ಬ ನೌಕರದಾರನಿಗೆ ಮೇಲಿನ ಹುದ್ದೆ ಪಡೆಯಲು ಕೆಲ ಖಾತೆಗಳಲ್ಲಿ ಅರ್ಹತೆಯನ್ನು (Qualification) ನೋಡುವರು. ಕೆಲ ಖಾತೆಗಳಲ್ಲಿ ಸೇವೆಯನ್ನು ಸಲ್ಲಿಸಿದ ಜ್ಯೇಷ್ಠತೆಯನ್ನು (Seniority) ನೋಡುವರು. ಇನ್ನು ಕೆಲ ಖಾತೆಗಳಲ್ಲಿ ವಯಸ್ಸನ್ನು ನೋಡುತ್ತಿದ್ದರೆ ಕೆಲ ಖಾತೆಗಳಲ್ಲಿ ಖಾತೆಗಳ ಪರೀಕ್ಷೆ (Department examination) ಗಳ ಯಶಸ್ಸಿನ ಮೇಲಿಂದ ನಿರ್ಣಯಿಸುತ್ತಿದ್ದರೆ ಮತ್ತೆ ಕೆಲ ಖಾತೆಗಳಲ್ಲಿ ಪಬ್ಲಿಕ್ ಸರ್ವಿಸ ಕಮೀಶನ್ ಅಥವಾ ಯೂನಿಯನ್ ಪಬ್ಲಿಕ್ ಸರ್ವಿಸ್ ಪರೀಕ್ಷೆಯ ಮೇಲಿಂದಲೂ ಬಡತಿಯನ್ನು ಕೊಡುತ್ತಾರೆ. ಮತ್ತೆ ಕೆಲ ಖಾತೆಗಳಲ್ಲಿ ಕಾನ್ಫಿಡೆನ್ಶಲ್ ರೆಕಾರ್ಡ (Confidential Record) ಗಳ ಮೇಲಿಂದಲೂ ಬಡತಿ ಸಿಗುತ್ತದೆ.

ಯಾವದೆ ರೀತಿಯಿಂದ ನೋಡಿದರೂ ದೈವದ ಬೆಂಬಲವಿಲ್ಲದೆ ಯಾರೂ ಮೇಲಿನ ಹುದ್ದೆ ಪಡೆಯಲಾರರೆಂಬುದು ಸೂರ್ಯಪ್ರಕಾಶದಷ್ಟು ಸತ್ಯವಿರುತ್ತದೆ.

ಎಷ್ಟೋ ನೌಕರದಾರರಿಗೆ ಎಲ್ಲ ಅರ್ಹತೆ ಇದ್ದರೂ ಮೇಲಿನ ಹುದ್ದೆ ಪಡೆಯಲಾರದಂಥ ಎಷ್ಟು ಜನರಿಲ್ಲ? ಯಾವ ಅರ್ಹತೆಯೂ ಇಲ್ಲದೆ ಮೇಲಿನ ಹುದ್ದೆಯ ಅಂದರೆ ವರಿಷ್ಠ ಅಧಿಕಾರಿಗಳಾದ ಉದಾಹರಣೆಗಳೂ ಸಿಗುತ್ತವೆ. ಅಂತೆಯೇ ಅರಕ್ಷಿತಂ ತಿಷ್ಠತಿ ದೈವರಕ್ಷಿತಃ ಸುರಕ್ಷಿತಂ ತಿಷ್ಠತಿ, ದೈವವಿಹತೋ ವಿನಶ್ಯತಿ ಎಂದು ಹೇಳಲಾಗಿದೆ.

ಬದಲಿ ಯೋಗಗಳು ಜಾತಕದಲ್ಲಿ ಹೇಗೆ ಇರುವವೋ ಹಾಗೆಯೇ ಬಡತಿ ಯೋಗಗಳೂ ಬೇರೆ ಇರುವವು.

ಬಡತಿ ಯಾವಾಗ ಸಿಗುತ್ತದೆ ಎಂದು ಕೇಳುವ ಪೃಚ್ಛಕನಿಗೆ ಉತ್ತರ ಕೊಡುವ ಪೂರ್ವದಲ್ಲಿ ನಾವು ಎರಡು ಸಂಗತಿಗಳನ್ನು ಪರಿಶೀಲಿಸಬೇಕು.

೧) ಜಾತಕನ ಜಾತಕದಲ್ಲಿಯ ಯೋಗಗಳು.

೨) ಗೋಚರೀ ಗ್ರಹಗಳ ಪರಿಣಾಮ ಹಾಗೂ ದಶ-ಅಂತರ್ದಶಗಳ ಪ್ರಭಾವ.

### ಜಾತಕನ ಜಾತಕದಲ್ಲಿಯ ಯೋಗಗಳು

೧) ಭಾಗ್ಯೇಶನು ಬಲಾಢ್ಯನಿದ್ದ ಜಾತಕನಿಗೆ ಬಡತಿ (ಏರಿಕೆ) ಯೋಗ ಮೇಲಿಂದ ಮೇಲೆ ಸಿಗುವದು.

೨) ಚಂದ್ರನು ಶನಿಯೊಂದಿಗೆ ಇಲ್ಲವೆ ಶನಿ ದೃಷ್ಟಿಯಲ್ಲಿದ್ದರೆ ಜಾತಕನಿಗೆ ಬಡತಿ ಪಡೆಯಲು ಬಹಳ ಹೆಣಗಾಡಬೇಕಾಗುತ್ತದೆ.

೩) ಸುಖೇಶನು ದುರ್ಬಲನಿದ್ದರ ಅಥವಾ ಸುಖಸ್ಥಾನದಲ್ಲಿ ಪಾಪ ಗ್ರಹಗಳಿದ್ದರೆ ಸುಲಭವಾಗಿ ಬಡತಿ ಸಿಗುವದಿಲ್ಲ.

೪) ಖಾತೆಯ ಕಾರಕ ಗ್ರಹಗಳು ಬಲಾಢ್ಯವಿದ್ದ ಜಾತಕನಿಗೆ ಮೇಲಿಂದ ಮೇಲೆ ಬಡತಿ ಸಿಗುವದು. ಉದಾ : ಬುಧನು ಯೋಗ ಕಾರಕನೂ, ಬಲಾಢ್ಯನೂ ಇರುವ ಅಂಚೆ ಇಲ್ಲವೆ ರೆವ್ಹಿನ್ಯೂ (Revenue) ಖಾತೆಯ ನೌಕರನಿಗೆ ಬಹು ಬೇಗ ಬಡತಿ ಸಿಗುವದು. ಆದರೆ ಬುಧ ನೊಬ್ಬನೇ ಬಲಾಢ್ಯನಿದ್ದು ಶನಿಯು ದುರ್ಬಲವಿರುವ ಲೋಕೋಪಯೋಗಿ ಖಾತೆಯ ನೌಕರನಿಗ ಬಡತಿ ಸಿಗುವದು ತೊಂದರೆಯಾಗುವದು.

೫) ಗ್ರಹಗಳು ಉದಿತ ಗೋಲಾರ್ಧದಲ್ಲಿದ್ದರೆ ಬಹು ಬೇಗ ಬಡತಿ ಸಿಗುವದು.

೬) ರವಿ–ಶನಿ, ಶನಿ–ಮಂಗಳ, ಚಂದ್ರ–ಶನಿ, ರಾಹು–ಚಂದ್ರ ಈ ಗ್ರಹಗಳು ಲಗ್ನ, ಚತುರ್ಥ, ದಶಮ, ಭಾಗ್ಯ ಈ ಸ್ಥಾನದಲ್ಲಿರುವ ಜಾತಕನಿಗೆ ಬಡತಿ ಸಿಗಲು ವಿಘ್ನಗಳು ಬರುವವು.

೭) ಚತುರ್ಗ್ರಹ, ಪಂಚಗ್ರಹ, ಷಡ್‌ಗ್ರಹ ಈ ಯೋಗಗಳು ಲಗ್ನ, ಚತುರ್ಥ, ದಶಮ, ಭಾಗ್ಯ ಈ ಸ್ಥಾನದಲ್ಲಿರುವ ಜಾತಕನಿಗೆ ಬಡತಿ ಸಿಗಲು ಅನೇಕ ತೊಂದರೆಗಳುಂಟಾಗುವವು.

೮) ಷಷ್ಠಸ್ಥಾನದಲ್ಲಿ ದುರ್ಬಲ ಚಂದ್ರ ಅಥವಾ ಶುಕ್ರರಿದ್ದ ಜಾತಕನಿಗೆ ಬಡತಿ ಸಿಗಲು ಬಹಳ ಹೆಣಗಾಡಬೇಕಾಗುವದು.

೯) ಪಂಚಮೇಶ ಹಾಗೂ ದಶಮೇಶರು ಬಲಾಢ್ಯರಿದ್ದ ಜಾತಕನು ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಯಶಸ್ಸು ಹೊಂದಿ ಬಡತಿ ಪಡೆಯುವನು.

೧೦) ಖಾತೆಯ ಕಾರಕ ಗ್ರಹವೂ ಹಾಗೂ ಖಾತೆಯ ಕಾರಕಸ್ಥಾನಾಧೀಶರೂ ಬಲಾಢ್ಯರಿದ್ದ ಜಾತಕರು ಖಾತೆಗಳ ಪರೀಕ್ಷೆಗಳಲ್ಲಿ ಯಶಸ್ಸು ಹೊಂದಿ ಬಡತಿಯನ್ನು ಪಡೆಯುವರು.

೧೧) ಸುಖೇಶ ಹಾಗೂ ಭಾಗ್ಯೇಶರು ಬಲಾಢ್ಯರಿದ್ದ ಜಾತಕನಿಗೆ ಕಾನ್ಫಿಡೆನ್ಸಿಯಲ್ ರೆಕಾರ್ಡಗಳ ಮೂಲಕ ಬಡತಿ ಸಿಗುವದು.

೧೨) ದಶಮೇಶನು ಹಾಗೂ ಖಾತೆಯ ಕಾರಕಗ್ರಹವು ಬಲಾಢ್ಯರಿದ್ದು ಮಧ್ಯಮ ವಯಸ್ಸಿನಲ್ಲಿ ಬಲಾಢ್ಯಯೋಗಕಾರಕ ಗ್ರಹಗಳ ದಶೆ ನಡೆಯುತ್ತಿದ್ದ ಜಾತಕನಿಗೆ ಜ್ಯೇಷ್ಠತೆ ಮೂಲಕ ಬಡತಿ ಸಿಗುತ್ತದೆ.

೨. ಗೋಚರೀ ಗ್ರಹಗಳ ಮೇಲಿಂದ ಪರಿಶೀಲಿಸಿದರೆ ಗುರು, ಶನಿ ಈ ಗ್ರಹಗಳು ಶುಭರಿದ್ದಾಗ ಬಡತಿಯನ್ನು ಕೊಡುವರು.

ಯೋಗಕಾರಕ ಗ್ರಹಗಳ ದಶ–ಅಂತರ್ದಶೆಗಳಲ್ಲಿ ಬಡತಿ ಸಿಗುವದು.

ಖಾತೆಯ ಕಾರಕಗ್ರಹದ ದಶ-ಅಂತರ್ದಶದ ಬಡತಿ ಸಿಗುವದು.

ಹಿಂಬಡತಿ ಯೋಗ (Reversion)

ಮುಂಬಡತಿ ಇಲ್ಲದಿದ್ದರೂ ನಡೆದೀತು, ಹಿಂಬಡತಿಯ ಅನಿಷ್ಟ ಯೋಗ ಈ ವರ್ಷದಲ್ಲಿ ಇಲ್ಲ ತಾನೇ ಅಂತಾ ಕೇಳುವವರೂ ಇದ್ದಾರೆ.

ಈ ಹಿಂಬಡತಿ ಯೋಗದಲ್ಲಿ ಸಾಮಾನ್ಯವಾಗಿ ಎರಡು ಪ್ರಕಾರಗಳಿವೆ.

೧) ಸಾಮಾನ್ಯವಾಗಿ ಆಫೀಸಿಯೇಟಿಂಗ ಅಥವಾ ತಾತ್ಕಾಲಿಕ ಬಡತಿ ಸಿಕ್ಕ ಮೇಲೆ, ಕೆಲ ಸಮಯದ ನಂತರ ಮತ್ತೆ ಹಿಂಬಡತಿ ಇಲ್ಲವೆ ರಿವ್ಹರ್ಟ ಆಗುವ ನೌಕರದಾರರ ಒಂದು ವರ್ಗ.

೨) ಬಡತಿ ಸಿಕ್ಕ ಹಲವು ವರ್ಷಗಳ ನಂತರ.

ಮೊದಲನೇ ವರ್ಗದ ಹಿಂಬಡತಿಯನ್ನು ಪಡೆಯುವ ನೌಕರರಿಗೆ ಕೇವಲ ಗೋಚರೀ ಗ್ರಹಗಳ ಕೈವಾಡ ಇರುವದಲ್ಲದ ಮೇಲೆ ಯಾವ ಯೋಗಗಳೂ ಇರುವದಿಲ್ಲ. ಆ ಯೋಗಗಳು ಕೆಳಗೆ ಕಾಣಿಸಿದಂತೆ ಇರುತ್ತವೆ.

೧. ಗೋಚರಿಯಿಂದ ಗುರು ಇಲ್ಲವೆ ಶನಿಗ್ರಹಗಳು ೭ನೆಯ ಇಲ್ಲವೆ ೧೧ನೆಯವರಿದ್ದಾಗ ಬಡತಿ ಯೋಗವನ್ನು ಕೊಟ್ಟು ಮುಂದೆ ಅವೇ ಗ್ರಹಗಳು ೮ನೆಯ ಇಲ್ಲವೆ ೧೨ ನೆಯವರಾಗಿ ಬಂದಾಗ ಹಿಂಬಡತಿಯನ್ನು ಕೊಡುವರು.

೨. ಗುರು ಗೋಚರಿಯಿಂದ ಜನ್ಮಸ್ಥನಾಗಿ (೧ನೆಯ) ಬಂದಾಗ ಮುಂಬಡತಿ, ಹಿಂಬಡತಿ ಎರಡನ್ನೂ ಕೊಡುವನು.

೩. ಶನಿಯು ಅಷ್ಟಮನಾಗಿ ಬಂದಾಗ ಮುಂಬಡತಿ, ಹಿಂಬಡತಿ ಎರಡನ್ನೂ ಕೊಡುವನು.

೪. ಗುರು, ಶನಿಯರು ಗೋಚರಿಯಿಂದ ೯ನೆಯವರಾಗಿ ಬಂದು ವಕ್ರಿಯಾದಾಗ ಹಿಂಬಡತಿಯನ್ನು, ಮಾರ್ಗಿಯಾದಾಗ ಮುಂಬಡತಿಯನ್ನು ಕೊಡುವರು. ಮುಂದೆ ಹಿಂಬಡತಿಯ ಸಮಸ್ಯೆಗಳು ಉದ್ಭವಿಸಲಾರವು.

೫. ಶನಿಯು ಗೋಚರಿಯಿಂದ ೩, ೬, ೯, ೧೦, ೧೧ನೆಯವನಿದ್ದಾಗ ಬಡತಿ ಏನೋ ಕೊಡುವನು ನಿಜ, ಆದರೆ ಅದೇ ಶನಿಯು ರವಿ, ಮಂಗಳರ ಮೇಲಿಂದ ಪರಿಭ್ರಮಣ ಮಾಡುತ್ತಿದ್ದರೆ ಹಿಂಬಡತಿಯನ್ನು ಕೊಡುವನು. ಉದಾಹರಣೆಗೆ: ವೃಷಭ ಲಗ್ನದ ಮೀನ ರಾಶಿಯಲ್ಲಿ ಚಂದ್ರನೂ ಮಕರದಲ್ಲಿ ಮಂಗಳನೂ ಇರುವ ಜಾತಕನಿಗೆ ಶನಿಯು ಗೋಚರಿಯಿಂದ ಮಕರರಾಶಿಯಲ್ಲಿ ಪ್ರವೇಶಿಸುವಾಗ ಶುಭ ಫಲವನ್ನು ಕೊಡುತ್ತಿದ್ದಾಗ್ಯೂ ಮಂಗಳನ ಮೇಲಿಂದ ಪರಿಭ್ರಮಿಸುವ ಮೂಲಕ ಹಿಂಬಡತಿಯನ್ನು ಕೊಡುವನು.

೬. ಮಹರ್ದಶೆ, ಅಂತರ್ದಶೆಗಳಲ್ಲಿ ಯಾವದಾದರೊಂದು ಅಶುಭ ವಿದ್ದರೆ ಹಿಂಬಡತಿಯಾಗುವದು.

೨) ಬಡತಿ ಸಿಕ್ಕ ಮೇಲೆ ಅಥವಾ ನೌಕರಿಯಲ್ಲಿ ಖಾಯಂ ಆದ ಬಳಿಕವೂ ಕೂಡ ಹಿಂಬಡತಿ ಹೊಂದುವ ಎರಡನೆಯ ಪ್ರಕಾರದ ನೌಕರಿವರ್ಗ.

ಸಾಮಾನ್ಯವಾಗಿ ಅನರ್ಹತೆ, ಅಜಾಗರೂಕತೆ, ಅದಕ್ಷತೆ, ಅಸಮರ್ಥತೆ ಈ ಮೊದಲಾದ ಕಾರಣಗಳನ್ನೊಂದುಗೂಡಿ ಹಿಂಬಡತಿ ಹೊಂದುವ ಕೆಲ ನೌಕರದಾರರಿದ್ದರೆ, ಲಂಚ ಮೊದಲಾದ ಅಪರಾಧದಲ್ಲಿ ಸಿಕ್ಕುಬೀಳುವಿಕೆಯಾಗಲಿ, ಕಾಯ್ದೆಯನ್ನು ಉಲ್ಲಂಘಿಸುವುದರಿಂದ ಹಿಂಬಡತಿ ಪಡೆಯುವ ಇನ್ನೊಂದು ವರ್ಗದವರಿದ್ದಾರೆ.

ಇದೇನೆ ಇದ್ದರೂ, ಫಲಜ್ಯೋತಿಷ್ಯದಲ್ಲಿ ಈ ಅನಿಷ್ಟ ಯೋಗವನ್ನು ಹೊಂದುವ, ಪಡೆಯುವ, ಪಡೆಯುತ್ತಿರುವ ಈ ಅಭಾಗಿಗಳ ಜಾತಕ ಎಂತಿರಬೇಕು, ಗ್ರಹಯೋಗಗಳು ಎಂತಿರಬೇಕು ಎಂಬುದನ್ನು ಪರಿಶೀಲಿಸುವಾ.

ಇಂತಹ ಸಮಸ್ಯೆಗಳನ್ನು ಪರಿಶೀಲಿಸಲು ಎರಡು ಸಂಗತಿಗಳನ್ನು ಗಮನಿಸಬೇಕಾಗುತ್ತದೆ.

ಮೊದಲನೆಯದಾಗಿ, ಜಾತಕನ ಜಾತಕದಲ್ಲಿಯ ಮೂಲ ಗ್ರಹಯೋಗಗಳು, ಎರಡನೆಯದಾಗಿ ಗೋಚರೀ ಗ್ರಹಗಳ ಪರಿಭ್ರಮಣ.

ಜಾತಕನ ಜಾತಕದಲ್ಲಿಯ ಯೋಗಗಳು

ಮೇಲೆ ವಿವೇಚಿಸಿದಂತೆ, ಹಿಂಬಡತಿಯನ್ನು ಪಡೆಯುವವರ ಜಾತಕ ದಲ್ಲಿ ಸಾಮಾನ್ಯವಾಗಿ ಈ ಕೆಳಕಂಡಂತೆ ಯೋಗಗಳು ಕಂಡುಬರುತ್ತವೆ.

೧) ಲಗ್ನೇಶ, ಭಾಗ್ಯೇಶ, ದಶಮೇಶ ಇವರಲ್ಲಿ ಯಾವುದೆ ಇಬ್ಬರು ಭಾವೇಶರು ಅಥವಾ ಈ ಮೂವರೂ ಭಾವೇಶರು ದುರ್ಬಲರಿರುತ್ತಾರೆ.

೨) ಖಾತೆಯ ಕಾರಕ ಮತ್ತು ಹುದ್ದೆಯ (ವೃತ್ತಿಯ) ಕಾರಕ ಗ್ರಹಗಳಲ್ಲಿ ಯಾವುದಾದರೊಂದು ಇಲ್ಲವೆ ಎರಡೂ ಗ್ರಹಗಳು ದುರ್ಬಲವಿರು ತ್ತವೆ.

೩) ದಶಮೇಶನೂ ಖಾತೆಯ ಕಾರಕಗ್ರಹವೂ ದುರ್ಬಲವಿರುತ್ತವೆ.

೪) ಲಗ್ನ, ಚತುರ್ಥ, ದಶಮ, ಭಾಗ್ಯ ಈ ಯಾವುದೊಂದು ಸ್ಥಾನದಲ್ಲಿ ಚತುರ್ಗ್ರಹ, ಪಂಚಗ್ರಹ, ಷಡ್ಗ್ರಹ ಈ ಯಾವುದೊಂದು ಸ್ಥಾನದಲ್ಲಿ ಇರುತ್ತವೆ.

೫) ಸಾಮಾನ್ಯವಾಗಿ, ರವಿಯೂ, ಹುದ್ದೆಯ ಕಾರಕನೂ ದುರ್ಬಲ ರಿರುತ್ತಾರೆ.

೬) ಶನಿಯ ದೃಷ್ಟಿಯು ಚಂದ್ರನ ಮೇಲೆ ಅಥವಾ ಶನಿಯು ಚಂದ್ರ ನೊಂದಿಗೆ ಇರುತ್ತಾನೆ.

೭) ಶನಿ-ಮಂಗಳ, ಚಂದ್ರ-ಶನಿ, ರವಿ-ಶನಿ, ರಾಹು-ಚಂದ್ರ, ರವಿ-ಕೇತು ಇವರ ಯುತಿ, ಸಮಸಪ್ತಕ, ಈ ಯೋಗಗಳು ಲಗ್ನ, ಚತುರ್ಥ ದಶಮ, ಭಾಗ್ಯ ಈ ಯಾವುದೊಂದು ಸ್ಥಾನದಲ್ಲಿ ಇರುತ್ತವೆ.

೮) ಭಿನ್ನ ಭಿನ್ನ ಲಗ್ನಗಳ ಯೋಗಕಾರಕ ಗ್ರಹಗಳು ದುರ್ಬಲ ವಿರುತ್ತವೆ.

ಈ ಮೇಲ್ಕಂಡ ೮ ಪ್ರಕಾರದ ಯೋಗಗಳಲ್ಲಿ ಜನಿಸಿದ ಜಾತಕ ನಿಗೆ, ನೌಕರಿಯಲ್ಲಿ ಖಾಯಂ ಆದಾಗ್ಯೂ ಹಿಂಬಡತಿಯಾಗುವ ಸಂಭವವಿದೆ.

ಎರಡನೆಯದಾಗಿ ಸಾಡೇಸಾತಿಯ ಸಮಯದಲ್ಲಿ ಪಂಚಮಾಷ್ಟಮ ಶನಿಯ ಕಾಲದಲ್ಲಿ, ಶನಿಯ ಪರಿಭ್ರಮಣ, ರವಿ, ಮಂಗಳ, ದಶಮೇಶ, ಖಾತೆಯ ಕಾರಕ ಗ್ರಹ, ಹುದ್ದೆಯ ಕಾರಕ ಗ್ರಹ ಇವರ ಮೇಲಿಂದ ಆಗುವಾಗ.

ಗುರು ಗೋಚರಿಯಿಂದ ೪, ೮, ೧೨ನೆಯವನಾಗಿ ಬಂದಾಗ ಈ ಅನಿಷ್ಟ ಯೋಗಗಳು ಸಂಭವಿಸುತ್ತವೆ.

ಅಶುಭ ಗ್ರಹಗಳ ಮಹಾದಶೆ, ಅಂತರ್ದಶೆಯಲ್ಲಿ ಈ ಅನಿಷ್ಟ ಯೋಗ ಗಳು ಸಂಭವಿಸುವವು.

ಖಾತೆಯಕಾರಕ ಹಾಗೂ ಹುದ್ದೆಯಕಾರಕ ಗ್ರಹಗಳಲ್ಲಿ ಯಾರೋರ್ವರು ದುರ್ಬಲರಿದ್ದು ಅವರ ದಶಾ ಅಂತರ್ದಶೆಯಲ್ಲಿ ಈ ಹಿಂಬಡತಿಯಂತಹ ಅನಿಷ್ಟಯೋಗಗಳು ಜರುಗಬಹುದಾಗಿದೆ.

### ಅಧಿಕಾರಿಗಳ ಕೃಪಾವಕೃಪೆಗಳು

ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಬದಲಿಯಾದ ನೌಕರ ದಾರನು ಸಾಮಾನ್ಯವಾಗಿ ಕೇಳುವ ಪ್ರಶ್ನೆಗಳು ೪ ಇರುತ್ತವೆ.

೧) ಮೇಲಧಿಕಾರಿಗಳ ಸಹಕಾರ ( Co - operation with immediate Boss )

೨) ವರಿಷ್ಠ ಅಧಿಕಾರಿಗಳ ಕೃಪೆ ( Good opinion of higher Boss )

೩) ಸಂಗಡಿಗರ ಸಹಕಾರ ( Co-operation of Collagues Co-workers )

೪) ಕೈ ಕೆಳಗಿನ ಸಹಕಾರ ( Co-operation of Sub–ordinates )

ಈ ಮೇಲೆ ತೋರಿಸಿದ ನಾಲ್ಕೂ ವರ್ಗದ ಜನರೊಂದಿಗೆ ತಮ್ಮ ಸಂಬಂಧವು ಸುಗಮವಾಗಿ, ಸುಮಧುರವಾಗಿ ಸಾಗುವುದೊ ಹೇಗೆ ಎಂಬ ಪ್ರಶ್ನೆಗಳನ್ನು ನಾವು ಸಾಮಾನ್ಯವಾಗಿ ಬಿಡಿಸಬೇಕಾಗುತ್ತದೆ.

ಕಾಲವು ಪ್ರತಿಕೂಲವಿದ್ದಾಗ ಈ ನಾಲ್ಕು ವರ್ಗದ ಜನರ ಅಸಹಕಾರ, ಉಪಟಳದಿಂದ ಬೇಸತ್ತು ನೌಕರಿಗೆ ರಾಜಿನಾಮೆ ಕೊಟ್ಟು ನೌಕರದಾರರ ಅನುಭವವೂ ಇದೆ. ಅಷ್ಟೇ ಏಕೆ,ಈ ವರ್ಗದ ಉಪಟಳದಿಂದ ಅಸಮಾಧಾನ, ಅತೃಪ್ತಿ, ಅವಿಶ್ರಾಂತಿಗಳಿಂದ ಎಷ್ಟೋ ನೌಕರದಾರರು ಹುಚ್ಚರಾದ ಅನು-ಭವವೂ ನಮಗುಂಟು. ಆದುದರಿಂದ ಈ ಪ್ರಶ್ನೆ ತಿಳಿಯುವಷ್ಟು ಸಣ್ಣದಿರದೆ ಬಹು ದೊಡ್ಡ ಸಮಸ್ಯೆಯೇ ಆಗಿರುತ್ತದೆ. ಇಂತಹ ಸಮಸ್ಯೆಗಳಿಗೆ ಉತ್ತರ ಕೊಡುವ ಪೂರ್ವದಲ್ಲಿ ನಾವು ಎರಡು ಸಂಗತಿಗಳನ್ನು ಪರಿಶೀಲಿಸಬೇಕು.

೧. ಜಾತಕನ ಜಾತಕದಲ್ಲಿಯ ಮೂಲಗ್ರಹಗಳ ಸ್ಥಿತಿ ಹಾಗೂ ಯೋಗಗಳು.

೨. ಗೋಚರೀ ಗ್ರಹಗಳ ಪರಿಭ್ರಮಣದಿಂದಾಗುವ ಶುಭಾಶುಭಗಳ ಫಲ ಹಾಗೂ ದಶ-ಅಂತರ್ದಶಗಳ ಪರಿಣಾಮ.

ಜಾತಕನ ಜಾತಕದಲ್ಲಿಯ ಯೋಗಗಳು

೧. ಸಾಮಾನ್ಯವಾಗಿ ಮಂಗಳನು ಪ್ರಬಲನಿರುವ ಜಾತಕನಿಗೆ ಮೇಲಧಿಕಾರಿಗಳ ಸಹಕಾರ ದೊರೆಯುವುದಿಲ್ಲ.

೨. ರವಿಯು ಬಲಾಢ್ಯನಿರುವ ಜಾತಕನಿಗೆ ಅಧಿಕಾರಿಗಳ ಸಹಕಾರ ಯಾವಾಗಲೂ ಸಿಗುವುದು, ಅಥವಾ ಅಧಿಕಾರವಿರದಿದ್ದರೂ ಅಧಿಕಾರ ಸಿಗುವುದು.

೩. ಜಾತಕದಲ್ಲಿ ಬುಧ, ಶುಕ್ರ, ಶನಿ, ಚಂದ್ರ ಇವರು ಬಲಾಢ್ಯರೂ ಯೋಗಕಾರಕರೂ ಇದ್ದು ಚಂದ್ರನು ಸ್ತ್ರೀ ರಾಶಿಯಲ್ಲಿರುವ ಜಾತಕನಿಗೆ ಎಲ್ಲ ವರ್ಗದ ನೌಕರರ ಸ್ನೇಹ–ಸಹಕಾರ ದೊರೆಯುವುದು.

೪. ಜಾತಕದಲ್ಲಿ ಬುಧ, ಶುಕ್ರ, ಶನಿ, ಚಂದ್ರ ಇವರು ಯೋಗ ಕಾರಕರೂ ಬಲಾಢ್ಯರೂ ಇದ್ದು ಚಂದ್ರನು ಪುರುಷ ರಾಶಿಯಲ್ಲಿದ್ದರೆ ಮೇಲ–ಧಿಕಾರಿಗಳ ಹಾಗೂ ಸಂಗಡಿಗರ ಸಹಕಾರ ದೊರೆಯಲಾರದು. ಆದರೆ ವರಿಷ್ಠ ಅಧಿಕಾರಿಗಳ ಮತ್ತು ಕೈಳಗಿನವರ ಸಹಕಾರ ಸಿಗುವುದು.

೫. ರವಿ, ಗುರು, ಮಂಗಳರು ಯೋಗಕಾರಕರೂ ಬಲಾಢ್ಯರೂ ಇದ್ದು ಚಂದ್ರನು ಪುರುಷ ರಾಶಿಯಲ್ಲಿರುವ ನೌಕರ ವರ್ಗದವರಿಗೆ ಮೂರೂ ವರ್ಗದ ಜನರ ಸಹಕಾರ-ಸ್ನೇಹ ಎಂಬುದು ಕನಸಿನ ಮಾತಾಗುವುದು. ಆದರೆ ಕೈಕೆಳಗಿನ ಜನರು ಇವರ ದರ್ಪಕ್ಕೆ, ಅಧಿಕಾರಕ್ಕೆ, ಕ್ರೌರ್ಯಕ್ಕೆ ಅಂಜಿ ವಿಧೇಯರಾಗುವರು.

೬. ರವಿ-ಮಂಗಳ-ಗುರು ಯೋಗಕಾರಕರೂ ಬಲಾಢ್ಯರೂ ಇದ್ದು ಚಂದ್ರನು ಸ್ತ್ರೀ ರಾಶಿಯಲ್ಲಿರುವ ನೌಕರದಾರನಿಗೆ ವರಿಷ್ಠ ಅಧಿಕಾರಿಗಳ ಹಾಗೂ ಕೈಕೆಳಗಿನ ಜನರ ಸಹಕಾರ, ಸಹಾಯ, ಸ್ನೇಹ ಪೂರ್ಣ ಸಿಗುತ್ತದೆ. ಆದರೆ ಮೇಲಧಿಕಾರಿಗಳ ಮತ್ತು ಸಂಗಡಿಗರ ಅಸಹಕಾರ ವಿರುತ್ತದೆ.

೭. ಗುರುವೊಬ್ಬನೇ ಬಲಾಢ್ಯನೂ ಯೋಗಕಾರಕಗೂ ಇರುವ ಜಾತಕನಿಗೆ ಸಂಗಡಿಗರನ್ನು (Collegues) ಹೊರತು ಪಡಿಸಿ ಮಿಕ್ಕ ಮೂರೂ ವರ್ಗದವರ ಸ್ನೇಹ-ಸಹಕಾರವು ತೃಪ್ತಿಕರವಿರುತ್ತದೆ.

೮. ಮಿಥುನ, ತುಲಾ, ಕುಂಭ, ಸಿಂಹ, ಧನು, ಮಕರ ಈ ರಾಶಿಯ ಜನರಿಗೆ ಮೇಲಧಿಕಾರಿಗಳ ಹಾಗೂ ಸಂಗಡಿಗರ ಸಹಕಾರ ದೊರೆಯುವುದೆ ಇಲ್ಲ.

೯. ಕರ್ಕ, ವೃಶ್ಚಿಕ, ಮೀನ ಈ ರಾಶಿಯ ಜನರ ಮಾತಿನಲ್ಲಿ ಚಾಪಲ್ಯವಿರುವುದರಿಂದ, ಪ್ರಸಂಗಾನುಸಾರವಾಗಿ ವರ್ತಿಸುವುದರಿಂದ ಶತ್ರುಗಳನ್ನು ಎದುರುಹಾಕಿಕೊಳ್ಳುವುದಿಲ್ಲ. ಆದರೆ ಅವರಿಗೆ ಗುಪ್ತ ಶತ್ರುಗಳು ಬಹಳ.

೧೦. ವೃಷಭ, ಕನ್ಯಾ ಈ ರಾಶಿಯವರು ಜನ್ಮತಃ ವಿಧೇಯರು, ಇವರಿಗೆ ಶತ್ರುಗಳು ಇರುವುದೇ ಕಡಿಮೆ. ಎಲ್ಲ ವರ್ಗದವರೊಂದಿಗೂ ಹೊಂದಿಕೊಂಡು ಇರುವರು.

೧೧. ಮೇಷ, ಸಿಂಹ, ಧನು ಈ ರಾಶಿಯ ಜನರು ಅಧಿಕಾರಿಗಳಾಗಿ ಕೆಲಸ ಮಾಡುತ್ತಿದ್ದರೆ ಅಥವಾ ಅಧಿಕಾರವಿದ್ದರೆ, ಅಥವಾ ಅಧಿಕಾರ ಚಲಾಯಿಸುತ್ತಿದ್ದರೆ ಇವರು ಸುಖಿಗಳು. ಅಧಿಕಾರ ಇರದ ಸ್ಥಳದಲ್ಲಿ ಅಥವಾ

ಒಬ್ಬರ ವಿಧೇಯರಾಗಿ ಕೆಲಸ ಮಾಡುವ ಪ್ರಸಂಗದಲ್ಲಿ ಇವರು ಅಸುಖಿಗಳಿದ್ದು ಕೆಲಸಕ್ಕೆ ಕೂಡ ಹಲವು ಬಾರಿ ರಾಜೀನಾಮೆ ಕೊಡುವರು.

೧೨) ರವಿ–ಮಂಗಳ–ಗುರುಗಳು ಸ್ತ್ರೀರಾಶಿಯಲ್ಲಿದ್ದು ಶುಕ್ರ, ಶನಿ, ಚಂದ್ರರು ಪುರುಷ ರಾಶಿಯಲ್ಲಿದ್ದ ಜಾತಕನಿಗೆ ಮೇಲಧಿಕಾರಿಗಳ ಹಾಗೂ ಸಂಗಡಿಗರ ಸ್ನೇಹ–ಸಹಕಾರ ಸಿಗದೆ ವರಿಷ್ಠ ಅಧಿಕಾರಿಗಳ ಹಾಗೂ ಕೈ ಕೆಳಗಿನ ಜನರ ಸ್ನೇಹ, ಸಹಕಾರ ಸಿಗುತ್ತದೆ.

**ಗೋಚರಿ: ಗ್ರಹಗಳ ಪರಿಭ್ರಮಣದಿಂದಾಗುವ ಶುಭಾಶುಭ ಫಲಗಳು**

೧) ಶನಿಯು ಗೋಚರಿಯಿಂದ ಸಾಡೇಸಾತಿ, ಪಂಚಮಾಷ್ಟಮ ಇರುವಾಗ ಚಾರ್ಜ್‌ಶೀಟ್ ಹಾಗೂ ಅಶುಭ ಕಾನ್ಫಿಡೆನ್ಶಿಯಲ್ ರಿಕಾರ್ಡಗಳು ಆಗುವವು.

೨) ಸಾಡೇಸಾತಿ ಇಲ್ಲವೆ ಪಂಚಮಾಷ್ಟಮ ಶನಿಯಿದ್ದು ಅವನ ಪರಿಭ್ರಮಣ ರವಿ, ಮಂಗಳ, ಚಂದ್ರರ ಮೇಲಿಂದ ಆಗುವಾಗ ನವಕರಿ ಕಳೆದುಕೊಳ್ಳಬಹುದಾಗಿದೆ.

೩) ಗೋಚರಿಯಿಂದ ಗುರುವು ೪–೮–೧೨ ನೆಯವನಾಗಿ ಬಂದಾಗ ಅಧಿಕಾರಿ ವರ್ಗದವರಿಂದ ತೊಂದರೆಯಾಗುತ್ತದೆ.

**ಎಕ್ಸಟೆನ್ಸನ್ ( Extension )**

ಕೆಲ ನೌಕರದಾರರಿಗೆ ಸೇವೆಸಲ್ಲಿಸಿದ ಅವಧಿ ೩೦ ವರುಷ ಮಿಕ್ಕಿದ ನಂತರ ನೌಕರಿಯಿಂದ ನಿವೃತ್ತ ಆಗುವರು. ಇನ್ನು ಕೆಲ ನೌಕರದಾರರಿಗೆ ೫೫ ವರುಷಗಳಿಗೆ ನಿವೃತ್ತಿ ಸಿಗುವದು. ಮತ್ತೆ ಕೆಲ ನೌಕರದಾರರಿಗೆ ೫೮ ವರುಷಗಳ ವರೆಗೆ ಸೇವೆಸಲ್ಲಿಸುವ ಭಾಗ್ಯ ಸಿಗುವದು. ಈ ನಿವೃತ್ತಿವಯೋಮಾನವು ನಮ್ಮಲ್ಲಿ ಇತ್ತೀಚೆಗೆ ಚರ್ಚಾಸ್ಪದ ವಿಷಯವಾಗಿದೆ. ಕೆಲ ರಾಜ್ಯದಲ್ಲಿ

ಸರಕಾರಿ ನೌಕರದಾರರನ್ನು ೫೫ ವರುಷಕ್ಕೇ ನಿವೃತ್ತಿ ಮಾಡುತ್ತಿದ್ದರೆ. ಮತ್ತೆ ಕೆಲ ರಾಜ್ಯಗಳಲ್ಲಿ ೫೮ ವರುಷಕ್ಕೆ ನಿವೃತ್ತಿ ಮಾಡುತ್ತಾರೆ.

ಯಾವದೆ ರೀತಿಯಿಂದ ನಿವೃತ್ತಿ ವಯೋಮಾನವನ್ನು ನಿರ್ಧರಿಸಲಿ, ನಿವೃತ್ತಿ ಅವಧಿ ಮುಗಿದ ಮೇಲೂ ಸಹ ಎಕ್ಸಟನ್ಶನ್ನ ೧-೨ ವರುಷಗಳ ವರೆಗೆ ಅಥವಾ ಹಲವು ವರುಷಗಳ ವರೆಗೆ ಕೊಡಲ್ಪಡುವದು.

ಈ ನಿವೃತ್ತರಾಗತಕ್ಕಂಥ ನೌಕರದಾರರಿಗೆ Extension ಕೊಡ ಕೂಡದೆಂದು ಇದರಿಂದ ಕೆಳಗಿನವರಿಗೆ ಹೊಸದಾಗಿ ಸೇರುವವರಿಗೆ ಯುವ ಕರಿಗೆ ಅವಕಾಶ ಸೌಲಭ್ಯ ಸಿಗದೆ ಹಾನಿಯಾಗುವದೆಂದೂ ಒಂದು ವರ್ಗ ದವರ ಅಭಿಪ್ರಾಯವಿದ್ದರೆ, ನಿವೃತ್ತರಾಗತಕ್ಕಂಥವರಿಗೆ ಎಕ್ಸಟೆನ್ಶನ್ ಕೊಡುವದರಿಂದ ಅವರ ನುರಿತ, ಪಳಗಿದ, ಪಕ್ವ, ತಜ್ಞ, ಅನುಭವದ ಉಪ ಯೋಗವಾಗುವದೆಂದು ಹೇಳುವವರಿದ್ದಾರೆ.

ಎಕ್ಸಟೆನ್ಶನ್ ಕೊಡುವದರಿಂದ ಸರಕಾರಕ್ಕೆ ಹಾಗೂ ಸಮಾಜಕ್ಕೆ ಲಾಭ-ಹಾನಿಗಳ ಅಂಶ ಹೇಗಿರುವದೋ ಹಾಗೆಯೇ ಎಕ್ಸಟೆನ್ಶನ್ ಪಡೆದ ವ್ಯಕ್ತಿಗೂ ಲಾಭಹಾನಿಯ ಅಂಶವಿದೆ. ಲಾಭದ ಬಗೆಗೆ ಹೇಳಬೇಕೆಂದರೆ ಅಧಿಕಾರ ಯೋಗ. ಮಾನ-ಸನ್ಮಾನಯೋಗ ಮತ್ತು ದ್ರವ್ಯಾರ್ಜನಯೋಗ ಇವುಗಳಲ್ಲಿ ಹೆಚ್ಚಿನ ಅವಧಿ ಸಿಕ್ಕಂತಾಗಬಹುದೆಂದೂ ಹೇಳಬಹುದು. ಅದೇನೇ ಇದ್ದರೂ ಒಂದು ಸಂಗತಿ ಮಾತ್ರ ನಿಜ. ಈ ಎಕ್ಸಟೆನ್ಶನ್ ಅವಧಿ ಎಷ್ಟೇ ಇರಲಿ ಎಲ್ಲರಿಗೂ ಸಿಗಲಾರದು. ದೈವದ ಅನುಗ್ರಹವಿಲ್ಲದೆ ದೊರೆಯ ಲಾರದು. ಆದುದರಿಂದ ಫಲ ಜ್ಯೋತಿಷ್ಯದಲ್ಲಿ ಹೆಚ್ಚಿನ ಸೇವ ಸಲ್ಲಿಸುವಿಕೆಯ ಯೋಗ (Extension period) ದ ಬಗೆಗೆ ಜ್ಯೋತಿಷ್ಯದ ಭಾಷ್ಯವೇನು ಎಂಬುದನ್ನು ನೋಡುವಾ.

ಈ ವಿಷಯವನ್ನು ಅರಿಯಲು ನಾವು ಎರಡು ಸಂಗತಿಗಳನ್ನು ಪರಿಶೀಲಿಸಬೇಕು.

೧. ಜಾತಕನ ಜಾತಕದಲ್ಲಿಯ ಯೋಗಗಳು.

೨. ಗೋಚರೀ ಗ್ರಹಗಳ ಪರಿಭ್ರಮಣ.

ಈ ಕೆಳಗೆ ಕಾಣಿಸಿದ ಯೋಗಗಳಿದ್ದ ಜಾತಕನಿಗೆ ಎಕ್ಸಟೆನ್ಶನ್ ದೊರೆಯಲಾರದು.

೧. ಶನಿ-ಮಂಗಳ, ಶನಿ-ರವಿ, ಶನಿ-ಚಂದ್ರ ಇವರ ಸಮಸಪ್ತಕ ಯೋಗವಾಗಲಿ, ಯುತಿ ಯೋಗವಾಗಲಿ, ಸಮದೃಷ್ಟಿ ಯೋಗವಾಗಲಿ ಚತುರ್ಥ, ದಶಮ, ಲಗ್ನ, ಸಪ್ತಮ, ತೃತೀಯ, ಭಾಗ್ಯ ಈ ಸ್ಥಾನಗಳಲ್ಲಿದ್ದರೆ,

೨. ದಶಮೇಶನು ದುರ್ಬಲನಿದ್ದರೆ,

೩. ದಶಮಸ್ಥಾನ ಇಲ್ಲವೆ ಚತುರ್ಥ ಸ್ಥಾನದಲ್ಲಿ ಅನೇಕ ಗ್ರಹಗಳು ಇದ್ದರೆ ಅಥವಾ ಅನೇಕ ಗ್ರಹಗಳ ದೃಷ್ಟಿಯಿದ್ದರೆ,

೪. ಖಾತೆಕಾರಕನು ದುರ್ಬಲನಿದ್ದರೆ,

೫. ವೃತ್ತಿಕಾರಕನು ದುರ್ಬಲನಿದ್ದರೆ.

ಉದಾಹರಣೆಗೆ : ಶಿಕ್ಷಕವೃತ್ತಿಗೆ ಗುರು ಹಾಗೂ ಪಂಚಮೇಶ, ದ್ವಿತೀಯೇಶ; ಅಧಿಕಾರವೃತ್ತಿಗೆ ರವಿ, ಗುರು, ಮಂಗಳ, ಲಗ್ನೇಶ, ಭಾಗ್ಯೇಶ; ಇಂಜನಿಯರಿಂಗ ವೃತ್ತಿಗೆ ಮಂಗಳ; ಕಲಾಕಾರಕ ವೃತ್ತಿಗೆ ಶುಕ್ರ ಇತ್ಯಾದಿ.

ಈ ಕೆಳಗೆ ಕಾಣಿಸಿದ ಯೋಗಗಳಿದ್ದು ಜಾತಕನಿಗೆ ಎಕ್ಸಟೆನ್ಶನ್ ಸಿಗುವದು,

೧. ದಶಮೇಶನು ಬಲಾಢ್ಯನಿದ್ದರೆ,

೨. ಖಾತೆಕಾರಕ ಹಾಗೂ ವೃತ್ತಿಕಾರಕ ಗ್ರಹ ಬಲಾಢ್ಯವಿದ್ದರೆ,

೩. ಬಲಾಢ್ಯ ಗುರುವಿನ ದೃಷ್ಟಿ ದಶಮಸ್ಥಾನದ ಮೇಲಿದ್ದರೆ,

೪. ಭಾಗ್ಯೇಶ, ದಶಮೇಶ, ಸುಖೇಶ, ಲಗ್ನೇಶ ಈ ೪ ಗ್ರಹಗಳಲ್ಲಿ ಯಾವದೆ ೨ ಗ್ರಹಗಳು ಬಲಾಢ್ಯವಿದ್ದರೆ,

೫. ಅನೇಕ ಗ್ರಹಗಳು ಸ್ವಗೃಹದಲ್ಲಿ, ಉಚ್ಚರಾಶಿಯಲ್ಲಿ ಅಥವಾ ಮಿತ್ರಕ್ಷೇತ್ರದಲ್ಲಿದ್ದರೆ,

೬. ರವಿಯು ಬಲಾಢ್ಯನಿದ್ದರೆ.

ಇನ್ನು ಗೋಚರೀ ಗ್ರಹಗಳ ಬಲಾಬಲ ನೋಡುವಾ.

೧. ನಿವೃತ್ತವಾಗುವ ಸಮಯದಲ್ಲಿ ಗುರುವು ಗೋಚರಿಯಿಂದ ೨, ೫, ೭, ೯, ೧೦ ಮತ್ತು ೧೧ ನೆಯವನಾಗಿದ್ದರೆ ಹಾಗೂ ಶನಿಯು ೩, ೬, ೯, ೧೦, ೧೧ ನೆಯವನಾಗಿದ್ದರೆ ಎಕ್ಸಟೆನ್ಶನ್ ಸಿಗುವದು.

೨. ಸಾಡೇಸಾತಿ ಇಲ್ಲವೆ ಪಂಚಮಾಷ್ಟಮ ಶನಿ ಇದ್ದರೆ ಅಥವಾ ಗುರುವು ಗೋಚರಿಯಿಂದ ೪,೮, ೧೨ ನೆಯವನಿದ್ದರೆ ಎಕ್ಸಟೆನ್ಶನ್ ಸಿಗುವದಿಲ್ಲ.

೩. ಖಾತೆಯು ಕಾರಕ ಹಾಗೂ ವೃತ್ತಿಯ ಕಾರಕ ಮತ್ತು ಭಿನ್ನ ಭಿನ್ನ ಲಗ್ನಗಳ ಯೋಗಕಾರಕ ಗ್ರಹಗಳು ಜಾತಕದಲ್ಲಿ ಬಲಾಢ್ಯವಿದ್ದು, ಅವುಗಳ ದಶಾಂತರ್ದಶಗಳು ನಿವೃತ್ತಿಯ ಸಮಯದಲ್ಲಿದ್ದರೆ ಎಕ್ಸಟೆನ್ಶನ್ ಸಿಗುವದು.

೪. ದಶಮೇಶನು ಬಲಾಢ್ಯನಿದ್ದು, ನಿವೃತ್ತಿಯ ಸಮಯದಲ್ಲಿ ಅವನ ದಶೆ ಅಥವಾ ಅಂತರ್ದಶೆ ಇದ್ದರೆ ಎಕ್ಸಟೆನ್ಶನ್ ಸಿಗುವದು.

೫. ಜಾತಕದಲ್ಲಿ ರವಿಯು ಬಲಾಢ್ಯನಿದ್ದು ನಿವೃತ್ತಿಯ ಸಮಯದಲ್ಲಿ ಅವನ ದಶಾಂತರ್ದಶ ನಡೆಯುತ್ತಿದ್ದರೆ ಎಕ್ಸಟೆನ್ಶನ್ ಸಿಗುವದು.

ರಜೆ ಸಿಗುವದೋ ಹೇಗೆ ? ಮಂಜೂರು ಮಾಡುವರೊ ಹೇಗೆ ? ಎಂದಿನಿಂದ ರಜೆಯ ಅರ್ಜಿ ಹಾಕಲಿ ? ಎಷ್ಟು ಅವಧಿಯವರೆಗೆ ಹಾಕಲಿ ? ಈ ಮೊದಲಾದ ನೌಕರದಾರರ ರಜೆಯ ವಿಷಯವಾದ ಪ್ರಶ್ನೆಗಳನ್ನು ನಾವು ಪ್ರತಿನಿತ್ಯವೂ ಒಡಿಸುತ್ತಿದ್ದೇವೆ.

ರಜೆಗೂ ಜ್ಯೋತಿಷ್ಯಕ್ಕೂ ಏನು ಸಂಬಂಧ ? ಇಂಥ ಸಣ್ಣ ವಿಷಯಕ್ಕೆ ಜ್ಯೋತಿಷಿಗಳ ಸಲಹೆ ಏತಕ್ಕೆ ಎಂದು ಕೇಳುವವರೂ ಇದ್ದಾರೆ. ಅವರಿಗೆ ಉತ್ತರವಿಷ್ಟೆ, ಕೆಲವೊಂದು ಸಂದರ್ಭದಲ್ಲಿ ಬಂಗಾರವಾದರೂ ಸಿಗಬಹುದು, ಆದರೆ ರಜೆ ಸಿಗಲಾರದು ಎಂಬ ಪ್ರಸಂಗಗಳು ಇರುತ್ತವೆ. ವಿಶೇಷವಾಗಿ ೨೪ ತಾಸಿನ ನೌಕರದಾರರಿಗೂ, ರೇಲ್ವೇ ನೌಕರಿಯ ಸ್ಟೇಶನ ಮಾಸ್ತರರಿಗೂ, ಮಿಲಿಟರಿ ಫ್ರಂಟನಲ್ಲಿರುವ ನೌಕರದಾರರಿಗೂ, ಖಾತೆಯ ಹಾಗೂ ಕಚೇರಿಯ ಅತಿ ಮುಖ್ಯ ಹಾಗೂ ಮಹತ್ವದ ವ್ಯಕ್ತಿಗಳಿಗೂ, ಅತ್ಯಾವಶ್ಯಕ ಕೆಲಸಗಾರರಿಗೂ, ಒಬ್ಬಂಟಿಗರಿರುವ (Single handed) ಕೆಲಸಗಾರರಿಗೂ ಈ ಮೊದಲಾದ ವ್ಯಕ್ತಿಗಳಿಗೂ ರಜೆ ಸಿಗುವದೆ ಕಠಿಣವಾಗುತ್ತದೆ. ರಜೆ ಮಂಜೂರಾದರೂ ರಿಲೀವ್ಹರ ಬಾರದೆ ಒದ್ದಾಡುವ ನೌಕರದಾರರನ್ನು ನೋಡಿದ ಅನುಭವವಿದೆ.

ತಂದೆ-ತಾಯಿ, ಮನೆ-ಮಠ, ಪತ್ನಿ-ಮಕ್ಕಳು ಎಲ್ಲರನ್ನೂ ಬಿಟ್ಟು ೫-೬ ನೂರು ಮೈಲುಗಳ ಅಂತರದಲ್ಲಿ ಏಕಾಕಿಯಾಗಿರುವ ವ್ಯಕ್ತಿಗೆ ಮಾತ್ರ ರಜೆಯ ಮಹತ್ವವಿರುವದೆ ವಿನಾ ಇತರರಿಗೆ ಅದು ಅಷ್ಟೊಂದು ಮಹತ್ವದ ವಿಷಯವಾಗಲಾರದು.

ರಜೆ ಮಂಜೂರಾಗದೆ ಮಕ್ಕಳ ವಿವಾಹಕ್ಕೂ ಬಾರದೆ ಖಿನ್ನ ಮನಸ್ಕರಾಗಿ ವರ್ತಿಸುವ ತಂದೆ-ತಾಯಿಗಳನ್ನೂ, ರಜೆ ಮಂಜೂರಾಗದೆ ಶ್ರಾದ್ಧ-ಕರ್ಮಾದಿಗಳ ಬಗೆಗೆ ಪೇಚಾಡುವ ಜನರನ್ನೂ ನೋಡಿದ ಅನುಭವವಿದೆ.

ಅಷ್ಟೇ ಏಕೆ ೧೫–೨೦ ದಿನಗಳ ಹಕ್ಕಿನ ರಜೆಯನ್ನು ಪಡೆಯಲು ಎಂ.ಎಲ್.ಎ. ಮತ್ತು ಎಂ. ಪಿ. ಗಳ ವರ್ಚಸ್ಸನ್ನು ಉಪಯೋಗಿಸುವ ಜನರನ್ನು ಕಂಡ ಅನುಭವವಿದೆ. ಅಂದಬಳಿಕ ರಜೆಯ ಮಹತ್ವ ಎಷ್ಟಿದೆ ಎಂಬುದು ಸ್ಪಷ್ಟ ವಾಗುತ್ತದೆ. ರಜೆಯ ವಿಷಯವಾಗಿ ಜ್ಯೋತಿಷ್ಯದ ಸಲಹೆ ಪಡೆಯುವದರಲ್ಲಿ ಔಚಿತ್ಯವಿದೆಯೆಂದು ಹೇಳಲಡ್ಡಿಯಿಲ್ಲ.

ಇದೇನೆ ಇರಲಿ, ಫಲಜ್ಯೋತಿಷ್ಯದಲ್ಲಿ ರಜೆಯ ವಿಷಯವಾಗಿ ಜ್ಯೋತಿಷ್ಯದ ಛಾಪೆ ಏನು ಎಂಬುದನ್ನು ನೋಡುವ ಪೂರ್ವದಲ್ಲಿ ರಜೆಯಲ್ಲಿದ್ದ ಭಿನ್ನ ಭಿನ್ನ ಪ್ರಕಾರಗಳನ್ನು ಅರಿಯುವದೇ ಮುಖ್ಯವಿರುತ್ತದೆ. ರಜೆಯ ಕುರಿತು ಹೊಸ ಕಾನೂನುಗಳು ಬಳಕೆಯಲ್ಲಿ ಬಂದಿರುತ್ತವೆ. ಈಗ ಬಳಕೆಯಲ್ಲಿದ್ದ ರಜೆಯ ಪ್ರಕಾರಗಳು ಈ ಕೆಳಗಿನಂತಿವೆ.

೧. ಕಿರುಕಳ ರಜೆ (Casual leave)

೨. ಹಕ್ಕಿನ ರಜೆ (Earned leave)

೩. ಅರ್ಧ ಪಗಾರೀ ರಜೆ (Half-pay leave)

೪. ಲೀವ್ಹ ನಾಟ ಡ್ಯೂ (Leve not due)

೫. ಬಿನ್ ಪಗಾರೀ ರಜೆ (Extra ordinary leave)

೬. ಹೆರಿಗೆಯ ರಜೆ (Maternity leave) (ಬರಿ ಹೆಣ್ಣು ಮಕ್ಕಳಿಗೆ ಮಾತ್ರ)

೭. ಅಭ್ಯಾಸದ ಬಗ್ಗೆ ರಜೆ (Study leave)

೮. ಡಿಪಾರ್ಟಮೆಂಟಲ್ ಲೀವ್ಹ (Departmental leave)

ಮೇಲೆಕಾಣಿಸಿದ ಪ್ರಕಾರಗಳು ಅತಿ ಮುಖ್ಯವಾದವುಗಳು. ಇವುಗಳಲ್ಲದೆ ಕೆಲವು ಖಾತೆಗಳಲ್ಲಿ ಬೇರೆ ತರಹದ ರಜೆಗಳೂ ಇರುತ್ತವೆ.

ಬೇಕಾದಾಗ ಯಾವುದೆ ಪ್ರಕಾರದ ರಜೆ ಪಡೆಯಬಹುದೋ ಹೇಗೆ ಎಂಬುದನ್ನು ಅರಿಯಲು ನಾವು ಎರಡು ಸಂಗತಿಗಳನ್ನು ನೋಡಬೇಕಾಗುತ್ತದೆ.

೧) ಜಾತಕನ ಜಾತಕದಲ್ಲಿಯ ಯೋಗಗಳು.

೨) ಗೋಚರಿ ಗ್ರಹಗಳ ಬಲಾಬಲ.

ಜಾತಕನ ಜಾತಕದಲ್ಲಿಯ ಯೋಗಗಳು

೧) ರಜೆಯ ಕಾರಕಗ್ರಹವೆಂದರೆ ಚಂದ್ರನು. ಚಂದ್ರನ ತರುವಾಯ ಶುಕ್ರನೂ ಕಾರಕನಾಗುತ್ತಾನೆ. ಆದುದರಿಂದ ಚಂದ್ರ, ಶುಕ್ರ ಇವರು ಬಲಾಢ್ಯರಿದ್ದ ಜಾತಕನಿಗೆ ರಜೆಯ ಸಮಸ್ಯೆ ಉದ್ಭವಿಸುವುದಿಲ್ಲ.

೨) ರಜೆಯ ಕಾರಕಸ್ಥಾನವೆಂದರೆ ಚತುರ್ಥಸ್ಥಾನವು. ಆದುದರಿಂದ ಚತುರ್ಥೇಶನು ಬಲಾಢ್ಯನಿದ್ದ ವ್ಯಕ್ತಿಗೆ ಇಲ್ಲವೆ ಚತುರ್ಥಸ್ಥಾನದಲ್ಲಿ ಬಲಾಢ್ಯನಿದ್ದ ವ್ಯಕ್ತಿಗೆ ಇಲ್ಲವೆ ಚತುರ್ಥಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದ ಜಾತಕನಿಗೆ ಇಲ್ಲವೆ ಚತುರ್ಥಸ್ಥಾನದ ಮೇಲೆ ಬಲಾಢ್ಯ ಶುಭ ಗ್ರಹಗಳ ದೃಷ್ಟಿಯಿದ್ದರೆ ಜಾತಕನಿಗೆ ರಜೆಯ ವಿಷಯವು ಪ್ರಮೇಯವಾಗಲಾರದು.

೩. ಚತುರ್ಥದಲ್ಲಿ ಅನೇಕ ಗ್ರಹಗಳು ಇಲ್ಲವೆ ಚತುರ್ಥಸ್ಥಾನದ ಮೇಲೆ ಅನೇಕ ಗ್ರಹಗಳ ದೃಷ್ಟಿ ಅಥವಾ ಚತುರ್ಥಸ್ಥಾನದಲ್ಲಿ. ಪಾಪಗ್ರಹವೂ ಇಲ್ಲವೆ ಅನೇಕ ಪಾಪಗ್ರಹಗಳ ದೃಷ್ಟಿ ಚತುರ್ಥಸ್ಥಾನದ ಮೇಲಿದ್ದರೆ ರಜೆ ಪಡೆಯುವುದು ಕಠಿಣವಾಗುತ್ತದೆ.

೪) ಶನಿ-ಮಂಗಳ, ರವಿ-ಶನಿ. ಚಂದ್ರ ಶನಿ, ರವಿ-ಕೇತು, ಚಂದ್ರ-ರಾಹು ಈ ಗ್ರಹಗಳ ಯುತಿಯೋಗವಾಗಲಿ ಸಮಸಪ್ತಕ ಯೋಗವಾಗಲಿ ಲಗ್ನ, ದಶಮ, ಚತುರ್ಥ ಈ ಸ್ಥಾನದಲ್ಲಿ ಇದ್ದರೆ ಜಾತಕನಿಗೆ ರಜೆ ದೊರೆಯುವುದೇ ದುರ್ಲಭವಾಗುತ್ತದೆ.

ಲಗ್ನೇಶ, ಸುಖೇಶ, ಭಾಗ್ಯೇಶರು ಬಲಾಢ್ಯರಿದ್ದ ಜಾತಕನು ಸುದೈವಿ ಇದ್ದು ಎಲ್ಲ ಪ್ರಕಾರದ ರಜೆಗಳನ್ನು ಸುಲಭವಾಗಿ ಪಡೆಯುವನು.

## ಗೋಚರೀ ಗ್ರಹಗಳ ಬಲಾಬಲ

ಗೋಚರೀ ಗ್ರಹಗಳಲ್ಲಿ ರಜೆಯ ವಿಷಯವಾಗಿ, ರವಿ ಗ್ರಹದ ಬಲಾ ಬಲವನ್ನು ಪರಿಶೀಲಿಸಬೇಕು. ಏಕೆಂದರೆ ಅಧಿಕಾರಿಗಳಿಂದ ರಜಾ ಮಂಜೂರು ಪಡೆಯಲು (Relation between Employee and Employer) ಅಧಿಕಾರಿ ಕಾರಕಗ್ರಹನಾದ ರವಿಯು ಗೋಚರಿಯಿಂದ ಅನುಕೂಲವಿರ ಬೇಕು.

ರವಿಯು ಗೋಚರಿಯಿಂದ ೩, ೬, ೯, ೧೦, ೧೧, ನೆಯವನಾಗಿ ಬಂದಾಗ ರಜೆ ಪಡೆಯಲು ಯಾವ ಆತಂಕವಾಗಲಾರದು.

ಕಿರುಕುಳ ರಜೆ ಪಡೆಯಲು ರಜೆಯ ಕಾರಕಗ್ರಹವಾದ ಚಂದ್ರನು ಗೋಚರಿಯಿಂದ ೧, ೨, ೩, ೫, ೭, ೯, ೧೦, ೧೧ ನೆಯವನಾಗಿ ಬಂದಾಗ ರಜೆಯ ಅರ್ಜಿಹಾಕಿದರೆ ಅದು ಸುಲಭವಾಗಿ ಮಂಜೂರಾಗುವುದು.

## ಲೀವ್ ನಾಟ್ ಡ್ಯೂ (Leave Not Due)

ಈ ಪ್ರಕಾರದ ರಜೆಯು ಎಲ್ಲರಿಗೂ ದೊರೆಯಲಾರದು. ನಿರ್ದಿಷ್ಟವಾದ ಯೋಗವಿದ್ದ ಜಾತಕನಿಗೆ ಮಾತ್ರ ದೊರೆಯುವುದು.

೧. ಸುಖೇಶ, ಲಗ್ನೇಶ, ಭಾಗ್ಯೇಶ ಈ ಮೂರರಲ್ಲಿ ಯಾರಿಬ್ಬರು ಬಲಾಢ್ಯ ರಿದ್ದ ಜಾತಕನಿಗೆ ದೊರೆಯುವುದು.

೨. ರವಿಯು ಬಲಾಢ್ಯನಿದ್ದ ಜಾತಕನಿಗೆ ಈ ರಜೆಯು ದೊರೆಯುವುದು.

೩. ಗುರುವು ಲಗ್ನ, ಪಂಚಮ, ಭಾಗ್ಯ, ಚತುರ್ಥ, ದಶಮ ಈ ಯಾವದೆ ಸ್ಥಾನದಲ್ಲಿದ್ದ ಜಾತಕನಿಗೆ ರಜೆ ದೊರೆಯುವುದು.

೪. ಭಿನ್ನ ಭಿನ್ನ ಲಗ್ನಗಳಿಗೆ ಯೋಗ ಕಾರಕಗ್ರಹಗಳು ಭಿನ್ನ ಭಿನ್ನ ವಿದ್ದು ಈ ಯೋಗ ಕಾರಕ ಗ್ರಹಗಳು ಬಲಾಢ್ಯನಿದ್ದ ಜಾತಕನಿಗೆ ಈ ತರಹದ ರಜೆ ದೊರೆಯುವುದು.

೫. ಚಂದ್ರನು ಇಲ್ಲವೆ ಶುಕ್ರನು ಬಲಾಢ್ಯವಿದ್ದ (ಸ್ಥಾನಬಲ ಹಾಗೂ ರಾಶಿಬಲ) ಜಾತಕನಿಗೆ ಈ ರಜೆ ದೊರೆಯುವುದು.

## ಸ್ಟಡಿ ಲೀವ್ಸ್ (Study leave)

ಈ ಪ್ರಕಾರದ ರಜೆಯೂ ಕೂಡ ಎಲ್ಲರಿಗೂ ದೊರೆಯಲಾರದು. ನಿರ್ದಿಷ್ಟವಾದ ಯೋಗವಿದ್ದ ಜಾತಕರಿಗೆ ಮಾತ್ರ ದೊರೆಯುವುದು.

೧) ಪಂಚಮೇಶ ಬಲಾಢ್ಯನಿದ್ದ ಜಾತಕನಿಗೆ ಈ ರಜೆಯು ದೊರೆಯುವದು.

೨) ಗುರುವು ಬಲಾಢ್ಯನಿದ್ದ ಜಾತಕನಿಗೆ ಈ ರಜೆಯು ದೊರೆಯುವದು.

೩) ಗುರುವು ಲಗ್ನ, ಪಂಚಮ, ಭಾಗ್ಯ, ಲಾಭ ಈ ಯಾವುದೆ ಸ್ಥಾನದಲ್ಲಿದ್ದರೆ ರಜೆ ದೊರೆಯುವುದು.

## ನವಕರರ ಸಂಘ-ಸಂಸ್ಥೆಗಳು

(Employees Associations, Trade Unions ಇತ್ಯಾದಿ)

೧೯೨೬ ನೆಯ ಕಾನೂನಿನ ಪ್ರಕಾರ ಕಾನೂನು ಬದ್ಧವಾಗಿ ನವಕರರ ಪರಿಹಾರಕ್ಕಾಗಿ "ಟ್ರೇಡ ಯುನಿಯನ್ ಕಾಯದೆ" (Trade Union Act) ಪ್ರಚಲಿತದಲ್ಲಿದೆ. ಈ ಕಾನೂನು ಪ್ರಮುಖವಾಗಿ :

೧) ನವಕರರ ಸಂಘ-ಸಂಸ್ಥೆಗಳನ್ನು ರಜಿಸ್ಟರ ಮಾಡಿಸಲು, ೨) ರಜಿಸ್ಟರ ಮಾಡಿದ ನಂತರ ಸಂಘ-ಸಂಸ್ಥೆಗಳ ಕಾರ್ಯ ಹಾಗೂ ೩) ರಜಿಸ್ಟರ ಮಾಡಿದ ಸಂಘ-ಸಂಸ್ಥೆಗಳ ಹಕ್ಕು-ಬಾಧ್ಯತೆಗಳು ಈ ಮೊದಲಾದ ವಿಷಯಗಳಿಗೆ ಮರ್ಯಾದಿತವಾಗಿದೆ. ವಿಶೇಷವಾಗಿ ನವಕರರ ಹಕ್ಕು-ಬಾಧ್ಯತೆಗಳಿಗಾಗಿ, ಕಲ್ಯಾಣಕ್ಕಾಗಿ ಈ ಸಂಘ-ಸಂಸ್ಥೆಗಳು ಶ್ರಮಿಸುತ್ತಿವೆ.

ಸದ್ಯಕ್ಕೆ ಭಾರತದಲ್ಲಿ I. N. T. U. C. (Indian National Trade Union Congress), (A. I. T. U. C. (All India Trade Union Congress), H. M. S. (Hind Majdoor Sangh), U. T. U. C. (United Trade Union Congress) ಇವು ಪ್ರಮುಖವಾಗಿವೆ. ಇವುಗಳ ಹೊರತಾಗಿ ವಿವಿಧ ಖಾತೆಗಳಿಗಾಗಿಯೇ ನಿರ್ಮಿಸಲ್ಪಟ್ಟ ಇತರ ಅಸಂಖ್ಯ ಸಂಘ-ಸಂಸ್ಥೆಗಳನ್ನೂ ಕಾಣಬಹುದು.

ಇವೆಲ್ಲವುಗಳ ಉದ್ದೇಶ, ಕಾರ್ಯಸಾಧನೆ, ಹಿನ್ನೆಲೆ, ಗುರಿ ಒಂದೇ ಆದೇನಂದರೆ: ನವಕರರ ಕಲ್ಯಾಣ, ಹಿತಸಾಧನೆ, ಹಕ್ಕು-ಬಾಧ್ಯತೆಗಳನ್ನು ಕಾಯ್ದುಕೊಂಡು ಹೋಗುವದು. ಇಲ್ಲಿ ಕಾರ್ಯ ಮಾಡುವವರು ವಿವಿಧ ಖಾತೆಗಳ ನವಕರದಾರರು ಇದ್ದು ಇವರ ಕಾರ್ಯ ದ್ವಿಮುಖವಾಗಿರುತ್ತದೆ. ಯಾಕಂದರೆ ತಮ್ಮ ಕಚೇರಿಯ ಕಾರ್ಯವನ್ನು ಮಾಡಿ ಉಳಿದ ಸಮಯದಲ್ಲಿ ಈ ಸಂಘ-ಸಂಸ್ಥೆಗಳ ಕಾರ್ಯದಲ್ಲಿ ಸಹಾಯ ಮಾಡುವದು, ಚಟುವಟಿಕೆಗಳಲ್ಲಿ ಭಾಗ ವಹಿಸುವದು ಇತ್ಯಾದಿ ಕಂಡುಬರುತ್ತದೆ.

ಹೀಗಾಗಿ ಸಂಘ-ಸಂಸ್ಥೆಗಳ ನವಕರರ ವಿಷಯವಾಗಿ ಪ್ರಸ್ತುತ ಪ್ರಕರಣದಲ್ಲಿ ಬರೆಯುವದು ಅಪ್ರಸ್ತುತವೆನಿಸಲಾರದೆಂದು ತಿಳಿದು ಇದನ್ನು ಜ್ಯೋತಿಷ್ಯದ ಹಿನ್ನೆಲೆಯಲ್ಲಿ ವಿವೇಚಿಸಲಾಗುವದು.

ಕಾರಕಗ್ರಹ : ಕಾರ್ಮಿಕರ ಇಲ್ಲವೆ ನವಕರರ ಕಲ್ಯಾಣ ಹಾಗೂ ಹಿತಸಾಧನೆಯೇ ಮುಖ್ಯ ಧ್ಯೇಯವಿರುವದೆ ಈ ಸಂಘ ಸಂಸ್ಥೆಗಳ ಹೊಣೆ ಇರುವದರಿಂದ ಇಂಥ ಸಂಘ-ಸಂಸ್ಥೆಗಳಲ್ಲಿ ಪದಾಧಿಕಾರಿಯಾಗಿಯೂ, ಸದಸ್ಯನಾಗಿಯೂ, ಇಲ್ಲದೆ ಪ್ರತ್ಯಕ್ಷ, ಅಪ್ರತ್ಯಕ್ಷವಾಗಿ ಭಾಗವಹಿಸಿ ಶ್ರಮಿಸಲು ಕಾರಕಗ್ರಹವೆಂದರೆ ಶನಿಯು. ಶನಿಯು ಬಲಾಢ್ಯನಿರದೆ ಯಾರೂ ಸಂಘ-ಸಂಸ್ಥೆಗಳಲ್ಲಿ ಭಾಗ ವಹಿಸಲಾರರು.

ಈ ಸಂಘ-ಸಂಸ್ಥೆಗಳಲ್ಲಿ ಕಾರ್ಯ ಮಾಡುವವರು ಸಾಮಾನ್ಯವಾಗಿ ಎರಡು ವರ್ಗದವರಿದ್ದುದು ಕಂಡುಬರುತ್ತದೆ.

೧) ಯಾವುದೊಂದು ರಾಜಕೀಯ ಪಕ್ಷದಲ್ಲಿಯ ಪ್ರಮುಖರೂ, ಮುಖಂಡರೂ, ಮೊದಲಾದವರು ಪದಾಧಿಕಾರಿಗಳಾಗಿ ನವಕರರ, ಕಾರ್ಮಿಕರ ಮಾರ್ಗದರ್ಶನ ಮಾಡುವ ಮೊದಲನೇ ವರ್ಗ.

೨) ವಿವಿಧ ಖಾತೆಗಳಲ್ಲಿ ಕೆಲಸ ಮಾಡುತ್ತ ಕೆಲಸದ ಜೊತೆಗೆ ಈ ಸಂಘ-ಸಂಸ್ಥೆಗಳ ಹಿತರಕ್ಷಣೆಗಾಗಿ ಶ್ರಮಿಸುವ ಎರಡನೆಯ ವರ್ಗ.

ಮೊದಲನೆ ವರ್ಗದವರ ಜಾತಕದಲ್ಲಿ ಕಾರ್ಮಿಕರ ಕಾರಕ ಗ್ರಹವಾದ ಶನಿಯೊಂದಿಗೆ ರಾಜಕೀಯ ಗ್ರಹವಾದ ರವಿಯೂ ಕೂಡಾ ಬಲಾಢ್ಯ ನಿರುತ್ತಾನೆ. ಆದರೆ ಇಲ್ಲಿ ಶನಿಯು ಕೇವಲ ರಾಶಿಬಲದವನಿದ್ದು ಸ್ಥಾನಬಲ ದವನಿರುವದಿಲ್ಲ. ರವಿಯು ಸ್ಥಾನಬಲದವನೂ, ರಾಶಿಬಲದವನೂ, ಯೋಗ ಕಾರಕನೂ ಇರುತ್ತಾನೆ.

ಎರಡನೆಯ ವರ್ಗದವರ ಜಾತಕದಲ್ಲಿ ಶನಿಯು ರಾಶಿಬಲದವನೂ, ಯೋಗ ಕಾರಕನೂ ಸ್ಥಾನಬಲದವನೂ ಇರುತ್ತಾನೆ. ಇದಲ್ಲದೆ ಇವರ ಜಾತಕದಲ್ಲಿ ಬುಧ, ಗುರುಗಳೂ ಕೂಡಾ ಬಲಾಢ್ಯರಿರುತ್ತಾರೆ.

ಲಗ್ನ : ಸಾಮಾನ್ಯವಾಗಿ ಇವರ ಜಾತಕದಲ್ಲಿ ವೃಷಭ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಧನು, ಮೇಷ, ಕುಂಭ, ಮೀನ ಈ ಲಗ್ನಗಳೇ ಹೆಚ್ಚಾಗಿರುವದು ಕಂಡುಬರುತ್ತದೆ.

ಸ್ಥಾನ : ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಅನೇಕ ಸ್ಥಾನಗಳು ಕಾರಕವಾಗುತ್ತವೆ. ಯಾಕಂದರೆ ಈ ಸಂಘ-ಸಂಸ್ಥೆಗಳಲ್ಲಿಯ ಪದಾಧಿಕಾರಿ ಗಳು ಉತ್ತಮ ಭಾಷಣಕಾರರಿರುವದರಿಂದ ದ್ವಿತೀಯ ಸ್ಥಾನವೂ, ಉತ್ತಮ ಬರಹಗಾರ (Drafting) ರಿರುವದರಿಂದ ಪಂಚಮಸ್ಥಾನವೂ, ಕಾರ್ಮಿಕರೊಂದಿಗೆ ಸಂಘಟನಾ ಸಾಮರ್ಥ್ಯವಿರುವದರಿಂದ ದಶಮಸ್ಥಾನವೂ

ಕಾರಕವಾಗುವದರಿಂದ ಈ ಸ್ಥಾನಾಧೀಶರೂ, ಈ ಸ್ಥಾನದಲ್ಲಿರುವ ಗ್ರಹಗಳೂ ಬಲಾಢ್ಯರಿರಬೇಕು.

ರಾಶಿ : ಈ ಸಂಘ–ಸಂಸ್ಥೆಗಳ ಪದಾಧಿಕಾರಿಗಳು ಹೆಚ್ಚಾಗಿ ಬುದ್ಧಿಜೀವಿಗಳೇ ಇರುವದರಿಂದ ಮಿಥುನ, ತುಲಾ, ಕುಂಭ, ವೃಶ್ಚಿಕ, ಮಕರ, ಮೀನ ಈ ರಾಶಿಯವರೇ ಹೆಚ್ಚಾಗಿರುವದು ಕಂಡುಬರುತ್ತದೆ.



# ಎಸ್. ಕೆ. ಜೋಗಳೇಕರರ
# ಜ್ಯೋತಿಷ್ಯ ಗ್ರಂಥಗಳು

## ೧. ವಧೂವರರ ಜ್ಯೋತಿಷ್ಯ

ಬೆಲೆ : ರೂ. ೪-೦೦ (ಚತುರ್ಥಾವೃತ್ತಿ)

ಈ ಗ್ರಂಥವಲ್ಲಿ ವಧೂ-ವರರ ಜನ್ಮಟಿಪ್ಪಣಿ (ಕುಂಡಲಿ)ಗಳನ್ನು ಏಕೆ ಹಾಗೂ ಹೇಗೆ ನೋಡಬೇಕು? ನಾಡಿ, ಯೋನಿ, ಗಣ-ಕೂಟಗಳೆಂದರೇನು? ಇವನ್ನು ಏಕೆ ಹಾಗೂ ಹೇಗೆ ನೋಡಬೇಕು ? ಮಂಗಳ (ಕುಜ) ದೋಷ ವೆಂದರೇನು ? ಕುಜ (ಮಂಗಳ) ದೋಷವನ್ನು ಯಾಕೆ ಹಾಗೂ ಹೇಗೆ ನೋಡಬೇಕು ? ಅಪವಾದ ಕುಜ ದೋಷವೆಂದರೇನು ? ಇದಲ್ಲದೆ ವಧೂ ವರರ ವಿವಾಹ ಕಾಲ ಯಾವುದು? ಅದು ಯಾವ ವಯಸ್ಸಿನಲ್ಲಿ, ಯಾವ ವರುಷ ಯಾವ ತಿಂಗಳು ಎಂಬುದನ್ನು ಹೇಗೆ ಕಂಡುಹಿಡಿಯಬೇಕು ? ಮೊದ ಲಾದ ವಿಷಯಗಳನ್ನು ವಿವೇಚಿಸಲಾಗಿದೆ.

## ೨. ಆಕಸ್ಮಿಕ ಧನಯೋಗ

ಬೆಲೆ : ರೂ. ೩-೦೦ (ತೃತೀಯ ಮುದ್ರಣ)

ಈ ಗ್ರಂಥದಲ್ಲಿ ಆಕಸ್ಮಿಕ ಧನಯೋಗ ಅಂದರೇನು ? ಅದನ್ನು ಹೇಗೆ ಪರಿಶೀಲಿಸಬೇಕು ? ಇದಲ್ಲದೆ ಸಟ್ಟಾ, ಲಾಟರಿ, ರೇಸು, ಭೂಗತ, ಪ್ರಾಯಿಜ ಬಾಂಡ, ಸ್ತ್ರೀಧನ (ಸ್ವಸ್ತ್ರೀ ಹಾಗೂ ಪರಸ್ತ್ರೀ), ವಾರಸಾ, ದತ್ತಕ, ಕಾಣಿಕೆ, ಲಂಚ, ಕಾಲಾಬಜಾರ ಇವುಗಳಿಂದ ಆಕಸ್ಮಿಕ ಧನಲಾಭವನ್ನು ಹೇಗೆ ಗುರುತಿಸಬೇಕೆಂಬುದನ್ನು ಮಾದರೀ ಕುಂಡಲಿಗಳಿಂದ ವಿವರಿಸಿದೆ.

## ೩. ಸ್ತ್ರೀ ಜ್ಯೋತಿಷ್ಯ

ಬೆಲೆ : ರೂ. ೧೦-೦೦ (ತೃತೀಯಾವೃತ್ತಿ)

ಸ್ತ್ರೀಯರ ಜೀವನದ ಅನೇಕ ಮುಖಗಳನ್ನು ಆಧರಿಸಿ ಬರೆದ ವಿಸ್ತಾರ ಪೂರ್ವಕವಾದ ಗ್ರಂಥ. ಇದರಲ್ಲಿ ಸ್ತ್ರೀಯರ ಸ್ವಭಾವ, ಸೌಂದರ್ಯ,

ವಿವಾಹ ಕಾಲ, ಪ್ರೇಮವಿವಾಹ, ಪುನರ್ವಿವಾಹ, ಅಂತರರ್ಜಾತೀಯ ವಿವಾಹ, ಆಜನ್ಮ ಕುಮಾರಿಯೋಗ, ಘಟಸ್ಫೋಟ, ವೈಧವ್ಯಯೋಗ, ಗರ್ಭಧಾರಣ, ಸಂತತಿ, ಸಂತತಿ ಸುಖ, ಹಾಗೂ ಗರ್ಭಪತನಯೋಗಗಳು, ಗರ್ಭಪ್ರತಿಬಂಧ ವನ್ನು ಯಾರು ಮಾಡಿಸಿಕೊಳ್ಳಬೇಕು, ವಂಧ್ಯಾಯೋಗ, ವಿದ್ಯೆ, ಭಾಗ್ಯ, ಮನೋವಾಸನೆ, ಆರ್ಥಿಕ ಸ್ವಾತಂತ್ರ್ಯ, ಸ್ವಾವಲಂಬನ, ರಾಜಕಾರಣ ಪಟುತ್ವ, ಸಮಾಜ ಧುರೀಣತ್ವ ಮುಂತಾದ ವಿಷಯಗಳನ್ನು ಆಧುನಿಕ ಸಮಾಜಕ್ಕನುಸರಿಸಿ, ಫಲಜ್ಯೋತಿಷ್ಯ ಶಾಸ್ತ್ರದ ಆಧಾರದ ಮೇಲಿಂದ ಹೇಗೆ ನೋಡಬೇಕೆಂಬುದನ್ನು ವಿವೇಚಿಸಿದೆ.

## ೪. ಅಜ್ಞಾತ ಜಾತಕ ದರ್ಶನ

ಬೆಲೆ : ರೂ. ೫-೦೦ (ದ್ವಿತೀಯಾವೃತ್ತಿ)

ಈ ಗ್ರಂಥದಲ್ಲಿ ಜನ್ಮವೇಳೆ-ಜನ್ಮಮಿತಿ ಸರಿಯಾಗಿ ಗೊತ್ತಿಲ್ಲದ ವ್ಯಕ್ತಿಯ ಜಾತಕವನ್ನು ಅವನ ಕರ್ಣಾವಲೋಕ, ನೇತ್ರಾವಲೋಕ, ಗದ್ದ-ಗಲ್ಲಗಳ ಪರೀಕ್ಷೆ ಮೊದಲಾದ ಮುಖ ಲಕ್ಷಣಗಳ ಮೇಲಿಂದಲೂ ನಡೆ-ನುಡಿ, ನಿದ್ರಾ, ಭಂಗಿ, ಅಭಿರುಚಿ, ವಾಕ್‌ಚಾತುರ್ಯ ಮುಂತಾದ ಸಂಗತಿಗಳಿಂದಲೂ ಕಂಡು ಹಿಡಿಯಬಹುದು. ಅದರಂತೆ ವ್ಯಕ್ತಿಯ ಜೀವನದಲ್ಲಿಯ ನಡೆದುಹೋದ ಘಟನೆಗಳ ಮೇಲಿಂದ ಜಾತಕವನ್ನು ಒರೆಗೆ ಹಚ್ಚಿ ನೋಡಬಹುದು. ಈ ಮೊದಲಾದ ಸಂಗತಿಗಳಿಂದ ಯೋಗ್ಯ ಜನ್ಮಪತ್ರಿಕೆ ಇಲ್ಲದವನ ಭವಿಷ್ಯ ಹೇಗೆ ಹೇಳಬೇಕೆಂಬುದನ್ನು ಕುರಿತು ಈ ಗ್ರಂಥದಲ್ಲಿ ವಿವರಿಸಲಾಗಿದೆ.

## ೫. ಸಾಡೇಸಾತಿ

ಬೆಲೆ : ರೂ. ೪-೦೦ ( ತೃತೀಯಾವೃತ್ತಿ )

ಈ ಗ್ರಂಥದಲ್ಲಿ ಸಾಡೇಸಾತಿ ಅಂದರೇನು ? ಸಾಡೇಸಾತಿಯನ್ನು ಹೇಗೆ ಪರಿಶೀಲಿಸಬೇಕು ? ಅನುಕೂಲ, ಪ್ರತಿಕೂಲ, ಸಾಡೇಸಾತಿ ಅಂದರೇನು? ರಾಶಿ, ಸ್ಥಾನ, ಗ್ರಹಗಳು, ಭಾವ, ಭಾವೇಶ ಇವುಗಳ ಮೇಲಿಂದ ಶನಿಯು ಭ್ರಮಿಸುವಾಗ ಆಗುವ ಪರಿಣಾಮ, ದಶಾ-ಅಂತರ್ದಶೆಯು, ಸಾಡೇಸಾತಿಯ ಪರಿಣಾಮ, ಅಷ್ಟಕವರ್ಗ ಪದ್ಧತಿಯಿಂದ ಸಾಡೇಸಾತಿಯ ವಿಚಾರ, ಇದಲ್ಲದೆ

೧೯೬೦ ರಿಂದ ೧೯೭೫ರ ವರೆಗೆ ಶನಿಯು ಯಾವ ರಾಶಿಯಲ್ಲಿ ಯಾವ ತಿಂಗಳಲ್ಲಿ ಎಷ್ಟು ಅಂಶ ಇರುವನು ಎಂಬುದರ ಕೋಷ್ಟಕ ಸಹ ಕೊಡಲಾಗಿದೆ.

## ೬. ಉದ್ಯೋಗ ಜ್ಯೋತಿಷ್ಯ ಭಾಗ ೧

**(ನೌಕರಿಯ ಮಾರ್ಗದರ್ಶಿ )**

**ಬೆಲೆ : ೨೦–೦೦ (ದ್ವಿತೀಯಾವೃತ್ತಿ)**

ಈ ಗ್ರಂಥದಲ್ಲಿ ನೌಕರಿಗಳಲ್ಲಿಯ ಪ್ರಕಾರಗಳು, ಕಾರಕಗ್ರಹ, ಲಗ್ನಸ್ಥಾನ, ರಾಶ್ಯಾದಿಗಳನ್ನು ಕುರಿತು ಸುದೀರ್ಘವಾಗಿ ವಿವೇಚಿಸಲಾಗಿದ್ದು, ಜ್ಯೋತಿಷ್ಯಶಾಸ್ತ್ರದಲ್ಲಿಯೇ ಇದೊಂದು ನೂತನ ಸಂಶೋಧನಾಗ್ರಂಥವು.

ಜೀವನ ರಂಗವನ್ನು ಪ್ರವೇಶಿಸುವ ಉದ್ಯೋಗಾರ್ಥಿಗಳಿಗೆ ಸಹಾಯವಾಗುವ, ಜ್ಯೋತಿಷ್ಯಶಾಸ್ತ್ರದ ಆಧಾರದ ಮೇಲೆ ರಚಿತವಾದಂತಹ ಸರಿಯಾದ ಗ್ರಂಥವು ಯಾವುದೊಂದೂ ಈ ವರೆಗೆ ಇರಲಿಲ್ಲ. ಈಗ ಈ 'ಉದ್ಯೋಗ ಜ್ಯೋತಿಷ್ಯ'ವು ಅಂತಹ ಉದ್ಯೋಗಾರ್ಥಿಗಳಿಗೊಂದು ಕೈದೀವಿಗೆಯಾಗಿದೆ.

ಕಾರಕೂನರು, ಟೈಪಿಸ್ಟರು, ಶೀಘ್ರಲಿಪಿಗಾರರು, ಜವಾನರು, ಇನ್ಸ್‌ಪೆಕ್ಟರರು, ಸ್ಟೋರ್‌ಕೀಪರರು, ವೈಜ್ಞಾನಿಕ ವಿಭಾಗದ ನೌಕರರು, ಅಗ್ನಿಶಾಮಕ ದಳದ ಸಿಬ್ಬಂದಿ, ಅರ್ಥಶಾಸ್ತ್ರಜ್ಞರು, ಅಂಕಿಸಂಖ್ಯಾ ತಜ್ಞರು, ಎಂಜನಿಯರುಗಳಲ್ಲಿಯ ಪ್ರಕಾರ ಹಾಗೂ ತಾಂತ್ರಿಕ ಸಿಬ್ಬಂದಿ ಎಂದು ಮುಂತಾಗಿ ವಿವಿಧ ಖಾತೆಗಳಲ್ಲಿ ಇರುವ ಸಾಮಾನ್ಯ ಹುದ್ದೆಗಳೂ ಹಾಗೂ ಸಿವ್ಹಿಲ್ ಸರ್ವಿಸ್, ಮಿಲಿಟರಿ ಸರ್ವಿಸ್, ಆಕಾಶವಾಣಿ, ರೇಲ್ವೆ, ಅಂಚೆ ಮತ್ತು ತಂತಿ, ಸುಂಕ, ಕೇಂದ್ರ ಅಬಕಾರಿ, ವರಮಾನ ತೆರಿಗೆ, ವಾಯುಯಾನೋಡ್ಡಾಣ, ವಿಮಾನದಳ, ಸೈನ್ಯ, ಟಂಕಶಾಲೆ, ಆಡಿಟ ಹಾಗೂ ಅಕೌಂಟ, ಗಣಿ ಹಾಗೂ ಭೂಗರ್ಭ, ಸಚಿವಾಲಯ, ರೆವಿನ್ಯೂ, ಒಕ್ಕಲತನ, ಸಾರ್ವಜನಿಕ ಶಿಕ್ಷಣ, ವೈದ್ಯಕ ಹಾಗೂ ಆರೋಗ್ಯ, ನ್ಯಾಯ, ಪೋಲೀಸ, ಸ್ಟೇಟ ಅಕೌಂಟ್ಸ, ಅರಣ್ಯ, ಪಶುಸಂಗೋಪನ ಹಾಗೂ ಪಶುಸಂಪತ್ತು, ತೋಟಗಾರಿಕೆ, ಕಮರ್ಶಿಯಲ್ ಟ್ಯಾಕ್ಸ್, ಸಹಕಾರ ಹಾಗೂ ಮಾರ್ಕೆಟಿಂಗ, ಕೂಲಿಕಾರ, ಸಮಾಜವಿಕಾಸ ಹಾಗೂ ಕಲ್ಯಾಣ, ಮೀನುಗಾರಿಕೆ, ಚಾರಿಟಿ

ಕಮೀಶನರ, ಪಾನನಿರೋಧ, ಹಾಗೂ ಲಂಚ ನಿರ್ಮೂಲನ, ಜೇಲು, ರೀಜನಲ್ ಟ್ರಾನ್ಸಪೋರ್ಟ, ರಾಷ್ಟ್ರೀಯ ಔದ್ಯೋಗಿಕ, ಬಂದರಗಾಹ, ಆಹಾರ ಪೂರೈಕೆ ಹಾಗೂ ಉತ್ಪಾದನೆ, ಪ್ರಾಚ್ಯವಸ್ತು ಸಂಶೋಧನೆ, ಬ್ಯಾಂಕ್ಸ, ಜೀವ ವಿಮಾ, ಸ್ಟೇಟ್ ಟ್ರಾನ್ಸಪೋರ್ಟ, ವಿಶ್ವವಿದ್ಯಾಲಯ, ಖಾದಿ-ಗ್ರಾಮೋದ್ಯೋಗ, ಪತ್ರಿಕೋದ್ಯಮ ಹಾಗೂ ಕಾರಖಾನೆ, ಗಿರಣಿಗಳು ಮೊದಲಾದ ಭಿನ್ನ ಭಿನ್ನ ಖಾತೆಗಳ ಹುದ್ದೆಗಳನ್ನು ಪಡೆಯುವವನ ಜಾತಕ ಎಂತಿರಬೇಕು ?

ಇದಲ್ಲದೆ ಈ ಗ್ರಂಥದಲ್ಲಿ ನೌಕರಿಗೆ ಸಂಬಂಧಿಸಿದಂತೆ, ನೌಕರಿ ಹತ್ತುವ ಕಾಲ, ಬದಲಿ, ಬಡತಿ, ರಜೆ, ಕಾಯಂ ಆಗುವದು, ಎಕ್ಸ್‌ಟೆನ್ಶನ್, ಮೇಲಿನ ಅಧಿಕಾರಿಗಳ ಕೃಪಾವಕೃಪೆ ಇವುಗಳನ್ನು ಕುರಿತು ಸಹ ವಿವೇಚಿಸಲಾಗಿದೆ.

## ೭. ಉದ್ಯೋಗ ಜ್ಯೋತಿಷ್ಯ ಭಾಗ-೨

### [ವೃತ್ತಿ ಮಾರ್ಗದರ್ಶಿ] ಅಚ್ಚಿನಲ್ಲಿದೆ.

ಈ ಗ್ರಂಥದಲ್ಲಿ ಹೊಲ-ಗದ್ದೆಗಳನ್ನು ಉಳುವ ಬೇಸಾಯಗಾರರು (ಕೃಷಿಕರು), ತೋಟಗಾರರು, ವಕೀಲರು, ವೈದ್ಯ-ಡಾಕ್ಟರ-ಹಕೀಮರು, ಎಲ್ಲಪ್ರಕಾರದ ವ್ಯಾಪಾರಸ್ಥರು, ಮುದ್ರಕರು, ಪ್ರಕಾಶಕರು, ಔಷಧತಯಾರಕರು, ಹಂಚಿಕೆದಾರರು, ಗಿರಣಿ-ಕಾರಖಾನೆ-ಟಾಕೀಜಗಳ ಮಾಲಕ ವರ್ಗದವರು, ಯಂತ್ರ ಸಾಮುಗ್ರಿ ವರ್ಗದವರು, ಕಂಟ್ರಾಕ್ಟರರು (ಗುತ್ತಿಗೆ ವ್ಯವಹಾರಸ್ಥರು) ಕೃಷಿ ಆಧಾರದ ಉದ್ಯೋಗಸ್ಥರು, ಹೈನುಗಾರಿಕೆ ಉದ್ಯೋಗಸ್ಥರು, ಕೋಳಿ-ಕುರಿ-ಜೇನುನೊಣ ಸಾಕಾಣಿಕೆಯವರು, ರೇಶಿಮ ವ್ಯವಸಾಯಸ್ಥರು, ಚಾರ್ಟರ್ಡ್ ಅಕೌಂಟಂಟರು ಕಾಸ್ಟ ಅಕೌಂಟಂಟರು, ವರಮಾನ-ಮಾರಾಟ ತೆರಿಗೆಗಳ ಸಲಹೆಗಾರರು, ಬಡಿಗರು, ಕಮ್ಮಾರರು, ಉಪ್ಪಾರರು, ಸಿಂಪಿಗರು, ಶಿಲ್ಪಿಗಳು (ಆರ್ಕಿಟೆಕ್ಟ), ಹೋಟೆಲ ಒಡೆಯರು, ಬೋರ್ಡಿಂಗ-ಲಾಜಿಂಗ ಮಾಲಕರು ಇವರೇ ಮೊದಲಾದ ಸ್ವತಂತ್ರ ವ್ಯಾಪಾರ-ಉದ್ಯೋಗ ಕೈಕೊಳ್ಳುವವರ ಶಾರೀರಿಕ ಇಲ್ಲವೆ ಬೌದ್ಧಿಕ ಪರಿಶ್ರಮ ವಹಿಸದೆ ಸುಖಿ ಜೀವನವನ್ನು ಸಾಗಿಸುವವರ ಜಾತಕ ಹೇಗಿರುತ್ತವೆ

ಎಂಬುದನ್ನು ಕುರಿತು ಸುದೀರ್ಘವಾಗಿ ವಿವೇಚಿಸಲಾಗಿದೆ. ಅಲ್ಲದೆ ರಾಜಕೀಯ, ಸಾಮಾಜಿಕ ಕ್ಷೇತ್ರಗಳಲ್ಲಿಯ ಗ್ರಾಮಪಂಚಾಯಿತಿ, ನಗರಸಭೆ, ವಿಶ್ವವಿದ್ಯಾಲಯ, ಅಭಿವೃದ್ಧಿ ಮಂಡಳ, ಶಾಲಾ ಬೋರ್ಡ, ವಿಧಾನ ಮಂಡಳ-ವಿಧಾನ ಸಭೆ-ವಿಧಾನ ಪರಿಷತ್ತು-ಸಂಸತ್ತು-ಲೋಕ ಸಭೆ-ರಾಜ್ಯಸಭೆ ಇತ್ಯಾದಿ ರಾಜಕೀಯ ಸಂಘ-ಸಂಸ್ಥೆಗಳ ಆಡಳಿತ ವರ್ಗಗಳ ಸದಸ್ಯರ, ಅಧ್ಯಕ್ಷ-ಚೇರಮನ-ಕಾರ್ಯದರ್ಶಿ-ವ್ಯವಸ್ಥಾಪಕ ವರ್ಗದವರ ಜಾತಕದ ಬಲಾಬಲವನ್ನು ಕುರಿತು ಸಹ ಸುದೀರ್ಘವಾಗಿ ವಿವೇಚಿಸಲಾಗಿದೆ.

## ೮. ಅಧಿಕಾರೀ ಜ್ಯೋತಿಷಿ

ಬೆಲೆ : ರೂ. ೪-೦೦ (ದ್ವಿತೀಯಾವೃತ್ತಿ)

ಈ ಗ್ರಂಥದಲ್ಲಿ ಪೃಚ್ಛಕರಲ್ಲಿಯ ಪ್ರಕಾರಗಳು ಹಾಗೂ ಅವರ ಸ್ವಭಾವ-ನಡೆನುಡಿಗಳು ಹೇಗಿರುವವು, ಫಲಜ್ಯೋತಿಷ್ಯ ಶಾಸ್ತ್ರದ ಮೇಲಿರುವ ಆಕ್ಷೇಪಣೆಗಳಿಗೆ ಉತ್ತರ......ಆಧುನಿಕ ಸಮಾಜದಲ್ಲಿ ಬರುವ ಕ್ಲಿಷ್ಟ ಹಾಗೂ ಸೂಕ್ಷ್ಮಪ್ರಶ್ನೆಗಳನ್ನು ಜ್ಯೋತಿಷಿಗಳು ಪ್ರತಿನಿತ್ಯವೂ ಹೇಗೆ ಎದುರಿಸ ಬೇಕಾಗುತ್ತದೆ ಎಂಬುದರ ನೋಟ......

ಜ್ಯೋತಿಷಿಯು ತನ್ನ ವೃತ್ತಿಯಲ್ಲಿ ಯಶಸ್ವಿಯಾಗಲು ಯಾವ ಆದರ್ಶಗಳನ್ನು ಪಾಲಿಸಬೇಕು, ಎಂತಹ ವ್ಯಕ್ತಿತ್ವವನ್ನು ಹೊಂದಿರಬೇಕು, ಇರಬೇಕಾದ ಗುಣಗಳು, ಪಾಲಿಸಬೇಕಾದ ನಿಯಮಗಳು ಯಾವವು ? ಈ ಮೊದಲಾದ ವಿಷಯವನ್ನು ಕುರಿತು ಸುದೀರ್ಘವಾಗಿ ವಿವರಿಸಲಾಗಿದೆ.

## ೯. ಆರೋಗ್ಯ ಜ್ಯೋತಿಷ್ಯ

ಬೆಲೆ : ರೂ. ೧೨-೦೦ (ದ್ವಿತೀಯಾವೃತ್ತಿ)

ಈ ಗ್ರಂಥದಲ್ಲಿ ಜಾತಕ ನೋಡಿ, ಜಾತಕನಿಗೆ ಯಾವ ಯಾವ ರೋಗಗಳು ಯಾವ ಯಾವಾಗ ಬರುವವು ? ಹಾಗು ಬಂದ ರೋಗಗಳು ಗುಣಮುಖವಾಗುವುದು ಯಾವಾಗ ? ರೋಗನಿದಾನದ ವಿಧಿ-ವಿಧಾನಗಳೇನು? ಔಷಧ ಸೇವಿಸುವ ಕಾಲ, ಶಸ್ತ್ರಚಿಕಿತ್ಸೆಗಳಿಗಾಗಿ ಉತ್ತಮ ಮುಹೂರ್ತಗಳು ಇವೇ ಮುಂತಾಗಿ ರೋಗಿ-ರೋಗ, ಆಯುಷ್ಯ, ದುರ್ಮರಣಾದಿಗಳನ್ನು

ಕುರಿತು ಸುದೀರ್ಘವಾಗಿ, ಸವಿವರವಾಗಿ ಬರೆಯಲ್ಪಟ್ಟ, ಕನ್ನಡದಲ್ಲಿಯೇ ಪ್ರಪ್ರಥಮವಾದ ಸಂಶೋಧನೆ ಗ್ರಂಥವಿದು. ಅರವತ್ತು ರೋಗಗಳ ವಿಷಯವಾಗಿ ಸವಿಸ್ತರ ಜ್ಯೋತಿಷ್ಯಶಾಸ್ತ್ರ ವಿವೇಚನೆ ನಡೆಸಿದುದು ಈ ಗ್ರಂಥದ ವೈಶಿಷ್ಟ್ಯ.

## ೧೦. ಶಿಕ್ಷಣ ಜ್ಯೋತಿಷ್ಯ

ಬೆಲೆ : ರೂ. ೧೫ (ದ್ವಿತೀಯ ಆವೃತ್ತಿ)

ಜಾತಕಗಳ ಮೇಲಿಂದ ಶಿಕ್ಷಣದ ವಿಚಾರ, ಶಿಕ್ಷಣದಲ್ಲಿಯ ಅಡೆ-ತಡೆಗಳ ಸುದೀರ್ಘ ವಿಶ್ಲೇಷಣೆ, ಭಾರತದಲ್ಲಿರುವ ಸುಮಾರು ಎಂಬತ್ತು ವಿಧದ ಶಿಕ್ಷಣ ಕೋರ್ಸುಗಳ ಸವಿಸ್ತಾರ ವಿವರಣೆ, ಪದವಿ, ಸ್ನಾತಕೋತ್ತರ ಪದವಿ, ಡಿಪ್ಲೋಮಾ, ಸರ್ಟಿಫಿಕೇಟ್ ಮುಂತಾದವುಗಳನ್ನು ಎಂಥ ಜಾತಕನು ಅಳವಡಿಸಿಕೊಳ್ಳಬಹುದು ? ಥೇರಿ, ಪ್ರಾತ್ಯಕ್ಷಿಕೆ, ಮೌಖಿಕ, ಬೋರ್ಡ್ ಹಾಗೂ ವಿಶ್ವವಿದ್ಯಾಲಯ, ಸ್ಪರ್ಧಾತ್ಮಕ ಮುಂತಾದ ವಿವಿಧ ಪರೀಕ್ಷೆಗಳಲ್ಲಿ ತೇರ್ಗಡೆ ಯಾಗಲು ಜಾತಕ ಹೇಗಿರಬೇಕು ? ಇತ್ಯಾದಿಯಾಗಿ ವಿದ್ಯಾರ್ಥಿಗಳ ಆಗುಹೋಗಿನ ಮೇಲೆ ಬೆಳಕನ್ನು ಬೀರುವ ಪ್ರಪ್ರಥಮ ಸಂಶೋಧನಾತ್ಮಕ ಜ್ಯೋತಿಷ್ಯ ಗ್ರಂಥವಿದು !

## ೧೧. ಶಕುನ ಜ್ಯೋತಿಷ್ಯ

ಬೆಲೆ : ೧೨-೦೦

ಈ ಗ್ರಂಥದಲ್ಲಿ ಶಕುನ ಶಾಸ್ತ್ರದ ಉತ್ಪತ್ತಿ, ಪ್ರಾಣಿಗಳಿಂದ ಶಕುನಗಳ ವಿಚಾರ, ಸಾಕು ಪ್ರಾಣಿಗಳ ಕಾಲಗುಣ ಹಾಗೂ ಲಕ್ಷಣಗಳ ವಿಚಾರ, ಪಕ್ಷಿಗಳಿಂದ ಶಕುನಗಳ ವಿಚಾರ, ಕೀಟಕಗಳಿಂದ ಶಕುನಗಳ ವಿಚಾರ, ಸೀನಿನ ಶಕುನಗಳು, ಜನನ ಮರಣಗಳ ಶಕುನಗಳು, ಮಳೆ ಹಾಗೂ ಜಲಸಿದ್ಧಿಯ ಶಕುನಗಳು, ಉಪ್ಪಿನ ಶಕುನಗಳು, ಅಂಗಾಂಗಗಳ ಶಕುನಗಳ ವಿಚಾರ, ಪಾಶ್ಚಿಮಾತ್ಯರಲ್ಲಿಯ ಶಕುನಗಳ ವಿಚಾರ, ಪ್ರವಾಸ ಕೈಕೊಳ್ಳುವ ಸಮಯದಲ್ಲಿಯ ಶಕುನಗಳು, ರೂಢಿ, ನಂಬಿಕೆ, ಪ್ರವಾಸ ಸಂಪ್ರದಾಯಗಳ ವಿಚಾರ

ಸ್ವಪ್ನಗಳ ಶಕುನಗಳು, ಅನುಭವ ಸಿದ್ಧ ಶಕುನಗಳು ಹೀಗೆ ಶಕುನ ವಿಷಯ ವಾಗಿ ಸುದೀರ್ಘವಾಗಿ ಸವಿವರವಾಗಿ ಬರೆಯಲ್ಪಟ್ಟ ಕನ್ನಡದಲ್ಲಿಯೇ ಪ್ರಪ್ರಥಮವಾದ ಸಂಶೋಧನಾತ್ಮಕ ಗ್ರಂಥವಿದು.

## ೧೨. ಚುನಾವಣೆಯ ಜ್ಯೋತಿಷ್ಯ

ಬೆಲೆ : ರೂ. ೪-೦೦

ಈ ಗ್ರಂಥದಲ್ಲಿ ಚುನಾವಣೆಯಲ್ಲಿಯ ಸೋಲು-ಗೆಲವುಗಳನ್ನು ವಿಶ್ಲೇಷಿಸುವಾಗ ಅಭ್ಯರ್ಥಿಗಳ ಪ್ರಭಾವ, ಪ್ರಚಾರದ ಪ್ರಭಾವ, ಆರ್ಥಿಕ ಬಲ, ಹಿಂದಿನ ಸಾಧನೆ,ಸ್ಥಳೀಯ-ರಾಷ್ಟ್ರೀಯ ಸಮಸ್ಯೆಗಳ ಪ್ರಭಾವ ಮೊದ ಲಾದ ಚುನಾವಣೆಯ ಸಮಯದಲ್ಲಿ ಇರುವ ಸಮಸ್ಯೆಗಳನ್ನು ಜ್ಯೋತಿಷ್ಯ ದೃಷ್ಟಿಯಿಂದ ವಿವೇಚಿಸಲಾಗಿದ್ದಲ್ಲದೆ, ರಾಜಕೀಯ, ಸ್ಥಾನಿಕ, ಶೈಕ್ಷಣಿಕ, ಸಹಕಾರ, ಸಾಂಸ್ಕೃತಿಕ, ಧಾರ್ಮಿಕ, ಕಾರ್ಮಿಕ, ವೃತ್ತಿ ಸೇವಾ ಸಂಘ- ಸಂಸ್ಥೆ ಮೊದಲಾದ ಎಲ್ಲ ಬಗೆಯ ಚುನಾವಣೆಯ ಪ್ರಕಾರಗಳನ್ನು ವಿವೇಚಿಸಿ, ಚುನಾವಣೆಯ ಪೂರ್ವ ಹಾಗೂ ನಂತರದ ಸಮಸ್ಯೆಗಳಾದ—ಯಾವ ಪಕ್ಷ ದಿಂದ ಸ್ಪರ್ಧಿಸಬೇಕು ? ಇಚ್ಛಾನುಸಾರದ ಪಕ್ಷದ ತಿಕೀಟು ಲಭಿಸಬಹುದೇ ? ಸ್ಪರ್ಧೆಯಲ್ಲಿಯ ಬಗೆ, ಆಯ್ಕೆಯಲ್ಲಿಯ ಪ್ರಕಾರ, ಚುನಾವಣಾ ತಂಟೆ ಪಕ್ಷಾಂತರದ ಅವಾಂತರ, ಅಧಿಕಾರ ಸ್ಥಾನ ಯಾರಿಗೆ ಲಭಿಸುವದು—ಇವೇ ಮೊದಲಾದ ವಿಷಯಗಳನ್ನು ವಿವೇಚಿಸಿರುವದಲ್ಲದೆ ೧೮೭೫ ರಿಂದ ೧೯೫೫ ರೊಳಗೆ ಜನಿಸಿದ ವ್ಯಕ್ತಿಗಳ ಚುನಾವಣೆ ಹೇಗಾಗುತ್ತದೆ. ಹಾಗೂ ಮುಂಬರುವ ಇಪ್ಪತ್ತು ವರುಷಗಳ ಕಾಲ ಯಾವ ರಾಶಿಯವರಿಗೆ ಹೇಗಿದೆ ? ಇತ್ಯಾದಿ ಚುನಾವಣೆಗೆ ಸಂಬಂಧಿಸಿ ವಿಷಯಗಳ ಮಾದರಿಯ ಜಾತಕದೊಂದಿಗೆ ಸುದೀರ್ಘ ವಿಶ್ಲೇಷಣೆಯ ಪ್ರಪ್ರಥಮ ಸಂಶೋಧನಾತ್ಮಕ ಗ್ರಂಥವಿದು.

## ೧೩. ಪಂಚಾಂಗ ಪ್ರದೀಪ

ಬೆಲೆ : ರೂ. ೪-೦೦ (ತೃತೀಯಾವೃತ್ತಿ)

ಹಿಂದೂ ಜೀವನದ ಅವಿಭಾಜ್ಯ ಅಂಗವಾದ ಪಂಚಾಂಗದ ಕೈಪಿಡಿ ಇದು. ಈ ಪುಸ್ತಕದಲ್ಲಿ ಪಂಚಾಂಗವೆಂದರೇನು ? ಪಂಚಾಂಗವನ್ನು ಹೇಗೆ

ನೋಡಬೇಕು ? ತಿಥಿಗಳನ್ನು ನಿರ್ಣಯಿಸುವುದು ಹೇಗೆ ? ನಿತ್ಯ ನಕ್ಷತ್ರ ಹೇಗೆ ಕಂಡುಹಿಡಿಯಬೇಕು? ಮೊದಲಾದ ವಿಷಯಗಳನ್ನು ವಿವೇಚಿಸಲಾಗಿದೆ.

## ೧೪. ಗ್ರಹಗತಿ

ಬೆಲೆ : ರೂ. ೫-೦೦ (ದ್ವಿತೀಯಾವೃತ್ತಿ)

ಈ ಗ್ರಂಥದಲ್ಲಿ ಗ್ರಹಗಳ ಗೋಚರೀ ಫಲಗಳಾವವು ? ಗ್ರಹಗತಿಯನ್ನು ಹೇಗೆ ನೋಡಬೇಕು ? ವೃತ್ತಪತ್ರಿಕೆಗಳಲ್ಲಿಯ ನಿಯತಕಾಲಿಕ ರಾಶಿಭವಿಷ್ಯವನ್ನು ಹೇಗೆ ಬರೆಯುವರು ? ಹೇಗೆ ಬರೆಯಬೇಕು ? ವೃತ್ತಪತ್ರಿಕೆಗಳಲ್ಲಿಯ ವಿಭಿನ್ನತೆಗೆ ಕಾರಣಗಳೇನು? ಆಯಾ ರಾಶಿಯವರಿಗೆ ಶುಭಾಶುಭ ಅವಧಿಗಳು ಪ್ರತಿವರ್ಷ ಯಾವವು ? ಈ ಮೊದಲಾದ ಗ್ರಹಗಳ ಗೋಚರೀ ಫಲಗಳ ವಿಷಯವಾಗಿ ವಿವೇಚಿಸಿದ ಪುಸ್ತಕ.

ಪ್ರಕಾಶಕರು :

**ಶ್ರೀ. ಎನ್. ಕೆ. ಜೋಗಳೇಕರ**

**ತೇಜಸ್ವಿನಗರ-ಧಾರವಾಡ-೨**

## ತೀವ್ರ ಪ್ರಕಟವಾಗಲಿರುವ ನಕ್ಷತ್ರಗಳು

★ ಸಂಹಾರ ಜ್ಯೋತಿಷ್ಯ (ಅಚ್ಚಿನಲ್ಲಿ) ★ ಗ್ರಹದರ್ಶನ

★ ಗ್ರಹಯೋಗ ★ ದಶಾದರ್ಪಣ ★ ಕುಂಡಲೀ ಸಂಗ್ರಹ

★ ಶರೀರ ಲಕ್ಷಣಜ್ಯೋತಿಷ್ಯ ★ ಪ್ರಸೂತಿ ಜ್ಯೋತಿಷ್ಯ

★ ವ್ಯವಸಾಯ ಜ್ಯೋತಿಷ್ಯ

---